ಮನೆಮಂದಿಗೆಲ್ಲ ಮುದ ನೀಡುವ ಮಾಸಿಕ

# ಕಸ್ತೂರಿ



ಅಕ್ಟೋಬರ

೧೯೯೭

ಹೀಗೊಂದು 'ಪುಕ್ಕಟೆ ನಿಧಿ' ಪ್ರಸಂಗ



ಬೆಲೆ: ಆರು ರೂ

## ಗಗನ ಭೇದಿ....



• ಚಿತ್ರ 'ಕಸ್ತೂರಿ'ಯ ಸಂಗ್ರಹದಿಂದ



# ಕಸ್ತೂರಿ

ಕನ್ನಡ ಡೈಜೆಸ್ಟ್


ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎಸ್.ವಿ. ಜೋಶಿ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ

ಮುಖಪುಟ ಚಿತ್ರ:
ಕಸ್ತೂರಿಯ
ಸಂಗ್ರಹದಿಂದ

'ಕಸ್ತೂರಿ' ಕಾರ್ಯಾಲಯ,
ಕೊಪ್ಪೀಕರ ರಸ್ತೆ,
ಹುಬ್ಬಳ್ಳಿ - ೫೮೦ ೦೨೦




## ಚಿಂತನ

ಹಿಂದೆ, 'ಹಳ್ಳಿಹಳ್ಳಿಗೂ ರೇಡಿಯೋ ನೀಡಿದ್ದೇವೆ' ಎಂದು ಸರಕಾರ ಬಡಾಯಿ ಕೊಚ್ಚಿಕೊಳ್ಳುತ್ತಿದ್ದಾಗ ಆದ್ಯ ರಂಗಾಚಾರ್ಯರು, "ಇದ್ದೀತು, ಆದರೆ ಆ ಹಳ್ಳಿಗರು ಕೇಳುವುದು ಬರಿ ಸಿನೆಮಾ ಹಾಡುಗಳನ್ನು ತಾನೆ?" ಎಂದಿದ್ದರು. ಈ ಮಾತನ್ನು ಇಂದು ಟೆಲಿವಿಜನ್ನಿಗೂ ಅನ್ವಯಿಸಬಹುದೇನೋ.

ಟೆಲಿವಿಜನ್ನಿನಲ್ಲಿ ಒಳ್ಳೆಯ ಕಾರ್ಯಕ್ರಮಗಳು ಇರುವುದಿಲ್ಲವೆಂದಲ್ಲ, ಇರುತ್ತವೆ. ಆದರೆ ಅಂಥಾ ಕಾರ್ಯಕ್ರಮಗಳು ಬಂದ ಕೂಡಲೆ ಟಿ.ವಿ.ಯನ್ನು ಆಫ್ ಮಾಡಿ ಸಿನೇಮಾನೋ ಅಥವಾ ಪ್ರಣಯಭರಿತ ಸನ್ನಿವೇಶಗಳೋ ಬರುವಾಗ ಅದನ್ನು ಮತ್ತೆ ಆನ್ ಮಾಡುವವರೇ ಹೆಚ್ಚು, ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ ಎನ್ನುವುದು ಸುಳ್ಳಲ್ಲ. ಹಿರಿಯರಾದವರೇ ಇಂಥ ವಿಷಯಗಳಲ್ಲಿ ಆಸಕ್ತಿ ವಹಿಸಿದಾಗ ಕಿರಿಯರಾದವರೂ ಅದರಲ್ಲಿ ಆಸಕ್ತಿ ವಹಿಸಿದರೆ ತಪ್ಪೇನು? ಕಿರಿಯರು ಸುಧಾರಿಸಬೇಕೆಂದರೆ ಅದಕ್ಕಿಂತ ಮೊದಲು ಹಿರಿಯರು ಸುಧಾರಿಸಬೇಕು. ಪರೋಪದೇಶ ಪಾಂಡಿತ್ಯಕ್ಕೀಗ ಕಾಲವಿಲ್ಲ.

ಟೆಲಿವಿಜನ್ನಿನಲ್ಲಿ ಜ್ಞಾನವನ್ನೂ ಅದೇ ಕಾಲಕ್ಕೆ ಮನರಂಜನೆಯನ್ನೂ ಒದಗಿಸಬಲ್ಲ ಕಾರ್ಯಕ್ರಮಗಳು ಸಾಕಷ್ಟು ಸಂಖ್ಯೆಯಲ್ಲಿ ಬರುತ್ತಿವೆ. ಅವುಗಳನ್ನು ನೋಡಿ ಮನಸ್ಸಿನ ಆಯಾಸವನ್ನು ಪರಿಹರಿಸಿಕೊಳ್ಳುವುದಲ್ಲದೆ ಜ್ಞಾನದ ಪರಿಧಿಯನ್ನೂ ವಿಸ್ತರಿಸಿಕೊಳ್ಳಬಹುದು. ಮನಸ್ಸು ಮಾಡಿದರೆ ಇಡಿ ವಿಶ್ವಕೋಶವನ್ನೇ ತಲೆಯಲ್ಲಿ ತುಂಬಿಕೊಳ್ಳಬಹುದು. ನಿಜವಾಗಿಯೆಂದರೆ ಬೌದ್ಧಿಕ ಮಟ್ಟವನ್ನು ಹೆಚ್ಚಿಸಿಕೊಳ್ಳುವುದಕ್ಕೆ ಟಿವಿಗಿಂತ ಒಳ್ಳೆಯದಾದ ಸಾಧನ ಇನ್ನೊಂದಿಲ್ಲ.

ಆದರೆ ಈಗ ಆಗುತ್ತಿರುವುದೇನು? ಟೆಲಿವಿಜನ್ನು 'ಮೂರ್ಖರ ಪೆಟ್ಟಿಗೆ'ಯಾದರೆ, ಆ ಮೂರ್ಖರ ಪೆಟ್ಟಿಗೆಯಿಂದ ಬರುವ ಒಳ್ಳೆಯ ಕಾರ್ಯಕ್ರಮಗಳನ್ನು ಬಿಟ್ಟು ಬೇರೆಯೆ ತೆರನಾದ ಕಾರ್ಯಕ್ರಮಗಳನ್ನು ನೋಡುವವರಿಗೆ ಏನನ್ನಬೇಕು?

*❍ ವ್ಯವಸ್ಥಾಪಕ ಸಂಪಾದಕ*

# ಪತ್ರಚಿಂತನ

## ಮನಸ್ಸಿನ ಮಹಿಮೆ

'ಕಸ್ತೂರಿ'ಯ ಸೆಪ್ಟೆಂಬರ್ ಸಂಚಿಕೆಯಲ್ಲಿ ಪ್ರಕಟವಾದ ಪ್ರೊ. ಶ್ರೀನಿವಾಸ ತೋಫಖಾನೆಯವರ 'ಮನ (ಸು) ಸಮನವಾಗಲಿ' ಲೇಖನ ಮನಸೆಳೆಯಿತು. ಮನಸ್ಸು ವಜ್ರಕ್ಕಿಂತ ಕಠೋರ, ಹೂವಿಗಿಂತ ಮೃದು, ಅದನ್ನು ಅರಿಯುವುದು ಸುಲಭದ ಮಾತಲ್ಲ ಎಂಬುದನ್ನು ಲೇಖಕರು ಚೆನ್ನಾಗಿ ವಿವರಿಸಿದ್ದಾರೆ.

ಬೆಳಗಾವಿ ರೂಪಾ ಮರಿಗೇರಿ

## ಬೆಕ್ಕಿನ ನಿದ್ದೆ

'ಬೆಕ್ಕಿನ ನಿದ್ದೆಯ ರಹಸ್ಯ' ('ಕಸ್ತೂರಿ' ಆಗಸ್ಟ್) ಲೇಖನದಲ್ಲಿ ಅಡೆನೋಸಿನ್ ಎಂಬ ರಾಸಾಯನಿಕವೇ ನಿದ್ದೆಗೆ ಕಾರಣ ಎಂದು ಹೇಳಲಾಗಿದೆಯಷ್ಟೆ. ಮಿದುಳು ತಂತಾನೆ ಈ ರಾಸಾಯನಿಕವನ್ನು ಸ್ರವಿಸಿದಾಗಲೆ ಸ್ವಾಭಾವಿಕ ನಿದ್ರೆ ಬಂದೀತು. ಆದರೆ ಬೇರೊಂದು ರಾಸಾಯನಿಕದ ಪ್ರಯೋಗದಿಂದ ಉತ್ಪನ್ನವಾದ ಅಡೆನೋಸಿನ್ನಿನಿಂದ ಬಂದ ನಿದ್ದೆ ಸ್ವಾಭಾವಿಕ ಸುಖನಿದ್ದೆ ಹೇಗಾದೀತು? ಇದರ ನಿರಂತರ ಉಪಯೋಗ ದೇಹದ ಮೇಲೆ ದುಷ್ಪರಿಣಾಮ ಬೀರದಿರದೆ?

ಭೀಮಸಮುದ್ರ ಬಿ.ಎಂ. ನಾಗಭೂಷಣ

## ಇಷ್ಟು ಮರೆಗುಳಿಯೆ?

'ಕಸ್ತೂರಿ'ಯ ಸೆಪ್ಟೆಂಬರ್ ಸಂಚಿಕೆಯ ವಿದ್ಯಾರ್ಥಿ ಅಂಕಣದಲ್ಲಿ 'ಮರೆಗುಳಿ ಅಧ್ಯಾಪಕ'ರಾದ ಗಣಿತಜ್ಞ ನಾಬರ್ಟ್ ವೀನರರ ಬಗೆಗೆ ಒಂದು ಕಿರುಬರಹ ಪ್ರಕಟವಾಗಿದೆ. ಅದರಲ್ಲಿ, ವೀನರರು ತಮ್ಮ ಹಳೆಯ ಬಾಡಿಗೆಮನೆ ಬಿಟ್ಟು ಹೊಸ ಮನೆಯನ್ನು ಬಾಡಿಗೆ ಹಿಡಿದರು. ಅಂದು ನಿತ್ಯದ ಕೆಲಸ ಮುಗಿಸಿಕೊಂಡು ಹಳೆಮನೆಗೆ ಸಾಯಂಕಾಲ ಹೋದಾಗ ಆ ಮನೆಗೆ ಬೀಗಹಾಕಿದ್ದನ್ನು ನೋಡಿದರು. ಆಗಲೆ ಅವರಿಗೆ ಮನೆ ಬದಲಾಯಿಸಿದ್ದು ನೆನಪಾಯಿತು. ಆದರೆ ಆ ಹೊಸ ಮನೆಯ ನಂಬರು ನೆನಪಾಗಲಿಲ್ಲ ಒಬ್ಬ ಬಾಲಿಕೆ ದಾರಿಯಲ್ಲಿ ಬರುತ್ತಿರುವುದನ್ನು ಕಂಡು, ಆ ಬಾಲಿಕೆಗೆ, 'ವೀನರರು ಬಂದಿರುವ ಮನೆ ಎಲ್ಲಿದೆ? ಎಂದು ಕೇಳಿದರು. ಆಗ ಆ ಮಗು, '' ಬನ್ನಿ ಡ್ಯಾಡಿ, ನಿಮ್ಮನ್ನು ಮನೆಗೆ ಕರೆದುಕೊಂಡು ಹೋಗುವೆ," ಎಂದಿತು ಎಂದಿದೆ. ಅಂತಹ ಮೇಧಾವಿಗೆ ತಮ್ಮ ಮಗಳನ್ನೂ ಗುರುತಿಸಲು ಆಗಲಿಲ್ಲವೆ? ಹೇಗೆ ನಂಬುವುದು?

ಗೋಗಿ ಮಲ್ಲಿಕಾರ್ಜುನ ಗಜ್ಜಿ

(ಸದಾ ಸಂಶೋಧನೆಯಲ್ಲಿ ತೊಡಗಿಕೊಂಡಿರುವ ಪ್ರಗಲ್ಭಮತಿಗಳಿಗೆ ಒದಗುವ ಗತಿಯೇ ಇಷ್ಟು!-ಸಂ.)

## ಸುಂದರಿಗೆ ಸುರಾಪಾನ!

ಪ್ರೊ. ತಿಪ್ಪೇಸ್ವಾಮಿಯವರು ಬರೆದ ಡಾ. ಪಾರ್ಶ್ವನಾಥರ ವ್ಯಕ್ತಿಚಿತ್ರ ಸುಂದರಿಗೆ ಸುರಾಪಾನ ಮಾಡಿಸಿದಂತಿತ್ತು. ವೃತ್ತಿಯಿಂದ ವೈದ್ಯರಾದರೂ ಸಾಹಿತ್ಯದ, ಅಭಿನಯದ ಅಭಿರುಚಿಯನ್ನು ಇಷ್ಟುಮಟ್ಟಿಗೆ ಬೆಳೆಸಿಕೊಂಡಿರುವ ಡಾ. ಪಾರ್ಶ್ವನಾಥ್ ಅಭಿನಂದನಾರ್ಹರೇ ಸರಿ. ಭಲೆ ಪಾರ್ಶ್ವನಾಥ್, ಹೀಗೆಯೆ ಮುಂದುವರೆಯಿರಿ ಹಾಗೂ ಯುವ ಕನ್ನಡಾಭಿಮಾನಿಗಳಿಗೆ ಮಾರ್ಗದರ್ಶಕರಾಗಿರಿ.

ಬಾಗಿಬಾಳು ಬಾ.ನಂ. ಲೋಕೇಶ

## ಏನೀ ಎ.ಕೆ. ವೈಶಿಷ್ಟ್ಯ

ಕೆ.ಬಿ. ಬೊಮ್ಮನಾಳರ ಲೇಖನದಲ್ಲಿ ಕೆಲವು ತಪ್ಪುಗಳು ನುಸುಳಿಕೊಂಡಿವೆ. ಎಕೆ.ಯಲ್ಲಿ ಉಪಯೋಗಿಸಲಾಗುವ ಸಿಡಿಮದ್ದಿಗೂ ಬಂದೂಕಿನಲ್ಲಿ ಬಳಸಲಾಗುವ ಸಿಡಿಮದ್ದಿಗೂ ವ್ಯತ್ಯಾಸವೇನಿಲ್ಲ. ಕಾರ್ಟ್ರಿಜ್ ಮಾತ್ರ ಇನ್ನುಳಿದ ಬಂದೂಕುಗಳಲ್ಲಿ ಉಪಯೋಗಿಸುವ ಕಾರ್ಟ್ರಿಜ್‌ನಿಂತ ಭಿನ್ನವಾಗಿದ್ದು ಇದರ ವೇಗ ಪ್ರತಿ ಸೆಕೆಂಡಿಗೆ ೭೧೫ ಮೀಟರುಗಳಷ್ಟಿದೆ. ಸಿಡಿಮದ್ದಿನ ತೂಕ ೪.೮ ಕಿಲೋ ಎಂದಿದ್ದಾರೆ ಲೇಖಕರು. ಆದರೆ ಎ.ಕೆ.ಯ ಒಟ್ಟು ತೂಕವೇ ೩.೮ ಕಿಲೋ ಇದ್ದು ಇದರಲ್ಲಿ ೩೦ ಕಾರ್ಟ್ರಿಜ್‌ಗಳುಳ್ಳ ಒಂದು ಮ್ಯಾಗಜೀನಿನ (೦.೮೨೦ ಕಿಲೋ) ತೂಕವೂ ಸೇರಿದೆ. ಇದರಲ್ಲಿ ಗುಂಡು ಖಾಲಿಯಾದ ನಂತರ ತನ್ನಷ್ಟಕ್ಕೆ ತುಂಬಿಕೊಳ್ಳುವ ಯಾವ ಸೌಲಭ್ಯವೂ ಇಲ್ಲ. ಖಾಲಿಯಾದ ಮ್ಯಾಗಜೀನನ್ನು ತೆಗೆದು ಮತ್ತೆ ತುಂಬಿಸಬೇಕಾಗುತ್ತದೆ.

ಇದನ್ನು ವೈರಿಗಳ ಕಣ್ಣಿಗೆ ಕಾಣದಂತೆ ಮುಚ್ಚಿಟ್ಟುಕೊಳ್ಳಬಹುದು. ಪ್ರಪಂಚದಲ್ಲಿ ಈ ಬಂದೂಕನ್ನೀಗ ಒಟ್ಟು ಹತ್ತೊಂಭತ್ತು ದೇಶಗಳು ತಯಾರಿಸುತ್ತಿದ್ದು, ಯಾವುದೇ ಪರಿಸ್ಥಿತಿಯಲ್ಲಿ ಅತ್ಯುತ್ತಮ ಉಪಯೋಗಕ್ಕಿದು ಪ್ರಸಿದ್ಧವಾಗಿದೆ.

ದಾವಣಗೆರೆ (ಆವರಗೊಳ್ಳ) ಓ.ಬಿ. ಶಶಿಕಾಂತ

ಮುಸರಹಳ್ಳಿ ಜಿ. ಶೇಖರ್

## ಖಂಡಿತ ಮಾನವೀಯತೆಯಲ್ಲ

ಡಾ. ಸಂಧ್ಯಾ ದಾಸ್ (ಸೆಪ್ಟೆಂಬರ್) ದುರಂತಮಯ ಬದುಕಿನ ಬಗೆಗೆ ಓದುತ್ತಿದ್ದಂತೆಯೇ ಸತ್ಯಸಂಧರಿಗಿದು ಕಾಲವಲ್ಲ ಅನ್ನಿಸಿತು. ಬಡವರಾಗಿಯೆ ಜೀವನ ಸಾಗಿಸುವುದು ಅಷ್ಟೊಂದು ಕಷ್ಟದ್ದಲ್ಲ. ಆದರೆ ಕುಬೇರನಂತೆ ಮೆರೆದು ಕೊನೆಗೆ ಆಳಿಗಿಂತ ಕಡಿಮೆ ಮೌಲ್ಯವುಳ್ಳವರಾಗಿರುವುದು ಬಹು ವ್ಯಥೆಯ ವಿಚಾರ. ಸಂಧ್ಯಾಳ ಜೀವನದ ಬಗ್ಗೆ ಎಲ್ಲರೂ ನಿರ್ಲಕ್ಷ ತೋರಿಸಿದ್ದು ಖಂಡಿತ ಮಾನವೀಯತೆಯಲ್ಲ.

ಶಾಂತಿಗೋಡು (ದ.ಕ) ವಿಷ್ಣುಗುಪ್ತ, ಪುಣಚ

## ಅದು ಬೇರೆ, ಇದು ಬೇರೆ

ಅಗಸ್ಟ್ ತಿಂಗಳ 'ಜ್ಞಾನನಿಧಿ'ಯನ್ನು 'ಅಜ್ಞಾನನಿಧಿ' ಎಂದು ಕರೆಯಲಡ್ಡಿಯಿಲ್ಲ. ಏಕೆಂದರೆ 'ಚಿರತೆ'ಗೂ ಚೀತಾ (ಚಿರ್ಚು)ಗೂ ವ್ಯತ್ಯಾಸ ಗೊತ್ತಿಲ್ಲದ ಲೇಖಕರ ಮತ್ತು ನಿಮ್ಮ ಸಂಪಾದಕೀಯ ವಿಭಾಗದಿಂದಾಗಿ ಕನ್ನಡದ ಮಕ್ಕಳೆಲ್ಲ ಇದನ್ನು ಓದಿ ತಪ್ಪು ಜ್ಞಾನವನ್ನು ಪಡೆಯುವಂತಾಗಿದೆ. ಕೊಟ್ಟಿರುವ ಚಿತ್ರ 'ಚೀತಾ' ಪ್ರಾಣಿಯದು. ಇದು ಭಾರತದಲ್ಲಿಲ್ಲ. ಆಫ್ರಿಕದಲ್ಲಿ ಅಳಿವಿನಂಚಿನಲ್ಲಿದೆ. ಬರಹದುದ್ದಕ್ಕೂ ಚಿರತೆ ಎಂದು ವಿವರಿಸಲಾದ ಪ್ರಾಣಿ ಚಿರತೆಯ ಕುರಿತೋ ಅಥವಾ ಚೀತಾ ಕುರಿತೋ?

ಶಿವಮೊಗ್ಗ ಎಂ.ಎಸ್. ಹೆಬ್ಬಾರ್

[ಇಂಗ್ಲೀಷಿನ 'ಲೆಪರ್ಡ್' ಎನ್ನುವುದಕ್ಕೆ ಚಿರತೆ, ಚಿರ್ಚ ಎಂದು ಭಾರದ್ವಾಜ ಶಬ್ದಕೋಶವೂ (ಪುಟ ೪೨೬) ಹಿಂದಿಯ ಚೀತಾ ಎನ್ನುವುದಕ್ಕೆ ಚಿರ್ಚು, ಕಿರುಬ ಎಂದು ಪಂಡಿತ ಜೆ.ಡಿ. ಮೈಸಾಳೆಯವರ ಹಿಂದಿ-ಕನ್ನಡ ಶಬ್ದಕೋಶವೂ (ಪುಟ ೨೪೯) ಚಿರತೆ ಎನ್ನುವುದಕ್ಕೆ A Cheeta or hunting leopard ಎಂದು ಬುಚರ್ ಶಬ್ದಕೋಶವೂ (ಪುಟ ೨೦೧) ಹೇಳುತ್ತಿರುವಾಗ ನಮಗಾದರೂ ಏನು ಮಾಡಲಾದೀತು? ಬಹುಶಃ ನೀವು ಸೂಚಿಸಿದ ಪ್ರಾಣಿ ಚಿರತೆಯ ಪ್ರಭೇದವಾಗಿರಬೇಕು. ಸಂ.]

## ಉಪಯುಕ್ತ

ಆಯುರಾರೋಗ್ಯಕ್ಕೆ ಸಂಬಂಧಿಸಿದ ಲೇಖನಗಳನ್ನು ಪ್ರಕಟಿಸುವಲ್ಲಿ 'ಕಸ್ತೂರಿ' ಯಾವಾಗಲೂ ಮುಂದು ಎನ್ನುವುದಕ್ಕೆ ಅದು ಪ್ರತಿ ತಿಂಗಳೂ ಪ್ರಕಟಿಸುವ ಆರೋಗ್ಯದಂಗಳವೇ ಸಾಕ್ಷಿ. ಈ ಬಾರಿಯ ಡಾ.ಡಿ.ಕೆ. ಮಹಾಬಲರಾಜು ಅವರ 'ವಿಪತ್ಕಾರಿ ವಿಷಮಜ್ವರ'ದ ಬಗೆಗಿನ ಲೇಖನ ಅತ್ಯಂತ ಮಾಹಿತಿಪೂರ್ಣವಾಗಿತ್ತು. ರೋಗವನ್ನು ನಿಯಂತ್ರಿಸಲು ಕೈಗೊಳ್ಳಬೇಕಾದ ಕ್ರಮಗಳು ಹಾಗೂ ರೋಗಬಂದಾಗ ನೀಡಬೇಕಾಗುವ ಔಷಧೋಪಚಾರದ ಬಗ್ಗೆ ಲೇಖಕರು ಬಹು ಚೆನ್ನಾಗಿ ವಿವರಿಸಿದ್ದಾರೆ.

## ಸರಸ್ವತೀ ದೇವಿಯ ಮಾಯಾಜಾಲ

ಸೆಪ್ಟೆಂಬರ್ ಸಂಚಿಕೆಯಲ್ಲಿ 'ಅರುಣ'ರ 'ಸರಸ್ವತೀದೇವಿಯ ಮಾಯಾಜಾಲ' ಓದಿ ಆಶ್ಚರ್ಯದಿಂದ ಸ್ತಂಭಿತನಾದೆ.

ಘನವಾದ ಆಧ್ಯಾತ್ಮಿಕತೆಯನ್ನು ರಾಮಕುಮಾರ ನಂಥವರು ದೊಂಬರಾಟವಾಗಿ ಪರಿವರ್ತಿಸಿ ಜನಸಾಮಾನ್ಯರಲ್ಲಿ ಅಧ್ಯಾತ್ಮದ ಬಗ್ಗೆಯಃಕಶ್ಚಿತವಾದ ಭಾವನೆಯನ್ನು ಮೂಡಿಸುತ್ತಿದ್ದಾರೆ.

ಇಂಥವರಿಂದಲೇ ಅಧ್ಯಾತ್ಮ ದೇವರುಗಳೆಲ್ಲ ಅನೇಕರ ದೃಷ್ಟಿಯಲ್ಲಿ ನಗೆಚಾಟಿಕೆಯ ವಿಷಯಗಳಾಗಿವೆ. ಲಖನೋದ ವಿಜ್ಞಾನಿಗಳು ಸರಸ್ವತಿದೇವಿಯ ಕಪಟವನ್ನು ಬಯಲಿಗೆಳೆಯುವ ಮೂಲಕ ಶ್ಲಾಘನೀಯ ಕೆಲಸವನ್ನು ಮಾಡಿದ್ದಾರೆ.

ಗಳತಗಾ ಗಾಯತ್ರೀನಂದ

## ಮಕ್ಕಳಿವರೇನಮ್ಮ!

'ಕಸ್ತೂರಿ'ಯ ಸೆಪ್ಟೆಂಬರ್ ಸಂಚಿಕೆಯಲ್ಲಿ ಪ್ರಕಟವಾದ ಎಸ್.ಸಿ. ಶಿವನಂಜಪ್ಪ ಅವರ ''ಮಕ್ಕಳಿವರೇನಮ್ಮ!' ಓದಿ ಆಘಾತವೇ ಆಯಿತು. ಮೇಲುನೋಟಕ್ಕೆ ಹರಟೆಯಂತೆ ಕಾಣುವ ಈ ಲೇಖನ ಪಾಶ್ಚಾತ್ಯ ಸಂಸ್ಕೃತಿಯ (ಕು) ರೂಪದರ್ಶನ ಮಾಡಿಸುತ್ತದೆ. ಮಾತೃದೇವೋ ಭವ, ಪಿತೃದೇವೋಭವ ಎಂದು ಘೋಷಿಸುವ ಈ ದೇಶದ ಸಂಸ್ಕೃತಿಯಲ್ಲಿ ಪಾಲಕರ ಹಾಗೂ ಮಕ್ಕಳ ಸಂಬಂಧ ಇಂದಿಗೂ ಅರ್ಥಪೂರ್ಣವಾಗಿ ಉಳಿದುಕೊಂಡು ಬಂದಿದೆ. ಆದರೆ ಇಂದು ಪಾಶ್ಚಾತ್ಯರಲ್ಲಿ ಮಾನವೀಯ ಸಂಬಂಧಗಳು ಹೇಗೆ ಮುರುಟಿಕೊಂಡಿವೆ ಎಂಬುದು ಇಂತಹ ಲೇಖನಗಳಿಂದ ವೇದ್ಯ. ತಂದೆಯ ಶವಸಂಸ್ಕಾರವನ್ನು ಅದ್ದೂರಿಯಿಂದ ಮಾಡುವ ಮೂಲಕ ಪಿತೃಋಣ ತೀರಿಸಬಯಸುವ ಮಗ, ಕನಿಷ್ಠ ಪಕ್ಷ ಮಗ ಹೆಣ್ಣೊಂದನ್ನು ಮದುವೆಯಾದರೆ, ಮಗಳು ಗಂಡೊಂದನ್ನು ಮದುವೆ ಯಾದರೆ ಸಾಕು ಎಂದು ಬಯಸುವ ತಂದೆತಾಯಿಗಳು ಇಂದು ಪಾಶ್ಚಾತ್ಯದೇಶಗಳಲ್ಲಿರುವ ಸಂಸ್ಕೃತಿಯ ನಿಜವಾದ ದರ್ಶನ ಮಾಡಿಸುತ್ತಾರೆ. ಅಬ್ಬ! ಇಂಥ ಸಂಸ್ಕೃತಿ ನಮಗೆ ಬೇಡ.

ಬಾಗಲಕೋಟ ಶ್ರೀಮತಿ ಶಾಂತಾ ಚಿದಂಬರ ಇನಾಮದಾರ

## ಚೆನ್ನಾಗಿದೆ

ಭಾರತೀಯರು ಮಾತೃವತ್ಸಲರು; ಅವಳ ಮಾತನ್ನು ಮೀರದವರು ಎನ್ನುವುದನ್ನು ತೋರಿಸಿಕೊಟ್ಟ ಸರ್

(ಆರನೇ ಪುಟಕ್ಕೆ)

## ಪುಸ್ತಕ ವಿಭಾಗ







- ಮರಾಠಿ ಮೂಲ: ಲಕ್ಷ್ಮಣ ಗಾಯಕವಾಡ
- ಅನುವಾದ: ಚಂದ್ರಕಾಂತ ಪೋಕಳೆ
- ಸಂಗ್ರಹ: ವಿ. ರಮಾ ಕಾರಂತ



## ಬೆಳಕಿಂಡಿ

● ಮನೆಯೆಂದರೆ ಏನು? ದಿನದ ದುಡಿತದ ನಂತರ ಉಸ್ಸಪ್ಪಾ ಎಂದು ತಲೆ ಕೆಳಗೆ ಹಾಕಿ ಕುಳಿತುಕೊಳ್ಳುವ ಸ್ಥಳ.

● ಗ್ರೌಚೋ ಮಾರ್ಕ್ಸ್

● ಈ ಜಗತ್ತಿನಲ್ಲಿ ಸಂಪತ್ತಿನ ನಿಷ್ಪ್ರಯೋಜಕತ್ವವನ್ನು ಢಾಣಾಡಂಗುರವಾಗಿ ಸಾರುವಂತಹವು ಎರಡೇ ಎರಡು- ಬೈಬಲ್ಲು ಹಾಗೂ ಇನ್‌ಕಮ್ ಟ್ಯಾಕ್ಸ್ ಫಾರ್ಮು.

● ಗಿಲ್ ಡ್ರಾಪ್ಪರ್

● ಹೆಂಡತಿಯ ಹುಟ್ಟಿದ ದಿನವನ್ನು ಮರೆಯುವವರು ಮುಂದೆಂದೂ ಅದನ್ನು ಮರೆಯದ ಹಾಗೆ ಆಕೆಯಿಂದ ಏನನ್ನಾದರೂ ಪಡೆದೇ ಪಡೆಯುತ್ತಾರೆ.

● ಫ್ರೆಡ್ ಸ್ಪಾರ್ಕ್ಸ್

● ಟೆಲಿವಿಜನ್ನು ಸಾವಿರಾರು ವರ್ಷಗಳ ಹಿಂದೆ ಇದ್ದ ಗ್ರೀಕ್ ನಗರರಾಜ್ಯಗಳ ಪರಿಸ್ಥಿತಿಯನ್ನೇ ತದ್ವತ್ತಾಗಿ ಪುನರ್ನಿಮಿಸಿದೆ: ಎಲ್ಲರೂ ತಮ್ಮ ನಾಯಕನನ್ನು ನೋಡಬಹುದು ಹಾಗೂ ಆತ ಹೇಳುವುದನ್ನು ಕೇಳಬಹುದು.

● ಲಾರ್ಡ್ ಬ್ರೇನ್

● ಮಕ್ಕಳಿಲ್ಲದವರಿಗೆ 'ಉಸ್ಸಪ್ಪಾ' ಎನ್ನುವುದು ಎಷ್ಟು ಸಮಾಧಾನ ತರುತ್ತದೆನ್ನುವುದು ಗೊತ್ತಿರುವುದಿಲ್ಲ.

● ನಿಕೋಲಸ್ ಕಜಂಟ್ ಜಾಕಿಸ್, ಜಪಾನೀ ಲೇಖಕ

● ಯಾವನಾದರೂ ಅತಿ ಪ್ರಾಮಾಣಿಕನಾಗಿ ಎಲ್ಲವನ್ನೂ ಹೇಳಿಬಿಡಬೇಕೆಂದು ಇಚ್ಛಿಸಿದರೆ ಅವನಿಂದ ಒಂದು ಮಾತೂ ಹೊರಬರುವುದಿಲ್ಲ.

● ಡಿಸ್ರೇಲಿ ಬ್ರಿಟಿಶ್ ರಾಜನೀತಿಜ್ಞ

(ಮೂರನೆ ಪುಟದಿಂದ)

ಅಶುತೋಷ ಮುಖರ್ಜಿಯವರು ನಿಜಕ್ಕೂ ಅಭಿನಂದನಾರ್ಹರು. ಅವರಿಗೆ ಸಂಬಂಧಿಸಿದ ಆ ಪ್ರಸಂಗವನ್ನು ವೆಂಕಟೇಶ ಗಂಗಾವತಿಯವರು ಬಹು ಮಾರ್ಮಿಕವಾಗಿಯೆ ಚಿತ್ರಿಸಿದ್ದಾರೆ.

'ಹೀಗೊಂದು ವ್ಯಥೆಯ ಕಥೆ'ಯನ್ನು ಓದುವಾಗ ಕಣ್ಣುತುಂಬಿ ಬಂದು ಅಕ್ಷರಗಳು ಮಂಜಾದವು. ಗಂಗವ್ವ-ಗಂಗಾಮಾಯಿ' ಅತ್ಯುತ್ತಮ ಪುಸ್ತಕ ಸಂಗ್ರಹ. 'ರಜನಿಕೊಟ್ಟ ಮಂಗಳೂರು ಮಲ್ಲಿಗೆ'ಯು ಹೆಣ್ಣಿಗೆ ಸಕಾಲದಲ್ಲಿ ಮದುವೆಯಾಗದಿದ್ದರೆ ಮುಂದೆ ಎಷ್ಟು ವೇದನೆಯನ್ನು ಅನುಭವಿಸಬೇಕಾಗುವುದೆಂಬುದನ್ನು ಚೆನ್ನಾಗಿಯೆ ಎತ್ತಿತೋರಿಸಿದೆ.

**ರಾಮದುರ್ಗ ಮಲ್ಲಿಕಾರ್ಜುನ ಹ. ಅಂಕುಶಖರ್**

## ಕೆಲವು ಅನಿಸಿಕೆಗಳು

ಅನೇಕ ವರ್ಷಗಳಿಂದ 'ಕಸ್ತೂರಿ'ಯನ್ನು ಓದುತ್ತಿದ್ದೇನೆ. ಹಿಂದೆ 'ಕಸ್ತೂರಿ'ಯಲ್ಲಿ 'ಇದುವೆ ಜೀವ ಇದು ಜೀವನ' ಎಂಬ ಸ್ವಾರಸ್ಯಕರವಾದ ಅಂಕಣ ಪ್ರಕಟವಾಗುತ್ತಿತ್ತು. ಅದರ ಬದಲು 'ನೆನಪು ನೆರಳು' ಎಂಬ ಅಂಕಣವನ್ನು ಪ್ರಾರಂಭಿಸಿದ್ದೀರಿ. 'ಇದುವೆ ಜೀವ...' ಓದಿದವರಿಗಷ್ಟೆ ಗೊತ್ತು ಅದರ ಸ್ವಾದ. ದಯವಿಟ್ಟು ಆ ಅಂಕಣವನ್ನು ಪುನಃ ಪ್ರಾರಂಭಿಸಿರಿ.

ಅದೇ ರೀತಿ ಪ್ರತಿ ತಿಂಗಳು ಒಂದೆರಡು ಪುಟಗಳನ್ನು ಹಾಸ್ಯದ ತುಣುಕುಗಳಿಗಾಗಿ ಕಾಯ್ದಿರಿಸಿ. ಇನ್ನೊಂದು ಮುಖ್ಯ ವಿಷಯವೆಂದರೆ ನಾನು ಇತ್ತೀಚಿನ ಸಂಚಿಕೆಯಲ್ಲಿ ಡಿಗ್ರಿಗಳ ರಾಜ ಶ್ರೀಕಾಂತ ಜಿಚಕರರ ಬಗ್ಗೆ ಲೇಖನ ಪ್ರಕಟಿಸಿದ್ದೀರಿ. ಲೇಖನದೊಟ್ಟಿಗೆ ಅವರ ಭಾವಚಿತ್ರವಾಗಲಿ ರೇಖಾಚಿತ್ರವಾಗಲಿ ಇರಲಿಲ್ಲ. ಹೀಗಾಗಿ ಅವರು ಎದುರಿಗೆ ಬಂದರೂ ನಾವು ಗುರುತಿಸುವಹಾಗಿಲ್ಲ! ದಯವಿಟ್ಟು ವ್ಯಕ್ತಿಚಿತ್ರದ ಲೇಖನಗಳೊಂದಿಗೆ ಭಾವಚಿತ್ರಗಳನ್ನೂ ಪ್ರಕಟಿಸಿ.

**ಮುಂಬಯಿ ಎಂ. ರಮೇಶ ಕಾಮತ**

**(ನಿಮ್ಮ ಸೂಚನೆಗಳನ್ನು ಗಮನಿಸಿದ್ದೇವೆ. ಪ್ರಸಿದ್ಧಿ ಪರಾಙ್ಮುಖರಾದ ಜಿತಕರರಿಂದ ಭಾವಚಿತ್ರವನ್ನು ದೊರಕಿಸಲು ನಮಗೆ ಸಾಧ್ಯವಾಗಲಿಲ್ಲ. -ಸಂ.)**


### ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, 'ನೆನಪು ನೆರಳಿನಲ್ಲಿ'ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

### ಚಂದಾದಾರರಿಗೆ ಸೂಚನೆ

- 'ಕಸ್ತೂರಿ'ಯು ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ, ದಯವಿಟ್ಟು ಚಂದಾನಂಬರು ಸ್ಫುಟವಾಗಿ ನಮೂದಿಸಬೇಕಾದದ್ದು ಅತ್ಯವಶ್ಯಕ.

### ಪತ್ರವ್ಯವಹಾರ ವಿಳಾಸ:

ಪ್ರಸಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦

### ಚಂದಾ ದರಗಳು

| | |
|---|---|
| ಬಿಡಿ ಸಂಚಿಕೆಗೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

ಕಸ್ತೂರಿ

ಕನ್ನಡ ಡೈಜೆಸ್ಟ್

ವರ್ಷ : ೪೨ ಸೆಪ್ಟೆಂಬರ್ ೧೯೯೭ ಸಂಚಿಕೆ : ೨

# ಚಕಾರಕುಕ್ಷಿಯ ಕಥೆ

ಮಹಾಕವಿ ಕಾಳಿದಾಸನ ವಿದ್ವತ್ತನ್ನು ಹೊಗಳುವ ಅನೇಕ ದಂತಕತೆಗಳು ಪ್ರಚಲಿತವಾಗಿವೆಯಷ್ಟೆ. ಆದರ ಸಾಲಿಗೆ ಸೇರುವಂಥದ್ದು ಚಕಾರಕುಕ್ಷಿಯ ಕಥೆ.

ಒಮ್ಮೆ ಕಾಳಿದಾಸ ಕಾಶಿಕ್ಷೇತ್ರದ ದೇವಾಲಯವೊಂದನ್ನು ಸಂದರ್ಶಿಸಿದ. ಹೊರ ಆವರಣದಲ್ಲಿ ಸುಂದರವಾಗಿ ನಿರ್ಮಿತವಾಗಿದ್ದ ಭಗವಾನ್ ವೇದವ್ಯಾಸ ಮಹರ್ಷಿಗಳ ಕಪ್ಪು ಶಿಲೆಯ ಸುಂದರ ವಿಗ್ರಹ ಆವನನ್ನು ಆಕರ್ಷಿಸಿತು. ಆದನ್ನೇ ಭಾವಪರವಶನಾಗಿ ನೋಡುತ್ತಾ ನಿಂತ. ಮಹಾಭಾರತ ಕಾವ್ಯ ಸೃಷ್ಟಿಕರ್ತನ ಆಗಾಧ ವಿದ್ವತ್ತಿನ ಸ್ಮರಣೆಯೊಂದಿಗೇ ಆತನ ಕವಿಬುದ್ಧಿಯೂ ಜಾಗೃತವಾಯಿತು. ಸಂಸ್ಕೃತದಲ್ಲಿ ಅಪಿ,ಚ,ತು,ನ,ಹಿ, ಎಂಬ ಶಬ್ದಗಳನ್ನು ಶ್ಲೋಕವಾಕ್ಯಗಳ ಪ್ರಾಸಪೂರ್ಣತೆಗೆಂದು ಸಂದರ್ಭಾನುಸಾರ ಜೋಡಿಸುವುದು ರೂಢಿಯಲ್ಲಿದೆ. ವ್ಯಾಸರು ನಮ್ಮ ಮಹಾಭಾರತದ ಒಂದು ಲಕ್ಷಕ್ಕೂ ಹೆಚ್ಚಿನ ಶ್ಲೋಕಗಳಲ್ಲಿ 'ಚ' ಕಾರವನ್ನು ಎಷ್ಟು ಬಾರಿ ಬಳಸಿರಬಹುದೆಂಬ ಯೋಚನೆ ಆವನಿಗೆ ನಗು ತಂದಿತು. ವ್ಯಾಸರ ವಿಗ್ರಹದ ನಾಭಿಯಲ್ಲಿ ಬೆರಳಿಟ್ಟು 'ಇವರು ನಿಜಕ್ಕೂ ಚಕಾರಕುಕ್ಷಿಯೇ ಸರಿ' ಎಂದು ಹೇಳಿದ. ಕಾಳಿದಾಸನ ಹಾಸ್ಯಮನೋವೃತ್ತಿಗೆ ಜತೆಯಲ್ಲಿದ್ದ ಇತರರೂ ನಕ್ಕು ದನಿಗೂಡಿಸಿದರು.

ನಂತರ ನಾಭಿಯಿಂದ ಬೆರಳನ್ನು ಹಿಂತೆಗೆಯಲು ಯತ್ನಿಸಿದಾಗ ಆದು ಹೊರಬರಲಿಲ್ಲ. ಆಶ್ಚರ್ಯಚಕಿತನಾದ ಕಾಳಿದಾಸನಿಗೆ ವ್ಯಾಸರ ವಾಣಿ ಕೇಳಿಸಿತು: 'ಕಾಳಿದಾಸ', ನಾನು ಚಕಾರಕುಕ್ಷಿಯೇ ಇದ್ದೇನು, ನೀನು ಆಧುನಿಕನಲ್ಲವೆ ? ಈಗ ಹೇಳು, ದ್ರೌಪದಿ ಧರ್ಮರಾಯನ ಹೆಂಡತಿಯಿದ್ದಾಗ ಇತರರು ಮೈದುನರಲ್ಲವೆ ? ಹೀಗೆ ದ್ರೌಪದಿ ಪಂಚಪಾಂಡವರೊಂದಿಗೆ ಹೊಂದಿದ್ದ ಸಂಬಂಧವನ್ನು 'ಚ'ಕಾರರಹಿತವಾಗಿ ಹೇಳಬಲ್ಲೆಯಾದರೆ ನಿನ್ನ ಬೆರಳನ್ನು ಬಿಡುತ್ತೇನೆ".

ಕಾಳಿದಾಸ ಈ ಸಂದರ್ಭದಲ್ಲಿ ರಚಿಸಿದ ಶ್ಲೋಕ ಹೀಗಿದೆ.

ಪಾಂಚಾಲ್ಯಾಃಪಾಂಡವಾಃಪಂಚಪತಿದೇವರಭಾವಕಾಃ।

ನದೇವರೋಧರ್ಮರಾಜಃಸಹದೇವೋನಭಾವಕಾಃ।।

ಇದನ್ನು ಕೇಳಿದ ಮರುಕ್ಷಣವೇ ವ್ಯಾಸರು ಕಾಳಿದಾಸನ ಬೆರಳಿಗೆ ಮುಕ್ತಿ ನೀಡಿದರು.

• ಶಂಕರ ಅಜ್ಜಂಪುರ

# ಕಲ್ಕಾ ಪ್ರಯಾಣದ ಅವಿಸ್ಮರಣೀಯ ಕ್ಷಣಗಳು

ಸಮುದ್ರದ ಸೊಬಗು ಮತ್ತು ಸಮುದ್ರ ಸ್ನಾನದ ಆನಂದವನ್ನು ಅನುಭವಿಸಲು ಉತ್ತರ ಭಾರತದವರು ದಕ್ಷಿಣಕ್ಕೆ ಧಾವಿಸಿ ಬರುವಂತೆ, ದಕ್ಷಿಣ ಭಾರತದವರು ಹಿಮಾಲಯದ ಗಿರಿಶಿಖರಗಳ ಮತ್ತು ಕಣಿವೆಗಳ ಅನುಪಮ ಚೆಲುವನ್ನು ಸವಿಯಲು ಜಮ್ಮು-ಕಾಶ್ಮೀರಕ್ಕೋ ಹಿಮಾಚಲ ಪ್ರದೇಶಕ್ಕೋ ಪ್ರವಾಸ ಕೈಗೊಳ್ಳುತ್ತಾರೆ. ಪ್ರಸ್ತುತ ಪರಿಸ್ಥಿತಿಯಲ್ಲಿ ಎಲ್ಲಾ ರೀತಿಯಲ್ಲೂ ಯೋಗ್ಯವಾಗಿರುವ ಸ್ಥಳವೆಂದರೆ ಹಿಮಾಚಲ ಪ್ರದೇಶದ ಗಿರಿನಗರವಾದ ಶಿಮ್ಲಾ ಮತ್ತು ಕಣಿವೆಯ ಊರಾದ ಮನಾಲಿ.

ಸಾಮಾನ್ಯವಾಗಿ ಶಿಮ್ಲಾಕ್ಕೆ ಪ್ರವಾಸ ಕೈಗೊಳ್ಳುವವರೆಲ್ಲ ದೆಹಲಿಯಿಂದ ಮುಂದಕ್ಕೆ ಇಷ್ಟವಿರಲಿ, ಇಲ್ಲದಿರಲಿ ಬಸ್ಸಿನಲ್ಲೇ ಪ್ರಯಾಣಿಸುತ್ತಾರೆ. ಏಕೆಂದರೆ ಬಹಳಷ್ಟು ಮಂದಿಗೆ ದೆಹಲಿಯಿಂದ ಕಲ್ಕಾ ಮೂಲಕ ರೈಲುಮಾರ್ಗವಿರುವ ಸಂಗತಿಯೇ ಗೊತ್ತಿಲ್ಲ. ಇದಕ್ಕೆ ರೈಲ್ವೇ ಇಲಾಖೆ/ ನೌಕರರೂ ಹೊರತಾಗಿಲ್ಲ. ಮೈಸೂರಿನ ರೈಲ್ವೆ ನಿಲ್ದಾಣದ ವಿಚಾರಣಾ ವಿಭಾಗದಲ್ಲಿ ಶಿಮ್ಲಾಕ್ಕೆ ರೈಲಿರುವ ಬಗ್ಗೆ ಮಾಹಿತಿಯನ್ನು ಕೋರಿದಾಗ, "ರೈಲು ಸೌಲಭ್ಯ ಕಲ್ಕಾದವರೆಗೆ ಮಾತ್ರ ಇದೆ," ಎಂದರು. ಪಾಪ! ಕಲ್ಕಾದಿಂದ, ಕಣ್ಮನಗಳನ್ನು ತಣಿಸಿ ಹೃದಯವನ್ನು ಕುಣಿಸುವ, ಪ್ರಾಕೃತಿಕ ಸೊಬಗಿನ ದೃಶ್ಯಾವಳಿಗಳಿಂದ ಕೂಡಿರುವ ಹಿಮಾಲಯದ ಕೆಲವು ಪರ್ವತ ಪಂಕ್ತಿಗಳ ಮೇಲೆ ನ್ಯಾರೋಗೇಜ್ ರೈಲು ಮಾರ್ಗವೂ ಇದೆ ಎಂಬುದು ಅವರಿಗೆ ತಿಳಿದೇ ಇರಲಿಲ್ಲ! ಹಿಮಾಲಯ ದರ್ಶನಕ್ಕಾಗಿಯೋ ಇಲ್ಲವೆ ಮಧುಚಂದ್ರಕ್ಕಾಗಿಯೋ ಶಿಮ್ಲಾಕ್ಕೆ ಹೋಗಬೇಕೆನ್ನುವವರು ತಮ್ಮ ಪ್ರಯಾಣವನ್ನು ಈ ನ್ಯಾರೋಗೇಜ್ ರೈಲಿನಲ್ಲಿ ಮುಂದುವರಿಸಿದರೆ ತಮ್ಮ ಪ್ರವಾಸವನ್ನು ಹೆಚ್ಚು ಸಂತೋಷಕರವಾಗಿ, ಅವಿಸ್ಮರಣೀಯವಾಗಿ ಮಾಡಿಕೊಳ್ಳಬಹುದು.

## ಕಲ್ಕಾ-ಶಿಮ್ಲಾ ಗಿರಿ ರೈಲು ಮಾರ್ಗದ ಹಿನ್ನೆಲೆ

ಬೇಸಿಗೆಯ ಬೇಗೆಯನ್ನು ತಾಳಲಾಗದೆ, ಸಮುದ್ರ ಮಟ್ಟದಿಂದ ಐದಾರು ಸಾವಿರ ಅಡಿಗಳೆತ್ತರದಲ್ಲಿರುವ ಸುಂದರ ಪರಿಸರದ ಪ್ರಶಾಂತ ಗಿರಿಧಾಮಗಳಿಗೆ ಲಗ್ಗೆಯಿಕ್ಕುವ ಪರಿಪಾಠ ಸ್ವಾತಂತ್ರ್ಯಪೂರ್ವ ಕಾಲದ ರಾಜಮಹಾ

⊙ ಸ್ವಾಮಿ ರಾಮಕೃಷ್ಣಾರ್ಪಣಾನಂದ

ರಾಜರುಗಳಿಂದ ಹಾಗೂ ಬಿಸಿಲೆಂದರೆ ಬೆಚ್ಚಿ ಬೀಳುವ ಬ್ರಿಟಿಷ್ ಆಡಳಿತಾಧಿಕಾರಿಗಳು ಹಾಗೂ ಅವರ ಪರಿವಾರದವರಿಂದ ರೂಢಿಗೆ ಬಂತು. ಆದರೆ ಕಾಲಾಂತರದಲ್ಲಿ ಅದೊಂದು ಫ್ಯಾಷನ್ ಆಗಿ ಪರಿವರ್ತನೆಗೊಂಡಿತು. ಮೊದಮೊದಲು ಗಿರಿಧಾಮಗಳಿಗೆ ಸರಿಯಾದ ಸಾರಿಗೆ ಮಾರ್ಗವಾಗಲಿ ವಾಹನಗಳ ವ್ಯವಸ್ಥೆಯಾಗಲಿ ಇರಲಿಲ್ಲವಾದ್ದರಿಂದ ಪ್ರಯಾಣ ಹೆಚ್ಚು ಪ್ರಯಾಸಕರವಾಗಿತ್ತು ಹಾಗೂ ಹೆಚ್ಚು ಸಮಯ ತೆಗೆದುಕೊಳ್ಳುತ್ತಿತ್ತು. ಕಾಲಾಂತರದಲ್ಲಿ ಡಾಂಬರು ರಸ್ತೆಯಾಗಿ ಮೋಟಾರು ವಾಹನಗಳು ಬಳಕೆಗೆ ಬಂದದ್ದರಿಂದ ಪ್ರಯಾಣ ಸುಲಭವಾದರೂ ಸುಖಕರವಾಗಿರಲಿಲ್ಲ. ಅಷ್ಟು ಹೊತ್ತಿಗೆ ಭಾರತದಲ್ಲೂ ರೈಲುಗಳು ಹೆಚ್ಚು ಹೆಚ್ಚಾಗಿ ಬಳಕೆಗೆ ಬಂದಿದ್ದವು. ಆಗ ಅಂದಿನ ಬ್ರಿಟಿಷ್ ಸರಕಾರ ಪರ್ವತ ಪ್ರದೇಶಗಳಿಗೂ ಅದನ್ನು ವಿಸ್ತರಿಸಲು ಆಲೋಚಿಸಿ ಕಾರ್ಯ ಪ್ರವೃತ್ತವಾಯಿತು. ಹೀಗೆ ಅಗಾಧವಾದ ಪರಿಶ್ರಮ ಮತ್ತು ತಂತ್ರಜ್ಞಾನದ ಫಲವಾಗಿ ಗಿರಿ ರೈಲು ಮಾರ್ಗಗಳು ಅಸ್ತಿತ್ವಕ್ಕೆ ಬಂದವು. ಆದರೆ ಆಗ ಮೀಟರ್‌ಗೇಜ್ ಮಾರ್ಗಗಳು ಚಾಲ್ತಿಯಲ್ಲಿದ್ದರೂ ಕಡಿದಾದ



**ಪರ್ವತ ಪ್ರದೇಶಗಳಲ್ಲಿ ಸುರಕ್ಷಿತವಾಗಿ ಚಲಿಸ** ಬಲ್ಲ ಹೆಚ್ಚು ಶಕ್ತಿಯುತವಾದ ಎಂಜಿನ್‌ಗಳು ಇರಲಿಲ್ಲವಾದ್ದರಿಂದ ನ್ಯಾರೋಗೇಜ್ ಮಾರ್ಗವನ್ನು ಅಳವಡಿಸಿಕೊಳ್ಳಲಾಯಿತು. ಇಂದಿಗೂ ಅಸ್ತಿತ್ವದಲ್ಲಿರುವ ಅಂತಹ ಹಲ ವಾರು ಮಾರ್ಗಗಳೆಂದರೆ ಕಲ್ಕಾ-ಶಿಮ್ಲಾ, ನೀಲಗಿರಿಯ ಉದಕಮಂಡಲ (ಊಟಿ), ಮುಂಬಯಿಯಲ್ಲಿರುವ ಮಾಥೆರಾನ್ ಮತ್ತು ಕಲ್ಕತ್ತಾದ ದಾರ್ಜಿಲಿಂಗ್.

ಕಲ್ಕಾ-ಶಿಮ್ಲಾ ನ್ಯಾರೋಗೇಜ್ ರೈಲು ಮಾರ್ಗವು ಸಮುದ್ರಮಟ್ಟದಿಂದ ೭೧೪೩ ಅಡಿ ಎತ್ತರದಲ್ಲಿದ್ದು, ಸುಮಾರು ೨೦೦೦ ಅಡಿಗಳಷ್ಟು ಮೇಲಕ್ಕೆ ಆಮೆ ವೇಗದಲ್ಲಿ ಪ್ರಯಾಣಿಸುತ್ತದೆ. ೯೬ ಕಿಲೋಮೀಟರ್ ಉದ್ದದ ಈ ಮಾರ್ಗವು ೧೯೦೩ರಲ್ಲಿ ಪ್ರಯಾಣಕ್ಕೆ ಅಣಿಗೊಳಿಸಲ್ಪಟ್ಟಿತು. ಇದು ಹಿಂದಿನ ಟೋನೆಗ್ಗ ರಸ್ತೆಯನ್ನೇ ಅನುಸರಿಸಿ ಜುಟೋಗ್ ಪರ್ವತದ ಸುತ್ತಲೂ ಶಿಖರದ ಪೂರ್ವ ಮತ್ತು ಉತ್ತರದ ಭಾಗದಲ್ಲಿ ಸಾಗುತ್ತಾ ಶಿಮ್ಲಾವನ್ನು ಉತ್ತರ ಭಾಗದಲ್ಲಿ ಸೇರುತ್ತದೆ.

ಯೂತ್ ಹಾಸ್ಟೆಲ್ ಅಸೋಸಿಯೇಷನ್ ಆಫ್ ಇಂಡಿಯಾದವರು ಹಮ್ಮಿಕೊಂಡಿದ್ದ ರಾಷ್ಟ್ರೀಯ ಹಿಮಾಲಯ ಚಾರಣದಲ್ಲಿ ಪಾಲ್ಗೊಳ್ಳಲು ನಾನು ಮತ್ತು ನನ್ನ ಮಿತ್ರರಿಬ್ಬರು ಹಿಮಾಚಲ ಪ್ರದೇಶದ ಬಚೇಲಿಗೆ ಹೊರಟೆವು. ಆರಂಭಿಕ ಶಿಬಿರದಲ್ಲಿ ವರದಿ ಮಾಡಿಕೊಳ್ಳುವ ಮುನ್ನ ಭಾರತದ ಪ್ರಮುಖ ಪ್ರವಾಸಿ ಸ್ಥಳಗಳಾದ ಶಿಮ್ಲಾ ಮತ್ತು ಮನಾಲಿಯನ್ನು ಸಂದರ್ಶಿಸುವ ಕಾರ್ಯಕ್ರಮವನ್ನು ಹಾಕಿಕೊಂಡು ದೆಹಲಿಯನ್ನು ತಲುಪಿದ ದಿನ ರಾತ್ರಿಯೇ ೧೧.೪೫ ರ ಕಲ್ಕಾ ಮೇಲ್ ರೈಲು ಗಾಡಿಯಲ್ಲಿ ಪ್ರಯಾಣವನ್ನು ಮುಂದುವರಿಸಿದೆವು.

ಮುಂಗಡ ಟಿಕೆಟ್ ಇಲ್ಲದೆ-ಅದೂ **ಬೇಸಿಗೆ ರಜಾ ದಿನಗಳಲ್ಲಿ-** ರೈಲಿನಲ್ಲಿ ಉತ್ತರ ಭಾರತದಲ್ಲಿ ಪ್ರವಾಸಿಸುವುದು ಕಷ್ಟ. ನಿಜಕ್ಕೂ ಆಗ ಪ್ರವಾಸ ಪ್ರಮಾಸವಾಗಿರದೆ ಪ್ರಯಾಸವಾಗಿರುತ್ತದೆ. ಗಜಗರ್ಭದ ರೈಲುಗಾಡಿ ಮದ ಗಜದ ವೇಗದಲ್ಲೇ ಪ್ರಯಾಣ ಪ್ರಾರಂಭಿಸಿ ಬೆಳಗಿನ ೫ ಗಂಟೆಗೆ ನಮ್ಮನ್ನು ಕಲ್ಕಾಕ್ಕೆ ತಲುಪಿಸಿ ಕೈ ತೊಳೆದುಕೊಂಡಿತು. ನಮಗೆ ಕರ್ನಾಟಕದಲ್ಲಿ ಕಲ್ಕಾದಿಂದ ಮುಂದಿನ ರೈಲಿನ ಬಗ್ಗೆ ಹಾಗೂ ಮುಂಗಡದ ಬಗ್ಗೆ ಸರಿಯಾದ ಮಾಹಿತಿ ಸಿಕ್ಕಿರಲಿಲ್ಲವಾದ್ದರಿಂದ ಅಗತ್ಯವಾದ ಮಾಹಿತಿ ಪಡೆದು ನಿಲ್ದಾಣದ ಎಡಭಾಗದಲ್ಲಿದ್ದ ನ್ಯಾರೋಗೇಜ್ ರೈಲುಮಾರ್ಗದ ಪ್ಲಾಟ್‌ಫಾರಂನತ್ತ ದೌಡಾಯಿಸಿದೆವು. ನಾವು ನೇರವಾಗಿ ಶಿಮ್ಲಾಕ್ಕೆ ಟಿಕೇಟ್ ಪಡೆದಿದ್ದರೂ, ಕಲ್ಕಾದಿಂದ ಮುಂದಕ್ಕೆ ರಿಸರ್ವೇಷನ್ ಇಲ್ಲದ ಕಾರಣ ನಾವು ಹೋಗುವ ಹೊತ್ತಿಗಾಗಲೇ ನಮ್ಮೊಡನೆ ದೆಹಲಿಯಿಂದ ಬಂದಿದ್ದ ಇತರ ಪ್ರಯಾಣಿಕರು ೬ ಗಂಟೆಯ ಟ್ರೈನಿನಲ್ಲಿ ನಮಗೆ ಸ್ಥಳಾವಕಾಶವಿಲ್ಲದಂತೆ ತುಂಬಿಹೋಗಿದ್ದರು. ರೈಲಿನಲ್ಲಿ ಪ್ರಯಾಣಿಕರಿಗಿಂತ ಹೆಚ್ಚಾಗಿ ಕಾಲಿಡಲು ಜಾಗವಿಲ್ಲದಂತೆ ಅವರ ಲಗೇಜುಗಳೇ ತುಂಬಿದ್ದವು.

ನಿರ್ವಾಹವಿಲ್ಲದೆ ನಾಲ್ಕನೇ ಪ್ಲಾಟ್‌ಫಾರಂನಿಂದ ಐದನೇ ಪ್ಲಾಟ್‌ಫಾರಂನತ್ತ ೨.೪೫ರ ರೈಲು ಗಾಡಿಯಲ್ಲಾದರೂ ಸ್ಥಳಾವಕಾಶ ಮಾಡಿಕೊಳ್ಳಲು ಓಡಿದೆವು.

ಆ ಗಾಡಿಯನ್ನು ಬಿಟ್ಟರೆ ಮರುದಿನದವರೆಗೂ ಶಿಮ್ಲಾಕ್ಕೆ ಮತ್ತಾವುದೇ ರೈಲು ಇರಲಿಲ್ಲವಾದ್ದರಿಂದ ಅಷ್ಟು ಹೊತ್ತಿಗಾಗಲೇ ಆ ರೈಲಿಗೂ ಸಾಕಷ್ಟು ಜನ ಜಮಾಯಿಸಿ ಸ್ಥಳವನ್ನು ಆಕ್ರಮಿಸಿಕೊಂಡಿದ್ದರೂ ಕಂಬಿಯೇ ಇಲ್ಲದ ಕಿಟಕಿಗಳ ಪಕ್ಕದಲ್ಲಿ ಹೇಗುಹೇಗೋ ಸೀಟು ಗಿಟ್ಟಿಸಿದೆವು. ಮಕ್ಕಳಾಟಿಕೆಯ ಪುಟ್ಟ ರೈಲಿನಂತೆ ಕಾಣುವ ಒಂದು ಬೋಗಿಯಲ್ಲಿ ೩೦-೩೫ ಜನರಿಗೆ ಮಾತ್ರ ಸ್ಥಳಾವಕಾಶ.

ಅಂತಹ ನಾಲ್ಕೈದು ಬೋಗಿಗಳ ಪುಟಾಣಿ ರೈಲಿನಲ್ಲಿ ಭಾರತದ ವಿವಿಧೆಡೆಯಿಂದ ಮಧುಚಂದ್ರಕ್ಕಾಗಿ ಶಿಮ್ಲಾಕ್ಕೆ ಹೊರಟಿದ್ದ ನವೀನ ಆಚಾರ ವಿಚಾರಗಳ, ಹೊಸ ಬಗೆಯ ಉಡುಪುಗಳನ್ನು ಧರಿಸಿದ್ದ ನವ ದಂಪತಿಗಳೇ ತುಂಬಿದ್ದರು. ನಮ್ಮ ಪಕ್ಕದ ಸೀಟುಗಳಲ್ಲಿ ಮಹಾರಾ



ಷ್ಠದ ಸಹೋದರರಿಬ್ಬರ ಮಡದಿಯರು ಮತ್ತು ಮಕ್ಕಳನ್ನು ಹೊರತುಪಡಿಸಿದರೆ ಎದುರಿನ ಅಕ್ಕಪಕ್ಕದ ಸೀಟುಗಳಲ್ಲಿ ರತಿ-ಮನ್ಮಥರ ಜೋಡಿಗಳೇ ಇದ್ದವು. ಇವರನ್ನೆಲ್ಲಾ ಹೊರತುಪಡಿಸಿದರೆ ಬೋಗಿಯಲ್ಲಿ ಲಗೇಜುಗಳೇ ತುಂಬಿದ್ದವು. ಹಿಂದೆ ಲಗೇಜುಗಳನ್ನು ಕೊಂಡೊಯ್ಯಲು ಅವಕಾಶವೇ ಇರಲಿಲ್ಲವಂತೆ. ಆದರೆ ಈಗ ಶಕ್ತಿಯುತ ಡೀಜೆಲ್ ಎಂಜಿನ್ ಅನ್ನು ಅಳವಡಿಸಿರುವುದರಿಂದ ತಮಗೆ ಬೇಕೆನಿಸಿದಷ್ಟು ಲಗೇಜನ್ನು ಪ್ರವಾಸಿಗರು ಕೊಂಡೊಯ್ಯಬಹುದಾಗಿದೆ.

ಗದ್ದಲ ಮತ್ತು ಗೊಂದಲಗಳಿಂದ ಕೂಡಿದ ನಗರ ಪ್ರದೇಶಗಳ ಮೀಟರ್ ಅಥವಾ ಬ್ರಾಡ್‌ಗೇಜ್ ರೈಲುಗಳಲ್ಲಿ ಪ್ರಯಾಣ ಮಾಡಿದ್ದವರಿಗೆ, ನಿಸರ್ಗದ ರಮಣೀಯ ದೃಶ್ಯಗಳ, ಹೆಚ್ಚು ಶಬ್ದ ಮಾಡದೆ ಒಂದಾದ ಮೇಲೆ ಒಂದು ಶಿಖರವನ್ನು ಸುರಂಗ ಅಥವಾ ರೋಮನ್ ಮಾದರಿಯ ಮೇಲ್ಗಾಲುವೆಯಂತೆ ಕಾಣುವ ಕಮಾನು ಆಕಾರದ ಸೇತುವೆಗಳನ್ನು ದಾಟುತ್ತಾ ಹಸಿರು ಹುಲ್ಲು ಅಥವಾ ಗಿಡಮರಗಳಿಂದ ಮೈತುಂಬಿಕೊಂಡ ಗಿರಿಶಿಖರಗಳನ್ನು ಹಾಗೂ ಕಡಿದಾದ ಕಮರಿ, ಕಣಿವೆ ಹಾಗೂ ಅವುಗಳ ಮಡಿಲಲ್ಲಿ ಬೆಳೆದಿರುವ ಹಳ್ಳಿ, ಪಟ್ಟಣ ಅಥವಾ ನಗರಗಳ ವಿಹಂಗಮ ದೃಶ್ಯ ವೈಭವಗಳನ್ನು ಪರಿಚಯಿಸುತ್ತಾ ಸಾಗುವ ಈ ನ್ಯಾರೋ ಗೈಜ್ ರೈಲು ವಿನೂತನವಾದ ಹಾಗೂ ಅವಿಸ್ಮರಣೀಯವಾದ ಅನುಭವವನ್ನು ನೀಡುತ್ತದೆ.

ಕಲ್ಕಾದಿಂದ ೨೧ ಕಿಲೋ ಮೀಟರು ದೂರದಲ್ಲಿ ಪಿನ್‌ಜೋರ್ ಎಂಬಲ್ಲಿ ಔರಂಗಜೇಬನ ಸಾಕು ಸಹೋದರನಾದ ಫಿದೈಲ ಖಾನ್ ಕಟ್ಟಿಸಿದ ಮೊಗಲರ ಬೇಸಿಗೆ ಭವನವು ಸುಂದರವಾದ ಉದ್ಯಾನವಸದ ನಡುವೆ ಇದೆ. ಇಲ್ಲಿನ ಅಲಂಕಾರ ಮಂಟಪಗಳು, ನೀರಿನ ತೊಟ್ಟಿಗಳು ಮತ್ತು ನೀರಿನ ಚಿಲುಮೆಗಳು

## ಪಂಜರ

ಅವನೆದೆಯ ಬಾಗಿಲು ತೆರೆದಿತ್ತು
'ಬಾ ಪ್ರೇಮ ಮಂದಿರಕೆ'
ಎಂದಾತ ಆಹ್ವಾನವಿತ್ತು
ಒಳಹೊಕ್ಕಳು ಹುಡುಗಿ
ನಂತರ ಅರಿವಾಯಿತು
ಅದೊಂದು ಪಂಜರವೆಂದು
ಹಾರಬಯಸಿದಳು ಹೊರಗೆ
ಬಾಗಿಲು ಮುಚ್ಚಿತ್ತು !

ಗಣೇಶ ಪಿ. ನಾಡೋರ

ಅತ್ಯಂತ ಆಕರ್ಷಕವಾಗಿವೆ. ೭.೪೫ಕ್ಕೆ ರೈಲು ತೆವಳು ವೇಗದಲ್ಲಿ ತನ್ನ ಯಾನವನ್ನು ಪ್ರಾರಂಭಿಸಿತು. ನಿಧಾನವಾಗಿ ಚಲಿಸುತ್ತಿದ್ದುದರಿಂದ ಅಕ್ಕಪಕ್ಕದ ದೃಶ್ಯಗಳನ್ನು ಆಸ್ವಾದಿಸಬಹುದಾಗಿತ್ತು. ಹಾಗೂ ಅವುಗಳನ್ನು ಕುಲುಕಾಟದ ಅಡಚಣೆಯಿಲ್ಲದೆ ಕ್ಯಾಮರಾದಲ್ಲೂ ಸೆರೆ ಹಿಡಿಯಬಹುದಾಗಿದ್ದರಿಂದ ಎರಡು ಕಿಟಕಿ ಸೀಟುಗಳಿಗಾಗಿ ನಮ್ಮ ಮೂವರಲ್ಲಿ ವಾಗ್ವಾದ ಪ್ರಾರಂಭವಾಯಿತು. ಕೊನೆಗೆ ಸರದಿಯ ಮೇಲೆ ಒಂದರ ನಂತರ ಮತ್ತೊಂದು ಸೀಟಿನಲ್ಲಿ ಚೌಕಾಶಿಮಾಡದೆ ಕುಳಿತುಕೊಳ್ಳಬೇಕೆಂಬ ತೀರ್ಮಾನಕ್ಕೆ ಬಂದೆವು. ಇದನ್ನು ತಪ್ಪಿಸಲು ಈ ಮಾರ್ಗವನ್ನು ಮೀಟರ್ ಅಥವಾ ಬ್ರಾಡ್‌ಗೇಜಿಗೆ ಪರಿವರ್ತಿಸಿ ಬರೀ ಕಿಟಕಿ ಪಕ್ಕದಲ್ಲೇ ಸೀಟುಗಳಿರುವ ಸಾಕಷ್ಟು ಬೋಗಿಗಳನ್ನು ಹಾಕಬಾರದೆ ಎನ್ನಿಸಿತು. ಹಾಗೇನೋ ಮಾಡಬಹುದು; ಆದರೆ ಆಗ ಉಂಟಾಗುವ ಹೆಚ್ಚಿನ ಶಬ್ದ ಹಾಗೂ ಈ ಶಬ್ದದಿಂದ ಉಂಟಾಗುವ ಕಂಪನದ ತೀವ್ರತೆಗೆ ಶಿಖರದಲ್ಲಿ ಭೂಕುಸಿತ ಹೆಚ್ಚಾಗಿ ಮಾರ್ಗವನ್ನೇ ಮುಚ್ಚಬೇಕಾಗುವ ಪರಿಸ್ಥಿತಿ ಉದ್ಭವಿಸಬಹುದೆಂಬ ಕಾರಣ

ಕ್ಕಾಗಿ ರೈಲ್ವೆಯವರು ಆ ಪ್ರಯತ್ನವನ್ನು ಕೈಬಿಟ್ಟಿ ರಬೇಕೆಂದುಕೊಂಡೆವು. ಈಗಲೂ ಸಹ ಮಳೆ ಗಾಲದಲ್ಲಿ ಮಾರ್ಗದ ಹಾಗೂ ಪ್ರಯಾಣಿಕರ ಸುರಕ್ಷೆಯ ದೃಷ್ಟಿಯಿಂದ ರೈಲು ಸಂಚಾರವನ್ನು ರದ್ದು ಪಡಿಸುತ್ತಾರಂತೆ. ಅಲ್ಲದೆ ವೇಗದ ಮಿತಿಯನ್ನು ಗಂಟೆಗೆ ೨೦ರಿಂದ ೩೦ ಕಿಲೋ ಮೀಟರಿಗೆ ಸೀಮಿತಗೊಳಿಸಲಾಗಿದೆ.

೨೦೦ ಅಡಿಗೆ ಒಂದು ಅಡಿಯಂತೆ ಮಾರ್ಗವನ್ನು ಇಳುಕಲು ಮಾಡಿಕೊಂಡು ಬಂದಿರುವ ರೈಲು ಕಂಬಿಯ ಮೇಲೆ ಆಮೆ ವೇಗದಲ್ಲಿ ಓಡುತ್ತಿದ್ದಂತೆ ನಮ್ಮ ಬದಿಯಲ್ಲಿದ್ದ ಮಹಾರಾಷ್ಟ್ರದ ಮಕ್ಕಳು ಕುಣಿದಾಡತೊಡಗಿ ದರು. ಮಾರ್ಗದ ಬಲಕ್ಕೆ ಕಣಿವೆ ಇದ್ದು ಅದರ ಮಧ್ಯೆ ಹಾಯ್ದುಹೋಗಿರುವ ಹಾವಿನಂತೆ ಅಂಕುಡೊಂಕಾದ ಡಾಂಬರು ರಸ್ತೆ ಹಾಗೂ ನದಿಯ ದೃಶ್ಯ ಆಕರ್ಷಕವಾಗಿತ್ತು. ಸುಂದರ ವಾಗಿ ಕಂಡ ದೃಶ್ಯಗಳನ್ನೆಲ್ಲಾ ಕ್ಯಾಮರಾದಲ್ಲಿ ಸೆರೆ ಹಿಡಿಯಲು ಸಿದ್ಧವಾಗುತ್ತಿದ್ದಂತೆ ಮರವೋ, ಕಂಬವೋ ಇಲ್ಲವೆ ಮತ್ತೊಂದೋ ಅಡ್ಡ ಬಂದುಬಿಡುತ್ತಿತ್ತು. ಸುರಂಗದೊಳಗೆ ರೈಲು ಪ್ರವೇಶಿಸಿದಾಗ ಕತ್ತಲು ಕವಿಯುತ್ತಿದ್ದುದರಿಂದ ಮಕ್ಕಳು ದೊಡ್ಡವರಾದಿಯಾಗಿ ಎಲ್ಲರೂ, ಹೋSSS ಎಂದು ಕೂಗಿಕೊಳ್ಳುತ್ತಿದ್ದರು. ಅದೇ ರೈಲು ಶಿಖರದಂಚಿನಲ್ಲಿ ಹಾಗೂ ಸೇತುವೆಯ ಮೇಲೆ ಸುಮಾರು ಎರಡು ಅಡಿ ಅಗಲದ ನ್ಯಾರೋಗೇಜ್ ಮೇಲೆ ಊರುಗೋಲಿನ ನೆರ ವಿನಿಂದ ನಡುಗುತ್ತಾ ನಡೆಯುವ ಮುದುಕಿ ಯಂತೆ ಚಲಿಸುವಾಗ ಎಲ್ಲಿ ಆಳವಾದ ಕಣಿವೆ ಅಥವಾ ಕಮರಿಯೊಳಗೆ ಬಿದ್ದುಬಿಡುತ್ತೇವೋ ಎಂಬ ಭೀತಿಯಿಂದ ಮಕ್ಕಳು ಕಣ್ಣುಮುಚ್ಚಿ ದೊಡ್ಡವರನ್ನು ಗಟ್ಟಿಯಾಗಿ ಅಪ್ಪಿ ಗಪ್‌ಚಿಪ್ ಎನ್ನದೆ ಕುಳಿತರೆ, ಸುತ್ತಮುತ್ತ ಮಕ್ಕಳು ಹಾಗೂ ಅನ್ಯರು ಇರುವರೆಂಬ ಪರಿವೆಯೇ ಇಲ್ಲದೆ ತಮ್ಮದೇ ಪ್ರಪಂಚದಲ್ಲಿ ಮುಳುಗಿ ಸರಸ-ಸಲ್ಲಾಪದಲ್ಲಿ ತಲ್ಲಿನರಾಗಿದ್ದ ನವವಧು ಗಳು ತಮ್ಮ ಪತಿಯ ಬಾಹುಬಂಧನದಲ್ಲಿ ಭಯ ವಿಹ್ವಲವನ್ನು ವ್ಯಕ್ತಪಡಿಸುತ್ತಾ ಹುದು ಗಿಕೊಳ್ಳುತ್ತಿದ್ದರು. ಈ ಎಲ್ಲಾ ಸನ್ನಿವೇಶ ಮತ್ತು ದೃಶ್ಯಗಳು ನಮಗೆ ವಿನೂತನವಾದ ಮೋಜನ್ನು ನೀಡುತ್ತಿದ್ದವು. ರೈಲು ಮೇಲ್ಮುಖ ವಾಗಿ ಚಲಿಸುವಾಗ ಪ್ರಯಾಸದ ಅಂಬೆಗಾಲಿನ ವೇಗದಲ್ಲೂ, ಸಮತಟ್ಟಾದೆಡೆ ಮಧ್ಯಮ ವೇಗದಲ್ಲೂ, ಇಳಿಜಾರಿನಲ್ಲಿ ತುಸು ವೇಗ ದಲ್ಲೂ ದಾರಿಯನ್ನು ಹಿಮ್ಮೆಟ್ಟಿಸುತ್ತಿತ್ತು.

ಕಲ್ಕಾ ಮುಂದಿನ ನಿಲ್ದಾಣವೇ ಸಮುದ್ರ ಮಟ್ಟದಿಂದ ೪೯೦೦ ಅಡಿ ಎತ್ತರದಲ್ಲಿರುವ ಧರ್ಮಪುರ. ನಮ್ಮ ರೈಲುಗಾಡಿ ಅಲ್ಲಿಂದ ಮುಂದೆ ಸಿಗುವ ಮೂರು ಕುಣಿಕೆಯಾಕಾರದ ದಾರಿಯನ್ನು ಕ್ರಮಿಸಿ ೬೩೨೨ ಅಡಿ ಎತ್ತರದ ಲ್ಲಿರುವ ಕಸೌಲಿಯನ್ನು ಸೇರಿತು. ಇಲ್ಲಿ ಕಾಡು ಮೇಡು, ನದಿ ಮುಂತಾದ ದೃಶ್ಯ ವೈಭವದಿಂದ ವಿಜೃಂಭಿಸುವ ಕಲ್ಕಾ ಕಣಿವೆಯು ತೆರೆದುಕೊ ಳ್ಳುತ್ತದೆ. ಸೌಲಿಯಲ್ಲಿ ವ್ಯಾಕ್ಸಿನ್ ತಯಾರಿಸುವ ಹಾಗೂ ಟೈಫಾಯಿಡ್, ಕಾಲರಾ, ಸಿಡುಬುಗ ಳನ್ನು ತಡೆಗಟ್ಟುವ ಔಷಧಿ ಹಾಗೂ ಹಾವು ಮತ್ತು ನಾಯಿ ಕಚ್ಚಿದವರಿಗೆ ನೀಡುವ ಪ್ರತಿ ವಿಷ ಮದ್ದುಗಳನ್ನು ತಯಾರಿಸುವ ಕೇಂದ್ರ ಸಂಶೋಧನಾ ಘಟಕವಿದೆ. ಒಟ್ಟು ೧೩೦ ಸುರಂಗಗಳಿರುವ ಈ ಮಾರ್ಗದಲ್ಲಿ ಕಸೌಲಿ ಯಿಂದ ಮುಂದಕ್ಕೆ ೫೨೦೦ ಅಡಿ ಎತ್ತರದಲ್ಲಿ ರುವ ಕುಮಾರಹಟ್ಟಿ ಮೂಲಕ ಬಾರೋಗ್ ಶಿಖರದ ಬೆನ್ನೇಣಿಯ ಕೆಳಗೆ ಹಾದು ಹೋಗುವ ಹಾದಿಯಲ್ಲಿ ಅತ್ಯಂತ ಉದ್ದನೆಯ ಅಂದರೆ, ೩೭೫೬ ಅಡಿ ಉದ್ದದ ಸುರಂಗ ವಿದೆ. ನಮ್ಮ ಗಾಡಿ ಇದನ್ನು ದಾಟಿ ೫೦೨೦ ಅಡಿ ಎತ್ತರದಲ್ಲಿರುವ ಬಾರೋಗ್ ನಿಲ್ದಾಣ ವನ್ನು ಸುಮಾರು ೧೧ ಗಂಟೆಯ ಹೊತ್ತಿಗೆ ತಲುಪಿತು. ಮಾರ್ಗದುದ್ದಕ್ಕೂ ಪರ್ವತದ ಮೇಲೆ ಅಲ್ಲಲ್ಲಿ ವಾಸವಾಗಿರುವ ಪಹಾಡಿ ಜನರ ಜೀವನವನ್ನು ಗಮನಿಸಬಹುದು. ಅವರು ಮೇಯಿಸುವ ದನ ಅಥವಾ ಕುರಿಗಳು

ಕೆಲವೆಡೆ ಬ್ರೇಕ್ ಇನ್ಸ್‌ಪೆಕ್ಟರ್‌ಗಳಂತೆ ಮಾರ್ಗ ಮಧ್ಯೆ ನಿಂತು ಅಡಚಣೆಯನ್ನು ಉಂಟುಮಾಡುತ್ತವೆ. ಹಿಂದಿನ ಬೋಗಿಯಲ್ಲಿ ಕುಳಿತಿದ್ದ ನಮಗೆ ಗಾಡಿ ಬೆಟ್ಟದಂಚಿನ ತಿರುವುಗಳಲ್ಲಿ ಬಸವನ ಹುಳುವಿನಂತೆ ಬಾಗುತ್ತಾ, ಬಳುಕುತ್ತಾ ಸಾಗುತ್ತಿದ್ದ ಹಾಗೂ ಸುರಂಗದ ಬಾಯನ್ನು ಪ್ರವೇಶಿಸುತ್ತಿದ್ದ ದೃಶ್ಯ ಆಕರ್ಷಕವಾಗಿ ಕಾಣುತ್ತಿತ್ತು.

ನಂತರದ ಮಾರ್ಗವು 'ಮಾಸಿರ್' ಎಂಬ ಮೀನಿಗೆ ಖ್ಯಾತವಾಗಿರುವ 'ಗಿರಿ' ಎಂಬ ಕಣಿವೆಯು ಮೇಲಕ್ಕೇರಿ ಪೂರ್ವ ಪಂಜಾಬ್ ವಿಶ್ವವಿದ್ಯಾಲಯವಿರುವ ಸೋಲನ್ ನಗರವನ್ನು ತಲುಪಿದ ನಂತರ ಘಾಟ್ ದಾಟಿ, ತನ್ನ ಪ್ರಯಾಣವನ್ನು ಕೆಳಮುಖವಾಗಿ ಕ್ರಮಿಸಿ, ಪಾಟಿಯಾಲಾದ ಪ್ರಮುಖ ಬೇಸಿಗೆ ಕೇಂದ್ರವಾದ ಚೈಲ್ (೪೬೯೦ ಅಡಿ) ತಲುಪುತ್ತದೆ. ಈ ನಿಲ್ದಾಣಗಳಲ್ಲಿ ಪರ್ವತ ಪ್ರದೇಶದ ತಿಂಡಿ ತಿನಿಸುಗಳು ಸಿಗುತ್ತವೆ. ಅಭ್ಯಾಸವಿಲ್ಲದಿದ್ದರೆ ತಿನ್ನುವುದು ಕಷ್ಟ. ಇಲ್ಲಿ ಆ ಪ್ರದೇಶದಲ್ಲಿ ಬೆಳೆಯುವ ಹಣ್ಣುಹಂಪಲುಗಳು ಅಗ್ಗವಾಗಿ ಸಿಕ್ಕರೂ ಕೆಲವು ಒಗರಾಗಿರುತ್ತವೆ. ಮಾರ್ಗದುದ್ದಕ್ಕೂ ಕಣಿವೆಯು ಒಮ್ಮೆ ಬಲಕ್ಕೆ ಬಂದರೆ ಇನ್ನೊಮ್ಮೆ ಎಡಭಾಗಕ್ಕೆ ಬರುತ್ತದೆ.

ಚೈಲ್‌ನಿಂದ ರೈಲು ಉತ್ತರಾಭಿಮುಖ



ವಾಗಿ ಮೇಲೇರಿ ತಾರಾದೇವಿ ಶಿಖರದ ಬಳಿ ಸಮಾನಾಂತರವಾಗಿ ಸುತ್ತಿದ ನಂತರ ಜುಟೋಹ್ಸ್ ಶಿಖರವನ್ನು ಪೂರ್ವ ಮತ್ತು ಉತ್ತರದಿಕ್ಕಿನಿಂದ ಇಳಿಮುಖವಾಗಿ ಬಳಸಿ, ಒಮ್ಮೆಗೆ ೧೫೫೦೦ ಅಡಿ ಮೇಲಕ್ಕೇರುತ್ತದೆ. ಅನಂತರ ದಟ್ಟವಾಗಿ ಬೆಳೆದ ಪೈನ್ ಮತ್ತು ದೇವದಾರು ಮರಗಳಿರುವ ಮಾರ್ಗವನ್ನು ಕ್ರಮಿಸಿ ಜುಟೋಹ್ಗ್ ತಲುಪಿದ ನಂತರ ವಕ್ರವಾಗಿ ಬಳಸಿ ಉತ್ತರದ ಕಡೆಯಿಂದ 'ಸಮ್ಮರ್ ಹಿಲ್' ಶಿಖರವನ್ನು ದಾಟಿ, ಸುರಂಗ ವೊಂದರ ಮೂಲಕ ಶಿಮ್ಲಾವನ್ನು ತಲುಪಿ, ಆರು ಗಂಟೆಗಳ ಸುದೀರ್ಘ ಪ್ರಯಾಣಕ್ಕೆ ಮಂಗಳ ಹೇಳುತ್ತದೆ.

ಶಿಮ್ಲಾ ರೈಲು ನಿಲ್ದಾಣ ಎಡ ಪಾರ್ಶ್ವದಲ್ಲಿ ರುವ ಡಾಂಬರು ರಸ್ತೆಗಿಂತ ಸುಮಾರು ಇನ್ನೂರು ಅಡಿ ಕೆಳಗಿದೆ. ಆ ರಸ್ತೆಯಿಂದ ನೋಡಿದರೆ ಯಾವುದೋ ಪುಟ್ಟ ಗಣಿಯಂತೆ ಗೋಚರಿಸುತ್ತದೆ. ನಿಲ್ದಾಣದಲ್ಲಿ ಡೀಜೆಲ್ ಟ್ರೈನ್ ಕಾರುಗಳನ್ನು ಕಾಣಬಹುದು. ಎಂಟು ಹತ್ತು ಜನ ಆರಾಮವಾಗಿ ಕುಳಿತು ಪ್ರಯಾಣಿ ಸುವಷ್ಟು ಸ್ಥಳಾವಕಾಶವಿರುವ ಪುಟ್ಟ ಬೋಗಿ ಯೊಳಗೇ ಇಂಜಿನ್ ಕ್ಯಾಬಿನ್ ಸಹ ಇದೆ. ಶಿಮ್ಲಾ ಪ್ರವಾಸವೇ ಶ್ರೀಸಾಮಾನ್ಯರಿಗಲ್ಲ. ಹಾಗೆಯೇ ಈ ಕಾರಿನ ಪ್ರಯಾಣವೂ ಸಾಮಾನ್ಯ ಶ್ರೀಮಂತರಿಗಲ್ಲ. ಸುಖಾಸನಗಳಿ ರುವ ಹಾಗೂ ಹವಾನಿಯಂತ್ರಣದ ವ್ಯವಸ್ಥೆ ಯಿರುವ ಈ ಕಾರುಗಳಲ್ಲಿ ವಿದೇಶಿ ಪ್ರವಾಸಿ ಗರು ಪ್ರಯಾಣಿಸುವುದನ್ನು ನೋಡಿದೆವು.

ಟ್ರೈನಿನಿಂದ ಇಳಿಯುತ್ತಿದ್ದಂತೆ ಕೂಲಿಗಳು ದುಂಬಾಲು ಬೀಳುತ್ತಾರೆ. ಆದರೆ ಈ ಮುಗ್ಧ ಜನ ಹೆಚ್ಚು ಕೂಲಿಗಾಗಿ ಕಾಡದೆ ನ್ಯಾಯಯು ತವಾಗಿ ಕೊಡಬೇಕಾದಷ್ಟು ಕೊಟ್ಟರೆ ತೃಪ್ತ ರಾಗಿ ಕೃತಜ್ಞತೆಯನ್ನರ್ಪಿಸುತ್ತಾರೆ. ಶಿಮ್ಲಾದಲ್ಲಿ ಮಧ್ಯಾಹ್ನದ ಮೇಲೆ ವಸತಿಗಳು ಸಿಗುವುದಿಲ್ಲ. ನಾವು ೭.೪೫ರ ಟ್ರೈನಿನಲ್ಲಿ ಪ್ರಯಾಣವನ್ನು ಪ್ರಾರಂಭಿಸಿದಾಗಲೇ ಪ್ರಯಾಣಿಕರಲ್ಲಿ, ಶಿಮ್ಲಾಕ್ಕೆ ತಡವಾಗಿ ಹೋದರೆ ರೂಮು ಸಿಗುವುದಿಲ್ಲವಂತೆ! ಸಿಕ್ಕರೂ ಐನೂರು, ಆರು ನೂರಕ್ಕೆ ಕಡಿಮೆ ಇಲ್ಲವಂತೆ! ಕರೆಂಟಿಗೆ ಕೊರತೆಯಂತೆ ! ನೀರಿಗೆ ಬರವಂತೆ! ಎಂಬಿ ತ್ಯಾದಿಯಾಗಿ ಮಾತಾಡಿಕೊಳ್ಳುತ್ತಿದ್ದರು. ಅದನ್ನು ಕೇಳಿದ ಕೆಲವರು ಆತಂಕದಿಂದ ಕಡಿಮೆ ಬಾಡಿಗೆಗೆ ಉತ್ತಮ ವಸತಿಗಾಗಿ ಶಿಮ್ಲಾಗೆ ಹತ್ತಿರದಲ್ಲಿರುವ ಊರುಗಳಲ್ಲಿ ಇಳಿ ದುಕೊಂಡರು. ಆದರೆ ನಮಗೆ ಶಿಮ್ಲಾದಲ್ಲಿ ವಸತಿಯ ತೊಂದರೆಯೇನಾಗಲಿಲ್ಲ. ಸ್ನೇಹಶೀ ಲರಾದ ಕೂಲಿಗಳು ತಮ್ಮಂತೆಯೇ ನಾವೂ ಬೆಟ್ಟ ಹತ್ತಿಳಿಯುವ ಜನರೆಂಬ (ಬಾರಣಿಗ ರೆಂಬ) ಆತ್ಮೀಯತೆಯಿಂದ ನಮ್ಮನ್ನು ಕರೆದು ಕೊಂಡು ಹೋಗಿ, ಬಾಡಿಗೆ ಹೆಚ್ಚೂ ಅಲ್ಲದ, ಕಡಿಮೆಯೂ ಅಲ್ಲದ ಹಾಗೂ ರೂಮು ಉತ್ತಮವೂ ಅಲ್ಲದ, ಕಳಪೆಯೂ ಅಲ್ಲದ, ಆದರೆ ತಂಗಲು ಯೋಗ್ಯವಾದ ವಸತಿಯನ್ನು ಕೊಡಿಸಿದರು. ಅವರ ಸಹಾಯಕ್ಕಾಗಿ ಐದು ರೂಪಾಯಿಗಳ ಇನಾಮು ನೀಡಿದಾಗ ಕೃತಜ್ಞ ತೆಯಿಂದ ಸಲಾಮು ಮಾಡಿ ಬೀಳ್ಕೊಟ್ಟರು.

---

## ಅನುಭವ

"ಈ ಮನೆಯಲ್ಲಿ ದೆವ್ವಗಳಿವೆಯಂತೆ! ನೀವು ಒಬ್ಬರೇ ಹೇಗಪ್ಪ ಈ ಘುನೆಯುಲ್ಲಿ ಇರ್ತೀರಾ ?" ಎಂದ ಚೆನ್ನಪ್ಪ ತನ್ನ ಮಿತ್ರನೊಡನೆ ಭೂತಬಂಗಲೆಯನ್ನು ವೀಕ್ಷಿಸುತ್ತಾ.

"ಮೂವತ್ತು ವರ್ಷ ನನ್ನ ಹೆಂಡತಿಯೊಡನೆ ಸಂಸಾರ ಮಾಡಿದ ಅನುಭವವಿದೆ," ಎಂದು ಆತ!

★ ಎಂ. ಶಾರದಾ ನಾಗಭೂಷಣ

## ಸ್ವಾತಂತ್ರ್ಯೋತ್ಸವದ ಒಂದು ಚಿರಸ್ಮರಣೀಯ ಘಟನೆ

# ದೇವಿಯ ಪ್ರಾಮಾಣಿಕತೆಗೆ ಗಾಂಧೀಜಿ ಕಣ್ಣೀರಿಟ್ಟರು

೧೯೩೪ರ ಫೆಬ್ರುವರಿಯ ಕೊನೆ ವಾರದಲ್ಲಿ ಗಾಂಧೀಜಿ ಸಿದ್ದಾಪುರಕ್ಕೆ ಬಂದಾಗ ಒಂದು ಹೃದಯ ಸ್ಪರ್ಶಿ ಘಟನೆ ಜರುಗಿತು.

ಗಾಂಧೀಜಿ ಹುಡದೀ ಬೈಲಿನಲ್ಲಿ (ಈಗಿನ ನೆಹರೂ ಮೈದಾನ) ಸುರಗೀ ಹೂವಿನಿಂದ ಅಲಂಕರಿಸಲ್ಪಟ್ಟ ಸುಂದರವಾದ ವೇದಿಕೆಯಲ್ಲಿ ಆಸೀನರಾಗಿದ್ದರು. ಅವರ ಮಾತನ್ನು ಕೇಳಲು ಸುತ್ತಮುತ್ತಲ ಹಳ್ಳಿಗಳಿಂದ ದೊಡ್ಡ ಸಂಖ್ಯೆಯಲ್ಲಿ ಜನ ಆಗಮಿಸಿದ್ದರು.

ಆಗ ಒಂದು ಚಿರಸ್ಮರಣೀಯ ಘಟನೆ ಜರುಗಿತು. ಸಿದ್ದಾಪುರದ ನಾಗರಿಕರು ಸ್ವಯಂಪ್ರೇರಿತರಾಗಿ ದೇವಿ ಕೋಂ. ಶಿವಪ್ಪ ಎಂಬ ಅತ್ಯಂತ ಹಿಂದುಳಿದ ಹಸಲರ ಮಹಿಳೆಯನ್ನು ಹೂಗಳಿಂದ ಸಿಂಗರಿಸಿ ವಾದ್ಯ ಸಮೇತ ಮಹಾತ್ಮರ ಸಮ್ಮುಖದಲ್ಲಿ ಕರೆತಂದು ನಿಲ್ಲಿಸಿದರು.

ಆಕೆಯನ್ನು ಮಹಾತ್ಮಾಗಾಂಧಿಯವರಿಗೆ ಸತ್ಯಾಗ್ರಹಿ ಶಂಕರರಾವ್ ಗುಲವಾಡಿ ಪರಿಚಯಿಸುತ್ತ ಹೇಳಿದ ಮಾತುಗಳು ಮನಮಿಡಿಯುವಂತಹದಾಗಿವೆ.

ಆಗ ಸಿದ್ದಾಪುರದಲ್ಲಿ ಅತ್ಯಂತ ಬಡತನ. ಸರಕಾರಕ್ಕೆ ಕರ ನೀಡಲು ಸಾಧ್ಯವಾಗದೆ ಬಹುತೇಕ ಜನ ಕರನಿರಾಕರಣೆ ಚಳುವಳಿಯಲ್ಲಿ ಧುಮುಕಿದ್ದರು. ಸರಕಾರ ಕರ ವಸೂಲಿಗಾಗಿ ಮನೆ ಜಪ್ತಿ, ಕರನೀಡಲು ನಿರಾಕರಿಸಿದವರ ಬಂಧನ, ದೈಹಿಕ ಹಿಂಸೆ ಮುಂತಾಗಿ ಜನರನ್ನು ಶೋಷಿಸುತ್ತಿತ್ತು. ಇದನ್ನು ನಿರೀಕ್ಷಿಸಿದ್ದ ಕಳಗಿನಮನೆ ನಾಗೇಶ ಹೆಗಡೆ ಹಾಗೂ ಅವರ ಅಣ್ಣತಮ್ಮಂದಿರು ಇದ್ದಬಿದ್ದ ಚಿನ್ನ, ಬೆಳ್ಳಿ, ನಗದು ಹಣವನ್ನು ಒಂದು ಪಾತ್ರೆಯಲ್ಲಿಟ್ಟು ಅದನ್ನು ರಕ್ಷಿಸುವ ಹೊಣೆಯನ್ನು ಕಿರಿಯ ತಮ್ಮನಿಗೆ ವಹಿಸಿ, ಕರನಿರಾಕರಣೆಯ ಸತ್ಯಾಗ್ರಹದಲ್ಲಿ ಧುಮುಕಿ ಜೈಲು ಸೇರಿದರು.

ಚಿನ್ನ, ಬೆಳ್ಳಿ, ಹಣ ತುಂಬಿದ ತಪ್ಪಲೆಯನ್ನು ತಮ್ಮ ಯಾರಿಗೂ ಕಾಣದಂತೆ ಅಡಿಕೆ ತೋಟದಲ್ಲಿ ಹುಗಿದಿಟ್ಟ. ಆದರೆ ಆತನೂ

ಸ್ವಯಂಸೇವಕನಾಗಿ ಕೆಲಸ ಮಾಡುತ್ತಿದ್ದಾಗ ಪೋಲಿಸರಿಗೆ ಸಿಕ್ಕಿ ಬಿದ್ದು ಜೈಲು ಸೇರಿದ. ಆತ ಆರು ತಿಂಗಳು ಶಿಕ್ಷೆ ಅನುಭವಿಸಿ ಮನೆಗೆ ಬಂದಾಗ ತೋಟದಲ್ಲಿ ಹುಗಿದಿಟ್ಟ ಜಾಗದಲ್ಲಿ ಹಣದ ತಪ್ಪಲಿ ಇರಲಿಲ್ಲ. ಜೈಲಿಗೆ ಹೋದದ್ದರಿಂದ ಕೃಷಿ ಕೆಲಸ ಹಾಳಾಗಿ ಬೆಳೆ ಬರುವಂತಿರಲಿಲ್ಲ. ಸಂಗಡ ಆಪತ್ತಿನ ಕಾಲಕ್ಕಾಗುತ್ತದೆ ಎಂದು ಹೂತಿಟ್ಟ ನಗನಾಣ್ಯ ತುಂಬಿದ್ದ ತಪ್ಪಲಿಯೂ ಕಾಣುತ್ತಿಲ್ಲ. ಆತ ಹೌಹಾರಿದ. ಅಣ್ಣ ಹಾಗೂ ಅತ್ತಿಗೆ ಜೈಲಿನಿಂದ ಬಿಡುಗಡೆಯಾಗಿ ಬಂದ ನಂತರ ಅವರಿಗೆ ಏನು ಹೇಳಲಿ? ತಾನು ಅವರನ್ನು ವಂಚಿಸಿದಂತಾಗುವುದಿಲ್ಲವೆ? ಎಂದೆಲ್ಲ ವಿಚಾರ ಮಾಡುತ್ತ ಆತ ಮನಃಸ್ವಾಸ್ಥ್ಯ ಕಳೆದುಕೊಂಡ.

ಅವರಿವರ ಬಾಯಿಂದ ಈ ವಿಷಯ ಪೋಲಿಸರಿಗೆ ಗೊತ್ತಾಯಿತು. ಅವರು ತೋಟಕ್ಕೆ ಕಾವಲಿಟ್ಟರು. ಅಲ್ಲದೆ ಕಂಡಕಂಡಲ್ಲಿ ಅಗೆಯತೊಡಗಿದರು.

ತೋಟದ ಸಮೀಪ ಇರುವ ದೇವಿಯ ಮನೆಗೂ ಇದರ ಬಿಸಿ ತಟ್ಟಿತು. ಆಕೆಯ ಗಂಡ ಶಿವಪ್ಪನನ್ನು ಪೋಲೀಸರು ಹಿಡಿದು, "ತಪ್ಪಲಿ ಎಲ್ಲಿ? ಕೊಡು," ಎನ್ನುತ್ತಾ ಆತನ ಬಾಯಿಬಿಡಿಸಲು ಹಿಂಸಿಸತೊಡಗಿದರು. ಆತ ತನಗೆ ಗೊತ್ತಿಲ್ಲ ಎಂದಷ್ಟೂ ಹಿಂಸೆ ನೀಡುವುದು ಹೆಚ್ಚಾಯಿತು. ನಂತರ ಆತನನ್ನು ಬಿಟ್ಟು ದೇವಿಯನ್ನು ಕರೆಸಿ ಆವಳನ್ನು ಹೊಡೆದು ಹಿಂಸಿಸಿದರು. ನಂತರ ಆಸುಪಾಸಿನ ಜನರನ್ನು ತಪ್ಪಲಿಗಾಗಿ ಪೀಡಿಸಿದರು. ಆದರೆ ಅವರಿಗೆ ಏನೂ ಪ್ರಯೋಜನವಾಗಲಿಲ್ಲ.

ಇತ್ತ ತಮ್ಮನ ಪರಿಸ್ಥಿತಿ ಎಷ್ಟು ಬಿಗಡಾಯಿಸಿತ್ತೆಂದರೆ ಜೈಲಿನಿಂದ ಬಿಡುಗಡೆಯಾಗಿ ಬಂದ ತನ್ನ ಹೆಂಡತಿಯ ಗುರುತೇ ಆತನಿಗೆ ಸಿಗಲಿಲ್ಲ. ಸ್ವಾತಂತ್ರ್ಯ ಹೋರಾಟಗಾರ ಕೆ.ಎ.ವೆಂಕಟರಾಮಯ್ಯ ಅವರು ಆತ ಜೀವಕ್ಕೆ ಅಪಾಯವುಂಟುಮಾಡಿಕೊಳ್ಳಬಹುದೆಂದು ಆತನ ಕಾವಲಿಗೆ ಇಬ್ಬರು ಸ್ವಯಂ ಸೇವಕರನ್ನು ನಿಯಮಿಸಿದರು. ಕ್ರಮೇಣ ಕುಟುಂಬದ ಸದಸ್ಯರೆಲ್ಲ ಒಬ್ಬೊಬ್ಬರಾಗಿ ಬಿಡುಗಡೆಯಾಗುತ್ತ ಬಂದರು. ಕೊನೆಯಲ್ಲಿ ಬಿಡುಗಡೆಯಾಗಿ ಬಂದವರು ನಾಗೇಶ ಹೆಗಡೆಯವರು. ಅವರು ಬಿಡುಗಡೆಯಾಗಿ ಬಂದ ದಿನ ಸಿದ್ದಾಪುರದಲ್ಲಿ ಅವರು ಗೌರವಾರ್ಥ ಸಭೆ ಮೆರವಣಿಗೆ ಮೊದಲಾದವು ನಡೆದವು. ಎಲ್ಲ ಮುಗಿಸಿ ಹೆಗಡೆಯವರು ಮನೆಗೆ ಬಂದಾಗ ರಾತ್ರಿಯಾಗಿತ್ತು. ಮನೆಯ ಭೂಮಿ ಸರಕಾರದ ವಶವಾದದ್ದು, ಆಪತ್ತಿನ ಕಾಲಕ್ಕೆಂದು ಇರಿಸಿಕೊಂಡಿದ್ದ ತಪ್ಪಲಿ ಕಾಣೆಯಾದದ್ದು ಗೊತ್ತಾಯಿತು.

ಅಷ್ಟೊತ್ತಿಗೆ ಯಾರೋ ಮನೆಯ ಬಾಗಿಲು ತಟ್ಟಿದಂತಾಯಿತು.

ಬಾಗಿಲು ತೆರೆದರೆ ಎದುರಿಗೆ ದೇವಿ ನಗನಾಣ್ಯ ತುಂಬಿದ ತಪ್ಪಲಿ ಹಿಡಿದು ನಿಂತಿದ್ದಾಳೆ. ತಪ್ಪಲಿಯನ್ನು ತಂದು ಒಳಗಿಟ್ಟು, "ಸ್ವಾಮಿ, ಇಷ್ಟು ದಿನ ಇದನ್ನು ಕಾಯ್ದುಕೊಂಡು ಬಂದಿದ್ದೇನೆ. ಇಂದು ನಿಮಗೆ ಒಪ್ಪಿಸಿ ನಿಶ್ಚಿಂತೆಯಿಂದ ನಿದ್ದೆಮಾಡುತ್ತೇನೆ," ಎಂದಳು.

ನಾಗೇಶ ಹೆಗಡೆಯವರಿಗೆ ನಿಧಿ ಸಿಕ್ಕ ಸಂತೋಷಕ್ಕಿಂತಲೂ ಆಕೆಯ ಪ್ರಾಮಾಣಿಕತೆ ಹಾಗೂ ಸ್ವಾಮಿನಿಷ್ಠೆಯೇ ಹೆಚ್ಚು ಸಂತಸ ನೀಡಿತು.

"ನೀನು ಕಾಳಜಿಯಿಂದ ಕಾಪಾಡದಿದ್ದರೆ ಅದು ಯಾರ ಪಾಲಿಗೋ ಸೇರುತ್ತಿತ್ತು. ಆದರಲ್ಲಿ ನಿನಗಿಷ್ಟವಾದುದನ್ನು ನೀನು ತೆಗೆದುಕೊಳ್ಳಬೇಕು," ಎಂದರು.

"ಇವೆಲ್ಲ ನಿಮ್ಮದು, ನನಗೇನೂ ಬೇಡ, ಆದರಲ್ಲಿ ಇಟ್ಟದ್ದೆಲ್ಲ ಸರಿ ಇದೆಯೋ ಎಂದು ನೋಡಿ," ಎನ್ನುತ್ತ ತಪ್ಪಲಿಯಲ್ಲಿದ್ದುದನ್ನೂ ನೆಲಕ್ಕೆ ಸುರುವಿದಳು. ಎಲ್ಲವೂ ಸರಿಯಾಗಿತ್ತು.

ಕುಟುಂಬದ ಸದಸ್ಯರಿಗೆ ಆಕೆಯ ಸತ್ಯನಿಷ್ಠೆಯನ್ನು ನೋಡಿ ಕಣ್ಣು ತುಂಬಿಬಂತು.

ಹೆಗಡೆಯವರೇ ಒಂದು ಚಿನ್ನದ ಪದಕಗಳ ಸರವೊಂದನ್ನು ಆಕೆಗೆ ನೀಡಿದರೂ ತೆಗೆದುಕೊಳ್ಳಲಿಲ್ಲ.

ಆ ನಗನಾಣ್ಯಗಳ ತಪ್ಪಲಿ ಆಕೆಗೆ ಸಿಕ್ಕಿದ್ದಾದರೂ ಹೇಗೆ ? ಮನೆ ಜನರೆಲ್ಲ ಜೈಲಿಗೆ ಹೋದಮೇಲೆ ಒಂದು ದಿನ ದೇವಿ ತೋಟಕ್ಕೆ ಹೋದಾಗ ಮಳೆ ನೀರಿನಿಂದ ಕೊಚ್ಚಿಕೊಂಡು ಹೋದ ಕಾಲುವೆಯ ಬದಿಯಲ್ಲಿ ತಪ್ಪಲಿಯ ಅಂಚನ್ನು ಕಂಡಳು. ಹಸಿ ಸೊಪ್ಪನ್ನು ಮುಚ್ಚಿಟ್ಟು ರಾತ್ರಿ ಅದನ್ನು ತಂದು ಕುಡುಕನಾದ ಗಂಡ ಶಿವಪ್ಪನ ಕಣ್ಣಿಗೂ ಬೀಳದಂತೆ ಒಲೆಯ ಮುಂದೆ ತಗ್ಗು ತೆಗೆದು ಹೂತಿಟ್ಟು ಮೇಲೆ ಹಾಸುಗಲ್ಲಿರಿಸಿದಳು.

ಕೆಲ ದಿನಗಳಲ್ಲಿಯೇ ಕಿರಿಯ ಧಣಿ ಜೈಲಿನಿಂದ ಬಂದು, ತಪ್ಪಲಿ ಕಾಣದಾಗಲು ಕಂಗಾಲಾಗಿ ಆ ವಿಷಯವನ್ನು ಎಲ್ಲರೆದುರು ಹೇಳಿಕೊಂಡು ಪೇಚಾಡಿದ. ಪೊಲೀಸರ ಕಾಟ ಜಾಸ್ತಿಯಾಯಿತು. ತಪ್ಪಲಿ ತನ್ನಲ್ಲಿರುವ ವಿಷಯವನ್ನು ಚಿಕ್ಕ ಧಣಿಗೆ ಹೇಳಬೇಕೆಂದರೂ ಹೇಳಲಾಗದೆ ಆಕೆ ಸುಮ್ಮನುಳಿದಳು. ಪೋಲೀಸರಿಂದ ಪೆಟ್ಟು ತಿಂದು ಆಕೆಯ ಗಂಡ ಜ್ವರ ಹಿಡಿದು, ನಂತರ ಮೈಲಿಬೇನೆಗೆ ತುತ್ತಾಗಿ ಮರಣ ಹೊಂದಿದ. ದೇವಿಯ ಮಗ ಪರದೇಶಿಯಾದ. "ಮಗನ ಮುಖ ನೋಡಿಕೊಂಡು ಈವರೆಗೆ ನಾನು ಬದುಕಿದ್ದೇನೆ. ನಿಮ್ಮ ಸೊತ್ತು ನಿಮಗೆ ಸೇರುವವರೆಗೂ ಕೊರಗು ಇತ್ತು. ಈಗ ನಾನು ನಿಶ್ಚಿಂತೆ," ಎಂದು ದೇವಿ ಹೇಳಿದಾಗ ಹೆಗಡೆಯವರ ಹೃದಯ ತುಂಬಿಬಂತು.

"ನಿನ್ನ ಮಗ ಪರದೇಶಿಯಾಗಿಲ್ಲ, ನನ್ನ ಇನ್ನೊಬ್ಬ ತಮ್ಮನೆಂದು ತಿಳಿಯುತ್ತೇನೆ. ನಿನಗಾಗಿ ಅಲ್ಲದಿದ್ದರೂ ಆತನಿಗಾಗಿಯಾದರೂ ಈ ನಗನಾಣ್ಯದಲ್ಲಿ ಕೆಲವನ್ನು ತೆಗೆದುಕೋ," ಎಂದರೂ ಆಕೆ ಸ್ವೀಕರಿಸದೆ, "ಈ ತಪ್ಪಲಿ ಇಟ್ಟುಕೊಂಡನಂತರ ಒಂದು ದಿನವೂ ನಾನು ಸುಖವಾಗಿ ಕಳೆಯಲಿಲ್ಲ. ನಿಮ್ಮದಾದ ಚಿನ್ನವನ್ನು ಒಯ್ದರೆ ನನ್ನ ಮಗನೂ ನನ್ನ ಪಾಲಿಗೆ ಇರಲಾರ" ಎನ್ನುತ್ತ ಆಕೆ ಹೋಗಿಬಿಟ್ಟಳು.

ಬಡವ ಬಲ್ಲಿದರೆಂಬ ಭೇದವಿಲ್ಲದೇ ಆಕೆಯನ್ನು ಸತ್ಕರಿಸಿ, ಆರತಿ ಮಾಡಿ ಇಂದು ಸಭೆಗೆ ಕರೆತಂದಿದ್ದಾರೆ ಎಂದು ಗುಲವಾಡಿಯವರು ಹೇಳಿದಾಗ ಗಾಂಧೀಜಿ ಕಣ್ಣೊರೆಸಿಕೊಳ್ಳುತ್ತ,

"ದೇವಿಯಂತಹ ಪುಣ್ಯವಂತರು ಭೂಮಿಯ ಮೇಲೆ ಇರುವುದರಿಂದಲೇ ಜಗತ್ತು ನಡೆಯುತ್ತಿದೆ," ಎಂದು ಉದ್ಗರಿಸಿದರು.

• ರಾಜೀವ ಎ.

# ಅಚ್ಚಳಿಯದ ಪುಟಗಳು

# ಬೆಟ್ಟದ ಜೀವ

*ಪುಸ್ತಕದ ಹೆಸರು: ಬೆಟ್ಟದ ಜೀವ*
*ಲೇಖಕರು: ಕೆ. ಶಿವರಾಮ ಕಾರಂತ*
*ಪ್ರಕಾಶನ: ಎಸ್.ಬಿ.ಎಸ್. ಪಬ್ಲಿಷರ್ಸ್.*

**ನಾ**ರಾಯಣನೂ ನಾನೂ ಕಾಟುಮೂಲೆಯ ತೋಟದ ಸಂದಿಗೊಂದುಗಳನ್ನೆಲ್ಲ ತಿರುಗಿ ನೋಡಿದೆವು. ಆ ಬೆಟ್ಟದ ಮೈಗಳನ್ನು ಕೊರೆದು ಮಣ್ಣನ್ನು ನೀರಿನ ಪ್ರವಾಹಕ್ಕೆ ತೇಲಿಸಿಬಿಟ್ಟ ರೀತಿ, ನೆಲವನ್ನು ತಟ್ಟು ಮಾಡಿ ಕಂಗು- ಬಾಳೆಗಳನ್ನು ಬೆಳೆಸಿದ ರೀತಿ, ಆಳುಗಳಿಗೆ ಜ್ವರ ಬಂದು ಅವರು ಪರಾರಿಯಾಗುತ್ತಿದ್ದ ಬಗೆ-ಇವೆಲ್ಲವುಗಳ ಕಥೆಗಳನ್ನು ನಾರಾಯಣನ ಬಾಯಿಯಿಂದ ಇನ್ನೊಮ್ಮೆ ಕೇಳಿದ್ದಾಯಿತು. ನಾವಿಬ್ಬರೂ ತೋಟದ ಕುಡಿಯನ್ನು ಸೇರಿದಾಗಲಂತೂ ನನ್ನ ಮನಸ್ಸು ತುಂಬ ಹರ್ಷಗೊಂಡಿತ್ತು. ಅಲ್ಲಿ ಗೋಪಾಲಯ್ಯನ ಮನಸ್ಸು ಬಿಂಬಿಸುವಷ್ಟೇ ದೊಡ್ಡದಾದ ಕೊಳವಿತ್ತು. ನಾರಾಯಣನು ಅದನ್ನು ತೋರಿಸಿ ಮಾವನ ಮುಂಜಾಗ್ರತೆಯೆಂದರೆ ಹೀಗೆ, ಇಲ್ಲಿ ಬೆಟ್ಟದ ಝರಿಗಳು ಬತ್ತುವುದೆಂಬುದೇ ಇಲ್ಲ. ಆದರೂ ಒಂದಲ್ಲ ಒಂದು ಬೇಸಿಗೆಯಲ್ಲಿ ಅವು ಬತ್ತಿದ್ದಾದರೆ ತೋಟಕ್ಕೆ ನೀರಿನ ಕೊರತೆ ಉಂಟಾಗಬಾರದೆಂದು ಇಂಥ ಕಲ್ಲು ಕಟ್ಟಿಸಿದ ಕೆರೆಯನ್ನು ಮಾಡಿದ್ದಾರೆ. ಈಗೇನಾದರೂ ಇಲ್ಲಿ ಒಂದಾಳು ಎರಡಾಳು ನೀರಿರಬಹುದು ಎಂದ.

"ನೀವು ನಿತ್ಯವೂ ಇಲ್ಲಿಗೆ ಸ್ನಾನಕ್ಕೆ ಬರುವುದುಂಟೆ? ಎಂದೆ ನಾನು. "ಹಾಂ! ಈ ಥಂಡಿ ನೀರಿನಲ್ಲಿ ಮಿಂದರೆ ಮೈ ಮರಗಟ್ಟೀತು. ಇಲ್ಲಿ ಬಿಸಿಲು ಬೀಳುವುದೆಂಬುದೇ ಇಲ್ಲ. ನಾನಿಲ್ಲಿಗೆ ಬಂದ ಬಹುವರ್ಷಗಳ ತನಕ ಮೇಲಿನ ಅಬ್ಬಿಯ ನೀರಿರುವ ತನಕ ಈ ಕೆರೆಯು ವ್ಯರ್ಥವೆಂದೇ ತಿಳಿದಿದ್ದೆ. ಆದರೆ ಗೋಪಾಲಮಾವ ನನಗಿಂತ ನೂರು ವರ್ಷ ಮುಂದೆ ಕಾಣಬಲ್ಲರು. ಒಂದು ವರ್ಷ ಇದ್ದಕ್ಕಿದ್ದಂತೆ ಬೇಸಿಗೆ ಉರಿಯತೊಡಗಿತು. ಯುಗಾದಿಯ ಅನಂತರ ನಮ್ಮೂರಲ್ಲಿ ಎಂದು ಮಳೆ ಬಂದರೂ ಬರಬಹುದು. ಹಾಗಿದ್ದೂ ಆ ವರ್ಷ ಜೇಷ್ಠದಲ್ಲೇ ಮಳೆಯನ್ನು ಕಾಣಬೇಕಾಯಿತು. ಗುಡ್ಡಗಳೆಲ್ಲ ಬಿಸಿಲಿನಿಂದ ಉರಿದು ಹುಲ್ಲಿನ ಹುಟ್ಟೇ ಅಡಗಿತ್ತು. ಅಂತಹ ಕಾಲ ಇನ್ನು ಬರಲಾರದು, ಹಿಂದೆ ಬಂದಿರಲಿಲ್ಲ. ಕಾಡಿನ ಆನೆ ಕಾಟಗಳೇ ನೀರನ್ನರಸಿ ಅಲೆಯುತ್ತಿದ್ದ ದಿನಗಳವು. ಹಾಗೆ, ರಾತ್ರಿ ನೀರಿಗೆ ಬಂದ ಕಾಟಿಯ ಹಿಂಡುಗಳನ್ನು ನಾನು ಕಣ್ಣಾರೆ ಕಂಡಿದ್ದೇನೆ. ಈ ಕೆರೆಯ ನೀರಿನಿಂದಾಗಿ ಆ ವರ್ಷ ನಮ್ಮ ತೋಟಕ್ಕೆ ಒಂದಿಷ್ಟೂ ಹಾನಿ ತಟ್ಟಲಿಲ್ಲ. ಆದರೆ ಇಷ್ಟೆಲ್ಲವನ್ನೂ ಮಾಡಿಸಲು ಮಾತ್ರ ಹಣವನ್ನು ನೀರಿನಂತೆ ವೆಚ್ಚ ಮಾಡಿರಬೇಕು."

ನಾನೆಂದೆ, "ಈ ಮೂಲೆಯಲ್ಲಿ ಅಷ್ಟೆಲ್ಲ ಹಣ ಸುರಿದರೆ ಅದು ಕೈಗೆ ಬರುವುದುಂಟೆ? ನನಗೆ ಆ ಕಾಮಗಾರಿಗಳೆಲ್ಲ ಕೆಚ್ಚದೆಯ ಒಬ್ಬ ವ್ಯಕ್ತಿಯ ದುಡುಕುತನದ ಪರಮಾವಧಿ ಎಂದು ಕಾಣುತ್ತದೆ." ಹೂಂ, ನಿಮಗೆ ಹಾಗೆ ಕಾಣಿಸೀತು. ನನಗಾದರೂ ಹಾಗೆಯೇ ಕಂಡಿತ್ತು. ಆದರೆ ಆ ಮಾತನ್ನು ಮಾವಯ್ಯ ಕೇಳಿದರೆ ಮಾತ್ರ ನಗುತ್ತಾರೆ. 'ಮರುಳು ನಿನಗೆ ನಾರಾಯಣ. ದುಡ್ಡನ್ನು ಯಾವ ಮನುಷ್ಯನೂ ಕಟ್ಟಿಕೊಂಡು ಹೋಗುವುದಿಲ್ಲ. ದುಡ್ಡು ಕಳೆದರೇನಾಯಿತಂತೆ? ಈ ತೋಟಕ್ಕಾಗಿ ದುಡಿದವರಿಗೆ ಪ್ರಯೋಜನವಾಗಲಿಲ್ಲವೆ? ನಾನು ಹೋದ ಮೇಲೆಯೂ ಉಳಿಯುವ ಈ ತೋಟ, ಯಾರಿಗೂ ಎಂದಿಗೂ ಕೆಲಸಕ್ಕೆ ಬಾರದೇ ಹೋದಿತೇ? ಅದು ಬರಲಿಲ್ಲವೆಂದೇ ತಿಳಿಯುವ, ಇಲ್ಲಿರುವಷ್ಟು ದಿವಸ ಈ ಸೊಂಪಾದ ಸಸಿಗಳನ್ನು ಕಂಡು ನಾವು ಸಂತೋಷ ಪಟ್ಟದ್ದು ಸುಳ್ಳಾದೀತೆ? ಹಣ ಹೋಯಿತಲ್ಲಿಗೆ? ಅದು ಹಾಳಾಗುವುದು ಹೇಗೆ? ಅದರಿಂದ ನೂರು ಬಾಯಿಗಳು ನಾಲ್ಕೈದು ವರ್ಷ ಅನ್ನ ಉಂಡದ್ದು ಸುಳ್ಳೇ?' ಎನ್ನುತ್ತಾರೆ."

ಗೋಪಾಲಯ್ಯನ ಈ ತೆರೆದ ಜೀವನ- ದರ್ಶನವನ್ನು ನನ್ನ ಮುಂದೆ ವಿಸ್ತರಿಸುವಾಗ ನಾರಾಯಣನ ಬಾಯಿ, ಮುಖಗಳು ಅಷ್ಟು ಭಕ್ತಿಯಿಂದ ಕೂಡಿದ್ದವು. ಅಗಾಧ ಮಹಿಮನಾಗಿದ್ದ ಒಬ್ಬ ಗುರುವಿನ ಸಂದೇಶವನ್ನು ಅರ್ಥ ತಿಳಿಯದೆ ಹೋದರೂ ಭಕ್ತಿಭಾವದಿಂದ ಕಾಣುವಂತೆ ಅವನ ರೀತಿಯಿತ್ತು. ಈ ಎಲ್ಲ ಮಾತುಗಳನ್ನು ಕೇಳಿ ನನ್ನ ಪಾಲಿಗೆ ಗೋಪಾಲಯ್ಯ ಬೇರೆಯೇ ವ್ಯಕ್ತಿಯಾಗಿ ಕಾಣಿಸಿದರು. ನನ್ನ ಮನಸ್ಸಿನಲ್ಲಿ ಅವರ ನಿಲುವು ಮತ್ತಷ್ಟು ಹಿರಿದಾಯಿತು. 'ಬದುಕುವುದು ಹೊನ್ನಿಗಾಗಿ ಅಲ್ಲ' ಎಂಬ ಅವರ ನುಡಿಯನ್ನು ಅವರ ಜೀವನ ಧ್ವನಿಸುತ್ತಿತ್ತು.

**ಸಂಗ್ರಹ: ಎ.ಎಲ್. ಪ್ರಕಾಶ್**

**ಕೋಟಿಮನೆ (ನನ್ನಬಾಳಿನ ಕತೆಗಳು) ಲೇ: ಸಮೇತನ ಹಳ್ಳಿರಾಮರಾಯರು ಪ್ರಕಟಣೆ: ರಾಸಪ್ರಕಾಶನ, ೫೧೮, ೪ನೆಯ ದೊಡ್ಡಬೀದಿ, ಗೋಕುಲ IIIನೇ ಹಂತ, ಮೈಸೂರು-೨ ಬೆಲೆ: ರೂ. ೬೦-೦೦**

---

ಒಂದು ಮಧ್ಯಾಹ್ನ ಸುಮಾರು ಎರಡು ಗಂಟೆ ಸಮಯದಲ್ಲಿ ನಾನು ಕಚೇರಿಯ ನನ್ನ ಜಾಗದಲ್ಲಿ ಕುಳಿತು ಯಾವುದೋ ಕೆಲಸದಲ್ಲಿ ಮಗ್ನನಾಗಿದ್ದೆ. ಹಿಡಿದ ಮಳೆ ಧಾರಾಕಾರವಾಗಿ ಸುರಿಯುತ್ತಿತ್ತು. ಕಚೇರಿಯ ಕೆಲಸ ಅದೆಷ್ಟೆ ಹೆಚ್ಚಾಗಿರಲಿ, ಸ್ವಲ್ಪವಾಗಿ ಉಳಿದಿದ್ದರೂ ಅದನ್ನು ಮಾಡಿ ಮುಗಿಸದೆ ಇದ್ದರೆ, ಹಗುರಮನದವನಾಗದಿದ್ದರೆ, ನನಗೆ ಊಟವಾಗಲಿ ನಿದ್ದೆಯಾಗಲಿ ಬೇಕಾಗುತ್ತಿರಲಿಲ್ಲ. ಆದ್ದರಿಂದ ನಾನು ಮಧ್ಯಾಹ್ನದ ವಿರಾಮ ವೇಳೆಯಲ್ಲಿ ಹನ್ನೆರಡರಿಂದ ಮೂರುಗಂಟೆಯವರೆಗೆ, ಮತ್ತೆ ರಾತ್ರಿ ಹತ್ತು ಹನ್ನೊಂದು ಗಂಟೆಯವರೆಗೂ ಕೆಲಸ ಮಾಡುತ್ತಿದ್ದ ದಿನಗಳೇನೂ ಅಪರೂಪವಾಗಿರಲಿಲ್ಲ.

ಯಾವಾಗಲೋ ಒಮ್ಮೆ ಯಾರೋ ಹೊರಗಿನ ಕೈಸಾಲೆಯಲ್ಲಿ ಕೊಡೆಯನ್ನು ಹಿಡಿದು ತಂದು ಅಲ್ಲಿರಿಸಿದ ಸದ್ದು ಆಯಿತು. ಕಚೇರಿಯ ಸೇವಕ- ವರ್ಗದವರಿರಬೇಕೆಂದು ನಾನು ಅತ್ತ ಕಡೆ ತಿರುಗಿ ನೋಡಲಿಲ್ಲ. ಕೊಂಚ ಹೊತ್ತಾದ ನಂತರ ಹೆಣ್ಣುದನಿಯೊಂದು ತನ್ನ ಗಂಟಲನ್ನು ಸರಿಮಾಡಿಕೊಂಡ- ಹಾಗಾಯಿತು. ಕತ್ತೆತ್ತಿ ನೋಡಿದೆ. ಅಲ್ಲಿನ ವೈದ್ಯೆ ನನ್ನತ್ತಲೇ ನೆಟ್ಟಗಣ್ಣಿನಿಂದ ನೋಡುತ್ತಿದ್ದುದು ಕಂಡಿತು. ಆಕೆ ಚೆಲುವೆಯೊಂದೇ ಅಲ್ಲ, ಹಣ್ಣಾದ ಹರೆಯದಾಕೆ! ಅಲ್ಲಿದ್ದವರೆಂದರೆ ನಾವಿಬ್ಬರೆ.

ಮಳೆ ಸುರಿಯುತ್ತಲೇ ಇತ್ತು. ನಿತ್ಯವೂ ಆಕೆಯೊಡನೆ ಕೆಲಸದ ವಿಷಯವಾಗಿ ಕಾಗದಪತ್ರಗಳ ವಿಷಯವಾಗಿ ಮಾತನಾಡುತ್ತಿದ್ದೆ. ಆಕೆಯ ನೋಟವನ್ನೂ ನೋಡಿದ್ದೆ. ಈಗ ನೋಡುತ್ತಿದ್ದ ಮಾದಕ ನೋಟವನ್ನು ನಾನು ಎಂದೂ ಗಮನಿಸಿರಲಿಲ್ಲ. ಅದು ನನ್ನಲ್ಲಿ ಭಯದ ತರಂಗಗಳನ್ನು ಎಬ್ಬಿಸಿತು. ಆದರೂ ನಾನು ಅದಕ್ಕೆ ಯಾವ ಕೆಟ್ಟ ಅರ್ಥವನ್ನೂ ಕಲ್ಪಿಸಿಕೊಳ್ಳಲಿಲ್ಲ. ಆಕೆ ಅಲ್ಲಿಗೆ ಏನೋ ಕೆಲಸದ ನಿಮಿತ್ತ ಬಂದಿರಬೇಕೆಂದು ತಲೆಯನ್ನು ತಗ್ಗಿಸಿ ನನ್ನ ಕೆಲಸದಲ್ಲಿ ನಾನು ತೊಡಗಿದೆ. ಆಕೆ ಹಾಕಿಕೊಂಡಿದ್ದ ಪರಿಮಳದ ಸುವಾಸನೆ ನನ್ನ ಮೂಗನ್ನು ಮುತ್ತಿತು. ಆಕೆಯನ್ನು ಆವೇಳೆಯಲ್ಲಿ ಅಲ್ಲಿ ಯಾರೂ ನಿರೀಕ್ಷಿಸದಂತಹುದು. ನಿತ್ಯವೂ ಮೂರುವರೆ ಗಂಟೆಯ ಮೇಲೆ ತನ್ನ ಕೆಲಸದ ಮೇಲೆ ಇರುತ್ತಿದ್ದಳು. ಆಕೆಯ ಕೆಲಸದ ಕೊಠಡಿ ಈ ಮುಖ್ಯ ಕಟ್ಟಡದಿಂದ ಬೇರ್ಪಟ್ಟು ಒಂದಷ್ಟು ದೂರದಲ್ಲಿತ್ತು. ಈ ವೇಳೆಯಲ್ಲಿದೆ ಬೇರೆ ವೇಳೆಯಲ್ಲಿ ದಿನವೂ ನಾನಾದರೂ ಇರುತ್ತಿರಲಿಲ್ಲ. ಕೆಲಸ ಇದ್ದುದರಿಂದ ಆದಿವಸ ಇದ್ದೆ. ನಾನು ಅಲ್ಲಿದ್ದುದು ಸುರಿದ ಮಳೆಯಲ್ಲಿಯೂ ಆಕೆಗೆ ಗೊತ್ತಾದುದು ಹೇಗೆ ಎಂದು ನನಗೆ ಅರ್ಥವಾಗಲಿಲ್ಲ.

ನಾನು ಕತ್ತನ್ನೆತ್ತದೆ ಆಕೆ ಅಲ್ಲಿಂದ ಹೋದಳೇ ಎಂಬುದನ್ನು ಓರೆಗಣ್ಣಿನಿಂದಲೇ ನೋಡಿದೆ. ಆಕೆ ಹೋಗಲಿಲ್ಲ. ನಿಂತೇ ನಿಂತಳು. ಈಗ ಕಣ್ಣಿನ ಭಾವವೇನೆಂದು ನನಗೆ ಸ್ಪಷ್ಟವಾಗಿ ಅರಿವಾಯಿತು. ಹರೆಯದ ಆ ಹೆಣ್ಣಿನ ಕಣ್ಣನೋಟದಲ್ಲಿ ಹೃದಯದ ಭಾವತರಂಗಗಳನ್ನು ಕಾಣಲಾಗದಂತಹ ಅರಸಿಕ ಬರಹಗಾರನು ನಾನೇನೂ ಆಗಿರಲಿಲ್ಲ.

ಆಕೆಯ ಮುಖದಲ್ಲಿ ಉದ್ರೇಕಗೊಂಡಿದ್ದ ಆ ಭಾವ, ಹೆಚ್ಚು ಕೆಂಪಿಗೆ ತಿರುಗುತ್ತಿದ್ದ ಆ ಬಣ್ಣ, ಆ ಮಾಟಗಳು ಹಸಿವಿನಿಂದ ತುಂಬಿಕೊಂಡಿದ್ದವು. ಆಕೆಯ ನೋಟದ ತಿವಿತ ಸೂಕ್ಷ್ಮವಾದರೂ ತುಂಬ ಹರಿತವಾದುದು; ಉದ್ರೇಕಕಾರಿಯಾದುದು; ಉನ್ಮತ್ತವಾದುದು. ಅಲ್ಲಿ ಕೆಲಸ ಮಾಡುತ್ತಿದ್ದ ಹೆಣ್ಣುಪಡೆಯ ಜವ್ವನದ ಚೆಲ್ಲಗಾರ್ತಿಯರು ಹಲವರು ನನ್ನ ಮೈಮಾಟ ಮತ್ತು ನಿಲುವುಗಳನ್ನು ಹತ್ತು ಜನರ ಎದುರಿನಲ್ಲಿಯೇ ಮೆಚ್ಚಿ ನುಡಿದು ತಿಳಿನಗುವನ್ನು ಬೀರಿದುದುಂಟು. ನನ್ನ ಮಡದಿಯ ಭಾಗ್ಯಕ್ಕೆ ಎಣೆ ಇಲ್ಲವೆಂದು ಹೊಗಳಿದುದುಂಟು. ಈ ಹಿನ್ನೆಲೆಯಲ್ಲಿ ನಾನು ಹೆಣ್ಣಿನ ಹಸಿವಿನ ಮನದಾಳವನ್ನು ಗುರುತಿಸಬಲ್ಲವನಾಗಿದ್ದೆ.

ನಾನು ತಲೆ ಎತ್ತಿ "ಏನು ಡಾಕ್ಟರೆ?" ಎಂದು ಸ್ವಲ್ಪ ಗಂಭೀರವಾಗಿಯೇ ಕೇಳಿದೆ. ಆಕೆ ನನ್ನ ಪ್ರಶ್ನೆಗೆ ಯಾವ ಉತ್ತರವನ್ನೂ ಕೊಡಲಿಲ್ಲ. ಪ್ರತ್ಯಾಸೆಯಿಂದ ಕೂಡಿದ ಆಕೆಯ ಅದೇ ಉನ್ಮತ್ತವಾದ ನೋಟ ನನ್ನನ್ನು ಮುತ್ತಿತು. ತನ್ನ ಕಣ್ಣಿನ ನೋಟ ಈಗ ಇನ್ನೂ ಹೆಚ್ಚಾಗಿ, ಹೋಗಿದ್ದ ನಾಚಿಕೆಯ ಮುಖದ ಆ ರಾಗರಂಜನೆಗಳೇ ಸ್ಪಷ್ಟವಾಗಿ ತೆರೆದಿರಿಸಿದ ಶೃಂಗಾರ ಕಾವ್ಯದಂತೆ ಹರಡಿಕೊಂಡಿರುವಾಗ ಬೇರೆಯ ಮಾತು ಏಕೆ ಬೇಕೆಂದು ಆಕೆ ಬಗೆದಿರಬೇಕು. ಅನುಕೂಲಕರವಾದ ನನ್ನ ಮುಖದ ಮಾರ್ಪಾಟನ ಒಂದು ಎಳೆಯನ್ನಾದರೂ ಕಾಣಲೆಳಸಿ ಕಾಯ್ದು ನಿಂತ ಆಕೆ ನಿರಾಶೆಗೊಂಡಳೆಂದು ಕಾಣಿಸುತ್ತದೆ. ಆಕೆ ಮಾತನಾಡದೆ ಮತ್ತೂ ಕೊಂಕು ನೋಟವನ್ನು ಬೀರಿ, ಕೊಡೆಯನ್ನೆತ್ತಿಕೊಂಡು ಕೈಸಾಲೆಯಲ್ಲಿ ಮೆಲ್ಲನೆ, ಬಹುಮೆಲ್ಲನೆ ನಡೆದುಹೋದಳು.

ಈ ವಿಷಯವನ್ನು ನನ್ನ ಮಡದಿಗೆ ಆ ಸಂಜೆ ಹೇಳಿದೆ. ಆಕೆ ನಕ್ಕು, "ಅಯ್ಯೋ, ಪುಕ್ಕಲು ಮನುಷ್ಯ! ಎಂದು ನಿಮ್ಮನ್ನು ಇಲ್ಲಿನ ಕಚೇರಿಯ ಎಲ್ಲ ಬಿಳಿಸೀರೆಗಳ ಹೆಂಗಸರೂ ನನ್ನೊಡನೆ ಗೇಲಿ ಮಾಡುತ್ತಾರೆ. ಹೆಂಗಸರನ್ನು ಕಂಡರೆ ಹಾದಿಬಿಟ್ಟು ದೂರ ಓಡುತ್ತಾರೆ ನಿಮ್ಮ ಗಂಡ ಎಂದು ನಗುತ್ತಾರೆ," ಎಂದು ಅವಳೂ ಹೇಳುತ್ತಾ ನಕ್ಕುಬಿಟ್ಟಳು. ಈಗ ಆಕೆಯ ಮಾತಿನಲ್ಲಿ ನಿರಾಸೆ ಇದ್ದಂತೆ ನನಗೆ ಅನ್ನಿಸಿತು. ಪಾಪ! ▪ ಹೆಣ್ಣು ತುಂಬ ಒಳ್ಳೆಯವಳು, ಹುಲ್ಲೆಯಂಥ ಸಾಧು ಜೀವಿ.

- ಸಂಗ್ರಹ: ಟಿ.ಆರ್. ವೆಂಕಟೇಶಮೂರ್ತಿ

# ನೆನಪು ನೆರಳಿನಲ್ಲಿ

ನಾನಾಗ ಎಂಟು ವರ್ಷದ ಹುಡುಗಿ. ಒಮ್ಮೆ ನಾನು ಮತ್ತು ನನ್ನ ತಮ್ಮ ಸೇರಿ ಸಂಬಂಧಿಕರ ಮನೆಗೆ ಹೋಗಿದ್ದೆವು. ಆ ಮನೆಯ ಹತ್ತಿರ ದಟ್ಟವಾದ ಕಾಡು. ಆ ಮನೆಯ ಅಜ್ಜ, "ಆ ಕಾಡಿನಲ್ಲಿ ಹುಲಿ ಇದೆ. ಅದು ಒಂದೊಂದು ಸಲ ನಮ್ಮ ಹಟ್ಟಿಗೆ ಬಂದು ದನಕರುಗಳನ್ನು ಕಚ್ಚಿ ಕೊಂಡು ಹೋಗುತ್ತದೆ," ಎಂದೆಲ್ಲಾ ಹೇಳಿದ್ದರು.

ಅದನ್ನು ಕೇಳಿ ಆ ಕಾಡು ನೋಡಬೇಕು; ಎಲ್ಲಿಯಾದರೂ ಆಕಸ್ಮಾತ್ತಾಗಿ ಹುಲಿ ಬಂದರೆ ಅದನ್ನೂ ನೋಡಬೇಕು ಎಂಬ ಹುಚ್ಚು ಸಾಹಸದ ಆಸೆ ನಮ್ಮಲ್ಲಿ ಚಿಗುರಿತು. "ಅಜ್ಜ ಅಜ್ಜ, ನಾವೂ ಕಾಡು ನೋಡಬೇಕು. ಕರೆದುಕೊಂಡು ಹೋಗು," ಎಂದು ಒತ್ತಾಯಿಸಿದೆವು. ಅಜ್ಜ ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಕೊಂಡ.

ಒಂದು ದಿನ ಬೆಳಿಗ್ಗೆ ಅಜ್ಜ, ಸಣ್ಣಜ್ಜ, ನಾನು ಮತ್ತು ನನ್ನ ತಮ್ಮ ಕಾಡಿನೊಳಗೆ ನಡೆದುಕೊಂಡು ಹೋಗುತ್ತಿದ್ದೆವು. ಗಿಡಮರಗಳೆಲ್ಲಾ ದಟ್ಟವಾಗಿ ಬೆಳೆದಿದ್ದವು. ಸಾಕಷ್ಟು ಬೆಳಕೂ ಒಳಗೆ ಬರುತ್ತಿರ ಲಿಲ್ಲ. ನಾವು ಅತ್ತ, ಇತ್ತ ನೋಡಿಕೊಂಡು, ಮಾತನಾಡಿಕೊಂಡು ಸ್ವಲ್ಪ ದೂರ ಹೋಗಿದ್ದೇವೆ ಅಷ್ಟೆ, ಇದ್ದಕ್ಕಿದ್ದಂತೆ ಹುಲಿಯ ಗರ್ಜನೆ ಕೇಳಿಸಿತು. ಮೈ ಬೆವರಿತು. ಭಯದಿಂದ ಅಜ್ಜನ ಕೈಯನ್ನು ಗಟ್ಟಿಯಾಗಿ ಹಿಡಿದು ಅಜ್ಜನನ್ನು ತಬ್ಬಿಕೊಂಡೆವು. ಹುಲಿ ಪೊದರಿನೆಡೆಯಲ್ಲಿ ಎದ್ದು ಒಮ್ಮೆ ಆಕಳಿಸಿ ನಮ್ಮನ್ನೇ ನೋಡತೊಡಗಿತು. ನಮ್ಮ ಕಥೆ ಮುಗಿ ಯಿತೆಂದೇ ತಿಳಿದೆವು. ಕೈಕಾಲು ಗಡ ಗಡ ನಡುಗುತ್ತಿದ್ದವು. "ಅಜ್ಜ, ಓಡಿ ಹೋಗುವ," ಎಂದೆ ನಾನು. ಆದಕ್ಕವರು ಪಿಸುದನಿಯಲ್ಲಿ, "ಓಡಬಾರದು, ಓಡಿದರೆ ಅದು ನಮ್ಮನ್ನು ಓಡಿಸಿ ಕೊಂಡು ಬರುತ್ತದೆ. ನಿಂತಲ್ಲೇ ಧೈರ್ಯಮಾಡಿ, ಕಣ್ಣುಮುಚ್ಚಿ ಕೈ ಕಟ್ಟಿ ನಿಂತುಕೊಳ್ಳಿ. ಅಲುಗಾಡ ಬೇಡಿ. ದೇವರ ಧ್ಯಾನ ಮಾಡಿ," ಎಂದು ಹೇಳಿ ದರು.

ನಾವು ಕಣ್ಣುಮುಚ್ಚಿ, ಕೈಕಟ್ಟಿ, ಒಬ್ಬರಿಗೊಬ್ಬರು ತಾಗಿಕೊಂಡು ಕಂಬದಂತೆ ನಿಂತೆವು. ತರಗೆಲೆಯ ಮೇಲೆ ಅದು ನಡೆದುಕೊಂಡು ಹತ್ತಿರ ಹತ್ತಿರ ಬಂದು ನನ್ನ ಕೈಯನ್ನು ತನ್ನ ದೊರಗು ನಾಲಿಗೆ ಯಿಂದ ನೆಕ್ಕಿತು. ಅಯ್ಯೋ ಆಗಿನ ನನ್ನ ಸ್ಥಿತಿಯೇ! ಅದನ್ನು ನೆನೆಸಿಕೊಂಡರೆ ಈಗಲೂ ನನ್ನ ಮೈ ನಡುಗುತ್ತದೆ. ನನ್ನ ಎದೆ "ಡವ ಡವ ಅಂತ ಬಡಿದುಕೊಳ್ಳುತ್ತಿತ್ತು. ಕಣ್ಣನ್ನು ಮತ್ತೂ ಗಟ್ಟಿ ಯಾಗಿ ಮುಚ್ಚಿಕೊಂಡು, "ಓ ದೇವರೇ, ನೀನೇ ಕಾಪಾಡು" ಎಂದು ಮನಸ್ಸಿನಲ್ಲಿಯೇ ಬೇಡಿ ಕೊಂಡೆ. ಉಸಿರಾಡಲೂ ಹೆದರಿಕೆಯಾಗಿತ್ತು.

ಸ್ವಲ್ಪ ಹೊತ್ತಿನ ಮೇಲೆ ನಾವು ಮೆಲ್ಲನೆ ಕಣ್ಣು ತೆರೆದು ನೋಡಿದೆವು. ಪುಣ್ಯಕ್ಕೆ ಹುಲಿ ಹೊರಟು ಹೋಗಿತ್ತು. ಮತ್ತೊಮ್ಮೆ ಆಚೆ ಈಚೆ ನೋಡಿ ಹುಲಿಯ ಸುಳಿವು ಕಾಣದಿದ್ದಾಗ, "ಅಬ್ಬಾ, ಬದುಕಿದೆವು," ಎಂದುಕೊಂಡು ಬೇಗ ಬೇಗ ಹೆಜ್ಜೆ ಹಾಕುತ್ತಾ ಹಿಂದೆ ತಿರುಗಿ ಸಹ ನೋಡದೆ ನೇರವಾಗಿ ಮನೆಗೆ ಧಾವಿಸಿ ಬಂದೆವು. ಅಂಗಳಕ್ಕೆ ಬಂದಾಗಲೇ ನಮ್ಮ ಬಿಗಿ ಹಿಡಿದ ಉಸಿರು ಸಡಿಲಗೊಂಡಿದ್ದು.

ಆ ಹುಲಿ ಎಲ್ಲರ ಮೈಯನ್ನೂ ನೆಕ್ಕಿತ್ತು. ತಮ್ಮನ ಚೆಡ್ಡಿ ಒದ್ದೆಯಾಗಿತ್ತು. ಅಜ್ಜ ಬಾಯಿಯಲ್ಲಿ ವಿಷ್ಣು ಸಹಸ್ರನಾಮ ಹೇಳುತ್ತಿದ್ದರಂತೆ. 'ಆದ್ದರಿಂದ ಹುಲಿ ನಮ್ಮನ್ನು ಏನೂ ಮಾಡಲಿಲ್ಲ; ಆ ದೇವರೇ ನಮ್ಮನ್ನು ರಕ್ಷಿಸಿದ' ಎಂದು ಅಜ್ಜ ಹೇಳಿದರು.

ಆ ಹುಲಿಗೆ ಹೊಟ್ಟೆ ತುಂಬಿತ್ತೋ ಅಥವಾ ಇಷ್ಟರ ವರೆಗೆ ಅದು ಮನುಷ್ಯರ ಮಾಂಸದ ರುಚಿ ನೋಡಿರಲಿಲ್ಲವೋ ಅಥವಾ ನಮ್ಮೆಲ್ಲರ ಆಯುಷ್ಯ ಗಟ್ಟಿಯಾಗಿತ್ತೋ ಅಂತೂ ಅದು ನಮಗೆ ಒಂದು ಅದ್ಭುತ ಅನುಭವವನ್ನು ನೀಡಿ ದೂರ ಹೊರಟುಹೋಯಿತು.

* ಸಾವಿತ್ರಿ ಎಸ್. ರಾವ್

೧೯೫೮ರ ಸಮಯ. ನಾನು ಆ ಊರಿಗೆ ವೈದ್ಯಾಧಿಕಾರಿಯಾಗಿ ಬಂದು ಆರು ತಿಂಗಳುಗಳು ಕಳೆದಿದ್ದವು. ಚಿಕಿತ್ಸಾಲಯಕ್ಕೆ ಒಳ್ಳೆಯ ಸ್ಥಳಾವಕಾಶ ದೊರಕುವ ವರೆಗೆ ಪಂಚಾಯತಿಯ ಕಚೇರಿ ಆಗಿದ್ದ ಕೋಣೆಯಲ್ಲಿ ತೆರೆಯೊಂದನ್ನು ಹಾಕಿ, ತೆರೆಯ ಹಿಂದೆ ನನ್ನ ಬಿಡಾರ ಹಾಗೂ ತೆರೆಯ ಮುಂದೆ ನನ್ನ ಚಿಕಿತ್ಸಾಲಯ ಹೀಗೆ ವ್ಯವಸ್ಥೆ ಮಾಡಿಕೊಂಡಿದ್ದೆ. ಪಂಚಾಯತಿಯ ಸಮುದಾಯ ರೇಡಿಯೋದ ಧ್ವನಿವರ್ಧಕ ಕೋಣೆಯ ಹೊರಗಡೆ ನೇತಾಡುತ್ತಿತ್ತು.

ಒಂದು ಬೆಳಿಗ್ಗೆ ಈ ಊರಿನ ಹತ್ತಿರವಿರುವ ಕುರಿ ಸಂಗೋಪನ ಕೇಂದ್ರದ ಅಧಿಕಾರಿಗಳು ನನ್ನನ್ನು ಭೇಟಿಯಾಗಲು ಬಂದಿದ್ದರು. ನನ್ನ ಸಹೋದರ ಅವರಿಗೆ ತಿಂಡಿ-ಚಹ ಕೊಡುತ್ತಿರುವಾಗಲೆ ಪಕ್ಕದ ಹಳ್ಳಿಯವನೊಬ್ಬ ಒಳಗೆ ಬಂದು ಕುಳಿತುಕೊಂಡ. ನಾನು ಚಿಕಿತ್ಸೆಗಾಗಿ ಬಂದ ರೋಗಿ ಇರಬಹುದೆಂದು ಭಾವಿಸಿ ಅವನಿಗೆ ಕೂಡಲು ಹೇಳಿದೆ. ಬಂದ ಅತಿಥಿಗಳು ಚಹವನ್ನು ಸೇವಿಸಿ ಹೊರಡಲು ಸಿದ್ಧರಾದರು. ಬಂದವರಲ್ಲಿ ಒಬ್ಬರು ಚಿಕಿತ್ಸೆ ಪಡೆದ ಪ್ರತಿಫಲವಾಗಿ ಸ್ವಲ್ಪ ಹಣ ಕೊಟ್ಟು ಹೊರಟು ಹೋದರು.

ಅವರು ಹೋದ ಮೇಲೆ ಆಗಂತುಕನಾಗಿ ಬಂದ ಆ ಮನುಷ್ಯ, "ಇದನ್ನು ಚಾಲೂ ಮಾಡಿ ಎಷ್ಟು ದಿನ ಆಯಿತು ?" ಎಂದು ಕೇಳಿದ. "ಆರು ತಿಂಗಳಾಯಿತು," ಎಂದು ನಾನು ಹೇಳಿದೆ. ಆದಕ್ಕೆ ಅವನು, "ಬಹಳ ಒಳ್ಳೆಯದಾಯ್ತು. ಈ ಊರಾಗ ಇರಲಿಲ್ಲ," ಎಂದು ಹೇಳಿದ. ನಾನು "ಯಾಕ ಬಂದೀರಿ, ಏನು ಬೇಕಾಗಿತ್ತು ?" ಎಂದು ಕೇಳಿದ್ದಕ್ಕೆ ಆತ, "ನನಗೂ ಒಂದು ಉಪ್ಪಿಟ್ಟು ಮತ್ತು ಒಂದು ಕಪ್ ಚಹಾ ಕೊಡ್ರಿ," ಎಂದು ಕೇಳಬೇಕೆ ! ನಾನು ಸುಸ್ತೋ ಸುಸ್ತು.

* **ಡಾ. ಜೆ.ಎಮ್. ಕಟ್ಟಿ**



ಆಗ ನಾನು ಬಿ.ಎಡ್ ವಿದ್ಯಾರ್ಥಿನಿ. ಕಾಲೇಜಿನ ಪ್ರತಿಯೋರ್ವ ವಿದ್ಯಾರ್ಥಿ ವಿದ್ಯಾರ್ಥಿನಿಯೂ ಸಿಟಿಜನ್‌ಶಿಪ್ ಟ್ರೈನಿಂಗ್ ಕ್ಯಾಂಪ್‌ನಲ್ಲಿ ಭಾಗವಹಿಸಲೇ ಬೇಕಾಗಿತ್ತು. ಮೂರು ದಿನಗಳ ಕಾಲ ಸಮೀಪದ ಹಳ್ಳಿಯೊಂದರಲ್ಲಿ ಕ್ಯಾಂಪ್ ಹೂಡಿ ಶ್ರಮದಾನ ಮಾಡಿ, ಸ್ನೇಹ-ಸಹಕಾರ-ಪರಿಶ್ರಮಗಳನ್ನು ರೂಢಿಸಿಕೊಳ್ಳುವುದೇ ಈ ಶಿಬಿರದ ಉದ್ದೇಶ. ನನಗೆ ಇಷ್ಟವಿದ್ದರೂ ಮನೆಯಲ್ಲಿ ಹಿರಿಯರನ್ನು ಬಿಟ್ಟು ಹೋಗಲಾಗದ ಅಸಹಾಯಕತೆ ! ಕೊನೆಗೆ ಒಂದು ಉಪಾಯ ಮಾಡಿದೆ. ಕ್ಯಾಂಪ್ ನಡೆಯುವ ಸಂದರ್ಭದಲ್ಲೇ ನನ್ನ ಮದುವೆಯ ನಿಶ್ಚಿತಾರ್ಥವಿದೆಯೆಂದೂ, ಹಿರಿಯರು ನನ್ನ ಮಾತು ಕೇಳುವುದಿಲ್ಲವೆಂದೂ ಪ್ರಾಂಶುಪಾಲರಿಗೆ ಬಿನ್ನವಿಸಿದೆ. ಅವರು, ಮೊದಲ ದಿನ ಕ್ಯಾಂಪಿಗೆ ಬರಲೇಬೇಕೆಂದು ಹೇಳಿದರು. ಎಲ್ಲರೊಂದಿಗೆ ಕ್ಯಾಂಪಿಗೆ ತೆರಳಿದ ನನಗೆ ಅಲ್ಲಿನ ಪರಿಸರವನ್ನು ಬಿಟ್ಟು ಬರಲಿಕ್ಕೆ ಮನಸ್ಸಿಲ್ಲ; ಆದರೆ ಮರುದಿನವೇ ನನ್ನ ನಿಶ್ಚಿತಾರ್ಥ ಎಂದು ಬುರುಡೆ ಬೇರೆ ಉರುಳಿಸಿದ್ದೆನಲ್ಲ. ಒಂದೆರಡು ಗಂಟೆಗಳಲ್ಲಿ ಎಲ್ಲರೂ ಸೇರಿ ನನ್ನನ್ನು ತುಮಕೂರಿಗೆ ಬಸ್ ಹತ್ತಿಸಿ ಶುಭಕೋರಿ ಬೀಳ್ಕೊಟ್ಟರು.

ನಂತರ ದಸರೆಯ ರಜೆಗಳು ಬಂದವು. ಕಾಲೇಜು ಪುನರಾರಂಭವಾದ ನಂತರ ನಾನು ಗೆಳತಿಯರ ಎದುರು ಕೃತಕ ಕಣ್ಣೀರು ಸುರಿಸಿ, ವರನ ದುರಾಸೆಯಿಂದ ನಿಶ್ಚಿತಾರ್ಥ ನಡೆಯಲೇ ಇಲ್ಲವೆಂದು ಸುಳ್ಳಿಗೆ ಸುಳ್ಳು ಪೋಣಿಸಿದೆ. ಕೋರ್ಸು ಮುಗಿಯಿತು. ಕೆಲವರ್ಷಗಳ ನಂತರ ನಾನು ಯಾವ ಹೇಳಬಾರದ ಸುಳ್ಳು ಹೇಳಿದ್ದೆನೋ ಅದು ನಿಜವಾಗಿಯೂ ನನ್ನ ಜೀವನದಲ್ಲಿ ಘಟಿಸಿತು. ಅಂದು ಕಾಲೇಜಿನ ಉಪನ್ಯಾಸಕರು, ಗೆಳತಿಯರು ಆಡಿದ ಸಂತಾಪದ ಮಾತುಗಳನ್ನು ಇಂದು ನೆನಪಿನ ಬುತ್ತಿಯಿಂದ ಹೊರತೆಗೆದು ಉಣ್ಣುತ್ತಿದ್ದೇನೆ.

* **'ಕಸ್ತೂರಿ'**

● ಆದಿಕೇಶವ

# ಅಪ್ರತಿಮ ಓಟಗಾರ ಜೆಸ್ಸಿ ಓವೆನ್ಸ್

ಅದು ೧೯೩೫, ಮೇ ೨೫ನೇ ದಿನ. ಅಮೆರಿಕದ ಓರ್ವ ಅಥ್ಲೀಟ್ ನೋಡುನೋಡುತ್ತಿದ್ದಂತೆಯೇ ಐದು ವಿಶ್ವ ದಾಖಲೆಗಳನ್ನು ಸ್ಥಾಪಿಸಿದ್ದಲ್ಲದೇ ಮೊದಲಿನ ಒಂದನ್ನು ಸರಿಗಟ್ಟಿ ಇಡೀ ಪ್ರಪಂಚವನ್ನೇ ನಿಬ್ಬೆರಗುಗೊಳಿಸಿದ. ಕೇವಲ ೪೫ ನಿಮಿಷಗಳಲ್ಲಿ ಈ ಮಹಾನ್ ಘಟನೆಗೆ ಕಾರಣರಾದ ಅಥ್ಲೀಟ್ ಬೇರೆ ಯಾರೂ ಅಲ್ಲ, ಜೆಸ್ಸಿ ಓವೆನ್ಸ್.

ಆ್ಯನ್ ಆರ್ಬರ್‌ದಲ್ಲಿ ನಡೆದ ಬಿಗ್ ಟೆನ್ ಚಾಂಪಿಯನ್‌ಶಿಪ್‌ನಲ್ಲಿ ಜೆಸ್ಸಿ ಓವೆನ್ಸ್ ೧೦೦ ಯಾರ್ಡುಗಳ ಓಟವನ್ನು ೯.೪ ಸೆಕೆಂಡುಗಳಲ್ಲಿ ಓಡಿ ಹಿಂದಿನ ವಿಶ್ವದಾಖಲೆ ಸಮಮಾಡಿ ನಂತರ ಉದ್ದ ಜಗಿತದಲ್ಲಿ ೨೬ ಫೂಟ್ ಎಂಟೂಕಾಲಿಂಚು ದೂರ, ೨೨೦ ಯಾರ್ಡ್ ಓಟವನ್ನು ೨೦.೩ ಸೆಕೆಂಡುಗಳಲ್ಲಿ, ೨೨೦ ಮೀ. ಹರ್ಡಲ್ಸ್‌ನ್ನು ೨೩ ಸೆಕೆಂಡುಗಳಲ್ಲಿ ಕ್ರಮಿಸಿ ಹೊಸ ವಿಶ್ವ ದಾಖಲೆ ಸ್ಥಾಪಿಸಿದ್ದಲ್ಲದೆ ೨೦೦ ಮೀ. ಹಾಗೂ ೨೦೦ ಮೀ. ಹರ್ಡಲ್ಸ್‌ನಲ್ಲಿಯೂ ಈ ಸಾಧನೆ ಮಾಡಿ ಅಲ್ಲಿ ನೆರೆದಿದ್ದ ಪ್ರತಿಯೊಬ್ಬರಿಗೂ ಅಚ್ಚರಿ ಉಂಟು ಮಾಡಿದ.

ಜೆಸ್ಸಿ ಓವೆನ್ಸ್‌ನ ಪೂರ್ಣ ಹೆಸರು ಜೇಮ್ಸ್ ಕ್ಲೀವ್‌ಲ್ಯಾಂಡ್ ಓವೆನ್ಸ್. ಹುಟ್ಟಿದ್ದು ಅಮೆರಿಕದ ಅಲಾಬಾಮಾ ರಾಜ್ಯದ ಒಕವಿಲ್ಲೆಯಲ್ಲಿ (೧೯೧೩ರ ಸಪ್ಟಂಬರ್ ೧೨ ರಂದು) ಮಗ ಜೆಸ್ಸಿ ಮುಂದೆ ಈ ರೀತಿಯ ಅದ್ಭುತ ಸಾಧನೆ ಮಾಡುತ್ತಾನೆಂದು ಆತನ ತಂದೆ ಕನಸಿನಲ್ಲಿಯೂ ಊಹಿಸಿರಲಿಲ್ಲ. ಆದರೆ ಅವನಲ್ಲಿದ್ದ ಕ್ರೀಡಾಸಕ್ತಿಯನ್ನು ಗಮನಿಸಿದ ತಂದೆ ಮಗನ ಉತ್ಸಾಹಕ್ಕೆ ಎಂದೂ ಅಡ್ಡಬರಲಿಲ್ಲ. ಬದಲಾಗಿ ಸಾಕಷ್ಟು ಪ್ರೋತ್ಸಾಹಿಸಿದ.

ಅಪ್ಪನ ಪ್ರೋತ್ಸಾಹ ಜೆಸ್ಸಿಯನ್ನು ಜಗತ್ತಿನ ಸರ್ವಶ್ರೇಷ್ಠ ಅಥ್ಲೀಟ್‌ರ ಸಾಲಿಗೆ ಸೇರಿಸಿತು.

ಯಾವುದೇ ಮೂಲೆಯಲ್ಲಿ ಸ್ಪರ್ಧೆ ನಡೆಯಲಿ, ಅಲ್ಲಿ ಜೆಸ್ಸಿ ಹಾಜರಾಗಿ ಬಹುಮಾನ ಗಿಟ್ಟಿಸುತ್ತಿದ್ದ. ಜೆಸ್ಸಿ ಇದ್ದನೆಂದರೆ ಉಳಿದವರು ಮೊದಲ ಸ್ಥಾನದ ಆಸೆ ಕೈಬಿಟ್ಟು ಎರಡು ಹಾಗೂ ಮೂರನೇ ಸ್ಥಾನದತ್ತ ಗಮನಹರಿಸುತ್ತಿದ್ದರು. ಆದರೆ ಇಷ್ಟಾಗಿಯೂ ಜೆಸ್ಸಿಯ ಸಾಧನೆ ಅಷ್ಟಾಗಿ ಸುದ್ದಿಯಾಗಲಿಲ್ಲ.

ಚಿಕ್ಕ ವಯಸ್ಸಿನಲ್ಲಿಯೇ ಅಥ್ಲೆಟಿಕ್ ರಂಗಕ್ಕೆ ಕಾಲಿಟ್ಟಿದ್ದ ಜೆಸ್ಸಿ ಓವೆನ್ಸ್‌ಗೆ ಜೀವನದಲ್ಲಿ ಒಂದೇ ಹೆಬ್ಬಯಕೆ. ತನ್ನ ಸಾಧನೆ ಇಡೀ ಪ್ರಪಂಚದ ಗಮನ ಸೆಳೆಯಬೇಕು, ಹೆಸರು ನಿರಂತರವಾಗಿ ಉಳಿಯಬೇಕು ಎಂಬುದೆ ಆ ಹೆಬ್ಬಯಕೆ. ಕೊನೆಗೆ ೧೯೩೬ ರಲ್ಲಿ ಈ

ಸುದಿನವೂ ಒದಗಿ ಬಂತು.

೧೯೩೬ರ ಬರ್ಲಿನ್ ಒಲಿಂಪಿಕ್ಸ್‌ನಲ್ಲಿ ಜೆಸ್ಸಿ ಓವೆನ್ಸ್ ಯಾರೂ ಮಾಡಿರದಂತಹ ಸಾಧನೆ ಮಾಡಿ ವಿಶ್ವ ಕ್ರೀಡಾ ಕ್ಷೇತ್ರದಲ್ಲಿ ತನ್ನ ಹೆಸರು ಬರೆದ. ಜೆಸ್ಸಿಗೆ ಈ ಒಲಿಂಪಿಕ್ಸ್‌ನಲ್ಲಿ ೧೦೦, ೨೦೦ ಮೀ. ಓಟ, ಉದ್ದ ಜಿಗಿತ ಹಾಗೂ ರಿಲೆಯಲ್ಲಿ ಚಿನ್ನದ ಪದಕ ಬಂದವು.

ಜೆಸ್ಸಿಯ ಈ ಸಾಧನೆ ಆಗ ಸರ್ವಾಧಿಕಾರಿಯಾಗಿ ಮೆರೆಯುತ್ತಿದ್ದ ಹಿಟ್ಲರ್‌ನ ಆಕಾಂಕ್ಷೆಯನ್ನು ಮಣ್ಣುಗೂಡಿಸಿದ್ದು ದೊಡ್ಡ ಸುದ್ದಿಯಾಯಿತು. ಹಿಟ್ಲರ್ ಈ ಒಲಿಂಪಿಕ್ಸ್‌ನಲ್ಲಿ ಎಲ್ಲ ವ್ಯವಸ್ಥೆಯನ್ನು ಸರಿಯಾಗಿ ಮಾಡಿ ಆರ್ಯಕುಲ ಎಲ್ಲಕ್ಕಿಂತ ಶ್ರೇಷ್ಠ ಎಂಬುದನ್ನು ಸಿದ್ಧಪಡಿಸಿ ತೋರಿಸಬೇಕೆಂಬ ಛಲ ಹೊಂದಿದ್ದ. ಆದರೆ ಕರಿಯನಾದ ಜೆಸ್ಸಿ ಓವೆನ್ಸ್ ತನ್ನ ದೈತ್ಯ ಸಾಧನೆಯಿಂದ ಅದನ್ನು ಹುಸಿಗೊಳಿಸಿದ.

ಗುಂಡು ಎಸೆತದಲ್ಲಿ ಜರ್ಮನಿಯ ಹ್ಯಾನ್ಸ್ ವೋಲ್ಕ್ ಒಲಿಂಪಿಕ್ ದಾಖಲೆ ಸ್ಥಾಪಿಸಿ ಚಿನ್ನ ಗೆದ್ದ. ಸ್ಟೇಡಿಯಂ ಹರ್ಷೋದ್ಗಾರಗಳಿಂದ ಪ್ರತಿಧ್ವನಿಸಿತು. ಹಿಟ್ಲರ್, ಹ್ಯಾನ್ಸ್‌ನ ಕೈ ಕುಲಕಿ ಅಭಿನಂದಿಸಿದ. ಮುಂದೆ ೧೦೦೦೦ ಮೀ. ಓಟದಲ್ಲಿ ಫಿನ್‌ಲ್ಯಾಂಡಿನವರು ಎಲ್ಲ ಮೂರು ಸ್ಥಾನಗಳಿಸಿ ಪ್ರಾಬಲ್ಯ ಮೆರೆದರು. ಹಿಟ್ಲರ್



ಅವರನ್ನೂ ಅಭಿನಂದಿಸಿದ. ನಂತರ ಎತ್ತರ ಜಿಗಿತದ ಸ್ಪರ್ಧೆ. ಅಮೆರಿಕದ ಕರಿಯರು ಮೊದಲೆರಡು ಸ್ಥಾನ ಗೆದ್ದರು. ಆಗ ಎಲ್ಲರ ಕಣ್ಣುಗಳು ಹಿಟ್ಲರ್ ಕುಳಿತಿದ್ದೆಡೆ ತಿರುಗಿದವು. ಆದರೆ ಹಿಟ್ಲರ್ ಅಲ್ಲಿರಲಿಲ್ಲ. ಇದರಿಂದ ನೊಂದ ಒಲಿಂಪಿಕ್ ಸಮಿತಿಯು ಅಭಿನಂದಿಸುವುದಾದರೆ ಎಲ್ಲರನ್ನೂ ಅಭಿನಂದಿಸಬೇಕು ಎಂದು ಹಿಟ್ಲರ್‌ಗೆ ತಿಳಿಸಿತು.

ಮರುದಿನದ ಸ್ಪರ್ಧೆ. ಜೆಸ್ಸಿ ಓವೆನ್ಸ್ ಸ್ಪರ್ಧೆಗೆ ಸಿದ್ಧನಾಗಿದ್ದ. ಹಿಂದಿನ ದಿವಸ ಎತ್ತರ ಜಿಗಿತದಲ್ಲಿ ಸ್ವರ್ಣ ಗೆದ್ದಿದ್ದ ಅಮೆರಿಕದ ಜಾನ್ಸನ್, ಜೆಸ್ಸಿ ಓವೆನ್ಸ್ ಬಳಿ ಬಂದು "ನೀನು ಗೆದ್ದಾಗ ಹಿಟ್ಲರ್ ಏನು ಮಾಡುತ್ತಾನೋ ನೋಡೋಣ" ಎಂದ. ಅದಕ್ಕೆ ಜೆಸ್ಸಿ "ಹೋಗಲಿ ಬಿಡು, ನಾನೇನು ಹಿಟ್ಲರ್ ನನ್ನ ಕೈಕುಲುಕುವನೆಂದು ಬರ್ಲಿನ್‌ಗೆ ಬಂದಿಲ್ಲ" ಎಂದು ಹೇಳಿದ.

ಬರ್ಲಿನ್‌ನಲ್ಲಿ ಜೆಸ್ಸಿ ಮಾಡಿದ ಸಾಧನೆ "ಕುಲಕುಲವೆಂದು ಹೊಡೆದಾಡದಿರಿ ಹುಚ್ಚಗಳಿರಾ" ಎಂದು ಅಣಕಿಸುವಂತಿತ್ತು. ೧೦೦ ಮೀ. (೧೦.೩ ಸೆಕೆಂಡು) ಹಾಗೂ ೨೦೦ ಮೀ. (೨೦.೭ ಸೆ.) ಓಟಗಳಲ್ಲಿ ಒಲಿಂಪಿಕ್ ಮತ್ತು ವಿಶ್ವ ದಾಖಲೆಯೊಂದಿಗೆ ಚಿನ್ನದ ಪದಕ ಧರಿಸಿದ ಓವೆನ್ಸ್ ಉದ್ದ ಜಿಗಿತದಲ್ಲಿ ೨೬ ಅಡಿಗಿಂತ ದೂರ ಜಿಗಿದ ಮೊದಲ ಕ್ರೀಡಾಪಟು ಎಂಬ ದಾಖಲೆ ನಿರ್ಮಿಸಿದ.

ನಂತರ ೪x೧೦೦ ರಿಲೆಯಲ್ಲಿ ಕೊನೆಯವನಾಗಿ ಓಡಿದ ಜೆಸ್ಸಿ ಅಲ್ಲಿಯೂ ಒಲಿಂಪಿಕ್ ಹಾಗೂ ವಿಶ್ವ ದಾಖಲೆ ಸ್ಥಾಪನೆಗೆ ಕಾರಣನಾದ. ಇಷ್ಟೆಲ್ಲ ಸಾಧನೆ ತೋರುತ್ತಿದ್ದಾಗ ಹಿಟ್ಲರ್ ಸ್ಟೇಡಿಯಂ ಬಿಟ್ಟು ಹೋಗಿಬಿಟ್ಟಿದ್ದ.

ಜೆಸ್ಸಿ ಓವೆನ್ಸ್ ಉದ್ದ ಜಿಗಿತದಲ್ಲಿ ಚಿನ್ನದ ಪದಕ ಗೆದ್ದಿದ್ದೂ ಒಂದು ರೋಚಕ ಕಥೆಯೆ. ಈ ಹಿಂದೆಯೇ ಉದ್ದ ಜಿಗಿತದಲ್ಲಿ ವಿಶ್ವ ದಾಖಲೆ ಸ್ಥಾಪಿಸಿದ್ದ ಜೆಸ್ಸಿಗೆ ಇಲ್ಲಿ ಬಂಗಾರದ ಪದಕ ಬರುವುದರಲ್ಲಿ ಅನುಮಾನ ಇರಲಿಲ್ಲ. ಆದರೆ ಮೊದಲ ಜಿಗಿತದಲ್ಲಿ ಅರ್ಹತಾ ಮಟ್ಟಕ್ಕಿಂತ ಬಹಳ ಕಡಿಮೆ ದೂರ ಜಿಗಿದ ಜೆಸ್ಸಿ ಸಾಕಷ್ಟು ಉದ್ವೇಗಕ್ಕೊಳಗಾಗಿದ್ದ. ಎರಡನೇ ಪ್ರಯತ್ನದಲ್ಲಿಯೂ ಆತ ವಿಫಲಗೊಂಡಾಗ ಜರ್ಮನಿಯ ಪ್ರೇಕ್ಷಕರು ತಮ್ಮ ದೇಶದ ಸ್ಪರ್ಧಾಳಿಗೆ ಚಿನ್ನದ ಪದಕ ಖಚಿತ ಎಂದೇ ಭಾವಿಸಿದ್ದರು. ಆಗ ಜೆಸ್ಸಿ ಬಳಿಬಂದ ಜರ್ಮನ್ ಸ್ಪರ್ಧಾಳು ಲೂಜ್ ಲ್ಯಾಂಗ್, "ನೀನು ಈಗಲೂ ಪ್ರಯತ್ನಿಸಿದರೆ ಖಂಡಿತ ಚಿನ್ನ ಗೆಲ್ಲಬಲ್ಲೆ, ಟೇಕ್ ಆಫ್ ಬೋರ್ಡ್‌ದಿಂದ ಕೆಲವು ಇಂಚು ದೂರದಿಂದ ಜಿಗಿ" ಎಂದು ಸಲಹೆ ನೀಡಿದ.

ಪ್ರತಿಸ್ಪರ್ಧಿ ಲೂಜ್ ಲ್ಯಾಂಗ್‌ನ ಸಲಹೆ ಜೆಸ್ಸಿಯಲ್ಲಿ ಹೊಸ ಹುರುಪು ತಂದಿತು. ಟೇಕ್ ಆಫ್ ಬೋರ್ಡಿನ ಮೇಲೆ ಕಣ್ಣಿಟ್ಟು ದೂರದಿಂದ ಓಡಿಬಂದು ಜಿಗಿದ ಜೆಸ್ಸಿ ಹೊಸ ಒಲಿಂಪಿಕ್ ದಾಖಲೆಯೊಂದಿಗೆ ಬಂಗಾರದ ಪದಕ ಗೆದ್ದಾಗ ಲೂಜ್ ಲ್ಯಾಂಗ್‌ನ ಕಣ್ಣಂಚಿನಲ್ಲಿ ನೀರು ಜಿನುಗುತ್ತಿತ್ತು. ಜೆಸ್ಸಿ ಕೊನೆಯ ಪ್ರಯತ್ನದಲ್ಲಿ ೨೬ ಅಡಿ ಐದೂವರೆ ಇಂಚು (೮.೦೬ ಮೀ.)ಜಿಗಿದಿದ್ದ.

ಒಲಿಂಪಿಕ್ ದಾಖಲೆಗೆ ಕಾರಣವಾದ ಈ ಜಿಗಿತದ ನಂತರ ಲೂಜ್ ಲ್ಯಾಂಗ್ ಅಲ್ಲಿಯೇ ಸ್ವಲ್ಪ ದೂರದಲ್ಲಿ ದುರುಗುಟ್ಟಿ ನೋಡುತ್ತ ನಿಂತಿದ್ದ ಹಿಟ್ಲರ್‌ನನ್ನು ಲೆಕ್ಕಿಸದೆ ಜೆಸ್ಸಿಯ ಕೈಕುಲುಕಿದ. "ನಾನು ಇಂಥ ನೆಗೆತ ನೋಡಿರಲಿಲ್ಲ. ನೀನು ಪ್ರಪಂಚದ ಅತಿ ಶ್ರೇಷ್ಠ ನೆಗೆತಗಾರ"ಎಂದಾತ ಪ್ರಶಂಸೆ ವ್ಯಕ್ತಪಡಿಸಿದ.

ಬರ್ಲಿನ್ ಒಲಿಂಪಿಕ್ಸ್ ನಂತರ ಪ್ರತಿಯೊಬ್ಬರ ಮನಸ್ಸಿನಲ್ಲಿ ತನ್ನ ಹೆಸರು ಶಾಶ್ವತವಾಗಿ ಇರುವಂತೆ ಮಾಡಿದ ಜೆಸ್ಸಿ ಓವೆನ್ಸ್ ೧೯೮೦ರ ಮಾರ್ಚ್ ೩೧ ರಂದು ಪುಪ್ಪುಸ ಕ್ಯಾನ್ಸರ್‌ನಿಂದ ಮರಣಹೊಂದಿದ. ಆಗ ಜೆಸ್ಸಿಗೆ ೬೮ ವರ್ಷ ವಯಸ್ಸಾಗಿತ್ತು.



ಬ್ರಿಟನ್‌ನ ಆಧ್ಯಾತ್ಮಿಕ ಜಿಜ್ಞಾಸು ಪಾಲ್ ಬ್ರಂಟನ್ ಭಾರತದ ಮೂವರು ಮಹಾನ್ . ಸನ್ಯಾಸಿಗಳನ್ನು ಮುಕ್ತಕಂಠ ದಿಂದ ಹೊಗಳಿದ್ದಾನೆ. ಅವರೆಂದರೆ ಅಂದಿನ ಶೃಂಗೇರಿಯ ಶಂಕರಾಚಾರ್ಯರು, ಅರುಣಾಚಲದ ರಮಣ ಮಹರ್ಷಿಗಳು ಹಾಗೂ ಸ್ವಾಮಿ ವಿಶುದ್ಧಾನಂದರು. ೫೦ ವರ್ಷಗಳ ಹಿಂದೆ ವಿಶುದ್ಧಾನಂದರು ಸೂರ್ಯ ವಿಜ್ಞಾನದ ಅದ್ಭುತ ಶಕ್ತಿ ಪ್ರದರ್ಶಿಸಿ ಜಗತ್ತಿನ ಮಹಾನ್ ಅಧ್ಯಾತ್ಮ ಸಾಧಕರನ್ನು ಸ್ತಂಭೀಭೂತಗೊಳಿಸಿದರು.

# ಸೂರ್ಯ ವಿಜ್ಞಾನದ ಮಹಾನ್ ಸಾಧಕ ಸ್ವಾಮಿ ವಿಶುದ್ಧಾನಂದರು

ಅರುಣ

ವಾರಾಣಸಿಯ ಕ್ಯೆಟ್ ರೈಲ್ವೆ ನಿಲ್ದಾಣ ದಿಂದ ನಗರದ ಕಡೆಗೆ ಹೆಜ್ಜೆಹಾಕಿದಾಗ ಮೊದಲು ಸಿಗುವುದು ಲಾಜಪತ್‌ನಗರ ಬಡಾವಣೆ. ಈ ಬಡಾವಣೆಯಿಂದ ಅನತಿ ದೂರದಲ್ಲೆ ಎಡಭಾಗದಲ್ಲಿ 'ವಿಶುದ್ಧಾನಂದ ಕಾನನ' ಎಂಬ ಸುಂದರವಾದ ಉದ್ಯಾನವಿದೆ.

ವೈವಿಧ್ಯಮಯ ವೃಕ್ಷಜಾತಿಗಳು, ಹೂಗಿಡಗಳು ಅಲ್ಲಿ ಬೆಳೆದಿವೆ. ಈ ತೋಟದ ಒಳಗಡೆ ಬಲಭಾಗದಲ್ಲಿ ವಿಜ್ಞಾನ ಮಂದಿರವಿದೆ. ಗೋಪಾಲ ಮಂದಿರ, ಶಿವಮಂದಿರವಿದೆ. ಅಧ್ಯಾತ್ಮಿಕ ಸಾಧನೆ ಕೈಗೊಳ್ಳುವವರಿಗೆ ಪ್ರತ್ಯೇಕವಾದ ಸ್ಥಳವೂ ಇದೆ.

ಹಿಂದೊಮ್ಮೆ ಈ ವಿಜ್ಞಾನಮಂದಿರ ಸೂರ್ಯವಿಜ್ಞಾನದ ಮಹಾನ್ ಸಾಧಕ

ಬಾಬಾ ವಿಶುದ್ಧಾನಂದಜೀ ಅವರ ವಾಸಸ್ಥಳವಾಗಿತ್ತು. ಈ ಭವನದ ಕೆಳಅಂತಸ್ತಿನಲ್ಲಿ ಬಾಬಾ ಅವರು ಜನಸಾಮಾನ್ಯರಿಗೆ, ಭಕ್ತರಿಗೆ, ಆಧ್ಯಾತ್ಮಿಕ ಜಿಜ್ಞಾಸೆಗಳಿಗೆ ದರ್ಶನ ನೀಡುತ್ತಿದ್ದರು. ಅವರ ಸಮಸ್ಯೆಗಳನ್ನು ಆಲಿಸಿ ಪರಿಹಾರ ಸೂಚಿಸುತ್ತಿದ್ದರು. ಭವನದ ಮೇಲಂತಸ್ತಿನಲ್ಲಿ ಬಾಬಾ ವಾಸಿಸುತ್ತಿದ್ದರು. ಭಗವಂತನ ಧ್ಯಾನ ಮಾಡುತ್ತಿದ್ದರು.

ವಿಶುದ್ಧಾನಂದರು ಇಂದಿಗೆ ೫೦ ವರ್ಷಗಳ ಹಿಂದೆ ಸೂರ್ಯವಿಜ್ಞಾನದ ಅದ್ಭುತ ಶಕ್ತಿಯನ್ನು ಪ್ರದರ್ಶಿಸಿ ಜಗತ್ತಿನ ಮಹಾನ್ ಆಧ್ಯಾತ್ಮಿಕ ಸಾಧಕರನ್ನೂ ಸ್ತಂಭೀಭೂತಗೊಳಿಸಿದರು.

ವಿಜ್ಞಾನಮಂದಿರದ ಕೆಳ ಅಂತಸ್ತಿನಲ್ಲಿ ದೊಡ್ಡ ಹಜಾರವಿದೆ. ಈ ಹಜಾರದಲ್ಲಿಯೇ ಸ್ವಾಮಿ ವಿಶುದ್ಧಾನಂದರು ಬ್ರಿಟನ್ನಿನ ಆಧ್ಯಾತ್ಮಿಕ ಜಿಜ್ಞಾಸು ಪಾಲ್ ಬ್ರಂಟನ್‌ರನ್ನು ಭೇಟಿಯಾದದ್ದು. ಹಲವಾರು ವರ್ಷಗಳ ಹಿಂದೆ ಪಾಲ್ ಬ್ರಂಟನ್ ಭಾರತದ ಮಹಾನ್ ಯೋಗಿಗಳನ್ನು, ಸಿದ್ಧಪುರುಷರನ್ನೂ ಹುಡುಕುತ್ತಾ ದೇಶದ ಉದ್ದಗಲಕ್ಕೂ ಸಂಚರಿಸಿದರು. ತಮ್ಮ ಯಾತ್ರೆಯ ಅನುಭವಗಳನ್ನು 'ನಿಗೂಢ ಭಾರತದ ಶೋಧ' ಎಂಬ ಆಂಗ್ಲ ಕೃತಿಯಲ್ಲಿ ದಾಖಲಿಸಿದರು. ಈ ಪುಸ್ತಕದಲ್ಲಿ ಪಾಲ್ ಬ್ರಂಟನ್ ಭಾರತದ ಮೂವರು ಮಹಾನ್ ಸಂನ್ಯಾಸಿಗಳನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಅವರು ಯಾರೆಂದರೆ ಅಂದಿನ ಶೃಂಗೇರಿ ಶಂಕರಾಚಾರ್ಯರು, ಅರುಣಾಚಲದ ರಮಣ ಮಹರ್ಷಿಗಳು ಹಾಗೂ ಸ್ವಾಮಿ ವಿಶುದ್ಧಾನಂದರು.

ಸ್ವಾಮಿ ವಿಶುದ್ಧಾನಂದರು ತಮ್ಮ ಮುಂದೆ ಪ್ರದರ್ಶಿಸಿದ ಹಲವಾರು ಪವಾಡಗಳನ್ನು ಪಾಲ್ ಬ್ರಂಟನ್ ಆ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ. ವಿಶುದ್ಧಾನಂದರು ಅವರ ಸಮ್ಮುಖದಲ್ಲಿ ಮನೋಲ್ಲಾಸ ನೀಡುವ ಬಗೆಬಗೆಯ ಹೂಗಳನ್ನು ಸೃಷ್ಟಿಸಿದರು.




ಬಾನಿನಲ್ಲಿ ಹಾರುತ್ತಿರುವ ಪಕ್ಷಿಯನ್ನು ಕೈ ಬೀಸಿ ಹಿಡಿದು, ಅದನ್ನು ಸಾಯಿಸಿ, ಆನಂತರ ಮಂತ್ರಶಕ್ತಿಯಿಂದ ಪುನರುಜ್ಜೀವಿಸಿದರು. ಅವರ ಪವಾಡಗಳನ್ನು ಕಣ್ಣಾರೆಕಂಡು ನಿಬ್ಬೆರಗಾದ ಪಾಲ್ ಬ್ರಂಟನ್ ಆ ಬಗ್ಗೆ ಸ್ವಾಮೀಜಿಯನ್ನು ಪ್ರಶ್ನಿಸಿದಾಗ ಅವರು ಹೇಳಿದರು: "ಸಮಗ್ರ ವಿಶ್ವ, ಅಲ್ಲಿರುವ ಜೀವರಾಶಿಯ ಜೀವನದ ಮೂಲ ಸ್ರೋತ ಸೂರ್ಯ. ನಮ್ಮ ಎಲ್ಲ ಶಕ್ತಿಯೂ ಸೂರ್ಯನಿಂದಲೆ ಲಭಿಸುವುದು. ಸೌರಶಕ್ತಿಯ ಪ್ರಭಾವದಿಂದ ಒಂದು ವಸ್ತುವನ್ನು ಇನ್ನೊಂದು ವಸ್ತುವಾಗಿ ಅಷ್ಟೆ ಅಲ್ಲ, ಮೃತ ಶರೀರವನ್ನು ಜೀವಂತವಾಗಿ ಸಲೂ ಸಾಧ್ಯ".

### ಮೃತಪ್ರಾಣಿಗೆ ಪುನರ್ಜನ್ಮ

ಪಶ್ಚಿಮಬಂಗಾಳದ ಬರ್ದ್ವಾನ್‌ನಿಂದ ೧೨ ಮೈಲಿ ದೂರದಲ್ಲಿ ಬಂಡೂಲ ಗ್ರಾಮ

ವಿದೆ. ಅಲ್ಲಿ ಮಧ್ಯಮವರ್ಗದ ಚಟ್ಟೋಪಾಧ್ಯಾಯ ಕುಟುಂಬದ ಅಖಿಲಚಂದ್ರ ಮತ್ತು ರಾಜೇಶ್ವರಿದೇವಿ ದಂಪತಿಗಳಿಗೆ ಮಗ ಜನಿಸಿದ. ಅವನಿಗೆ ಭೋಲಾನಾಥನೆಂದು ಹೆಸರಿಟ್ಟರು. ಬಾಲ್ಯದಿಂದಲೇ ಭೋಲಾನಾಥ್ ಧಾರ್ಮಿಕ ಪ್ರವೃತ್ತಿಯವ. ಆತ ಮಹಾಶಿವಭಕ್ತ. ಅವನಿಗೆ ಏಳು ವರ್ಷವಾಗಿದ್ದಾಗ ಅವನ ತಂದೆ ತೀರಿಕೊಂಡರು. ಆನಂತರ ಅವನ ಚಿಕ್ಕಪ್ಪ ಭೋಲಾನಾಥನನ್ನು ಸಲಹತೊಡಗಿದರು.

ಒಂದುದಿನ ಭೋಲಾನಾಥ ಬಿಲ್ವಪತ್ರೆಯಿಂದ ಶಿವಲಿಂಗದ ಆರಾಧನೆ ಮಾಡುತ್ತಿದ್ದ. ಆಗ ಕಿಡಿಗೇಡಿ ಬಾಲಕನೊಬ್ಬ ಶಿವಲಿಂಗವನ್ನು ಮಲಿನಗೊಳಿಸಿದ. ಸಿಟ್ಟಿಗೆದ್ದ ಭೋಲಾನಾಥ, "ನೀನು ನಮ್ಮ ಶಿವನ ಪೂಜೆಯನ್ನು ಕೆಡಿಸಿದ್ದಿಯಾ. ಹೀಗಾಗಿ ನೀನು ಶಿವನ ಆಭರಣವಾದ ಹಾವು ಕಡಿದು ಸಾಯುತ್ತೀ," ಎಂದು ಅಬ್ಬರಿಸಿದ. ಆ ಹುಡುಗ ನಗುತ್ತಾ ಅಲ್ಲಿಂದ ಹೊರಟುಹೋದ. ಅದೇ ದಿನ ಸಂಜೆ ಆ ಹುಡುಗ ಹಾವು ಕಡಿದು ಸತ್ತುಹೋಗಿದ. ಆ ಹುಡುಗನ ಕುಟುಂಬದವರೆಲ್ಲ ದುಃಖದಿಂದ ಅಳುತ್ತಿದ್ದಾಗ ಭೋಲಾನಾಥ ಆ ಬಾಲಕನ ಮೈಮೇಲೆ ಕೈಯಾಡಿಸಿ ಮತ್ತೆ ಜೀವಬರುವಂತೆ ಮಾಡಿದ.

ಒಂದು ಬಾರಿ ಭೋಲಾನಾಥನ ಚಿಕ್ಕಪ್ಪ ಅವನಿಗೆ ಉಡಲು ಒಂದು ಧೋತರ ನೀಡಿದರು. ಅದನ್ನು ಧರಿಸುವ ಗಡಿಬಿಡಿಯಲ್ಲಿ ಅದು ಹರಿದುಹೋಯಿತು. ಚಿಕ್ಕಪ್ಪ ಸಿಟ್ಟಾಗಿ ಭೋಲಾನಾಥನಿಗೆ ಚೆನ್ನಾ[illegible]ಮಾರಿ ಹಾಕಿದರು. ಆಗ ಭೋಲಾನಾಥ ಆ ಹರಿದು ಹೋದ ಧೋತರವನ್ನು ಪುಟ್ಟಿಯಲ್ಲಿರಿಸಿ ದೂರ ಎಸೆದ. ಏನಾಶ್ಚರ್ಯ! ಧೋತರ ಮತ್ತೆ ಮೊದಲಿನಂತೆಯೇ ಆಯಿತು. ಇಂತಹ ಹಲವಾರು ವಿಲಕ್ಷಣ ಘಟನೆಗಳು ಅವನ ಬಾಲ್ಯದಲ್ಲಿ ಸಂಭವಿಸಿದ್ದವು.

ಚಿಕ್ಕಪ್ಪ ಎಷ್ಟು ಒತ್ತಾಯಿಸಿದರೂ ಭೋಲಾನಾಥ ಇಂಗ್ಲಿಷ್ ಕಲಿಯಲಿಲ್ಲ.

ಬಾಲ್ಯದಿಂದಲೇ ಧಾರ್ಮಿಕ ಪ್ರವೃತ್ತಿಯವನಾಗಿದ್ದ ಆತನಿಗೆ ಭಾರತೀಯ ಸಂಸ್ಕೃತಿ ಹಾಗೂ ಅಧ್ಯಾತ್ಮದ ಬಗ್ಗೆ ಅಪಾರ ಒಲವು. ಹೀಗಾಗಿ ಆತ ನವದ್ವೀಪದ ಓರ್ವ ಸಂಸ್ಕೃತ ವಿದ್ವಾಂಸನ ಬಳಿಯಲ್ಲಿ ಸಂಸ್ಕೃತವನ್ನು ಅಭ್ಯಸಿಸಿದ.

### ಜಟಾಧಾರಿಯ ಅನುಗ್ರಹ

ಭೋಲಾನಾಥ ೧೫ರ ಹರೆಯದಲ್ಲಿದ್ದಾಗ ಒಂದು ದುರ್ಘಟನೆ ಸಂಭವಿಸಿತು. ಎಂದಿನಂತೆ ಆತ ಸ್ಮಶಾನದಲ್ಲಿ ಶಿವನ ಆರಾಧನೆ ಮುಗಿಸಿ ಹಿಂತಿರುಗುತ್ತಿದ್ದಾಗ ಹುಚ್ಚುನಾಯಿಯೊಂದು ಕಡಿಯಿತು. ಅವನ ಶರೀರದಲ್ಲಿ ವಿಷ ಏರಹತ್ತಿತು. ಭೋಲಾನಾಥ ಯಾತನೆ ತಡೆದುಕೊಳ್ಳಲಾಗದೆ ಕಿರಿಚುತ್ತಿದ್ದ. ಕುಟುಂಬದ ಮಂದಿ ಹುಚ್ಚುನಾಯಿಯ ವಿಷ ತೆಗೆಯಲು ನಾನಾ ವಿಧದ ಚಿಕಿತ್ಸೆ ಮಾಡಿದರೂ ಯಾವ ಪ್ರಯೋಜನವೂ ಆಗಲಿಲ್ಲ.

ಮರುದಿನ ಭೋಲಾನಾಥ ಅದೇ ಸ್ಥಿತಿಯಲ್ಲಿ ಗಂಗಾನದಿಯ ದಡಕ್ಕೆ ಹೋದ. ಅಲ್ಲಿ ಓರ್ವ ಜಟಾಧಾರಿ ಸಂನ್ಯಾಸಿ ನೀರಿನ ಮೇಲೆ ಪದ್ಮಾಸನದಲ್ಲಿ ಕುಳಿತು ಧ್ಯಾನಮಾಡುತ್ತಿದ್ದುದನ್ನು ನೋಡಿ ಆಶ್ಚರ್ಯದಿಂದ ಸ್ತಂಭಿತನಾದ. ತುಸು ಹೊತ್ತಿನಲ್ಲಿ ಸಂನ್ಯಾಸಿ ಭೋಲಾನಾಥನನ್ನು ಆಪಾದಮಸ್ತಕ ನೋಡಿ ಸಮೀಪಕ್ಕೆ ಕರೆದ. ಆ ಸಂನ್ಯಾಸಿಯ ಮುಖದಲ್ಲಿ ವಿಲಕ್ಷಣ ತೇಜಸ್ಸು ಇತ್ತು. ಆತ ನೀರಿನಿಂದ ಮೇಲಕ್ಕೆ ಬಂದು ದಡ ಸಮೀಪಿಸಿದಾಗ ನೀರು ಸಂನ್ಯಾಸಿಯೊಂದಿಗೆ ಎತ್ತರಕ್ಕೆ ಚಿಮ್ಮಿತು. ಈ ಅದ್ಭುತ ದೃಶ್ಯವನ್ನು ಭೋಲಾನಾಥ ನೋಡುತ್ತಾ ನಿಂತಿದ್ದ.

ಸಂನ್ಯಾಸಿ ಭೋಲಾನಾಥನನ್ನು ಒಂದು ಕ್ಷಣ ದಿಟ್ಟಿಸಿ ನೋಡಿ, "ಮಗು, ಹೆದರಬೇಡ,

ನಿನಗೆ ಶುಭವಾಗುತ್ತದೆ," ಎಂದು ತನ್ನ ಜೋಳಿಗೆಯಿಂದ ಔಷಧಿ ಚೂರ್ಣವೊಂದನ್ನು ತೆಗೆದು ಭೋಲಾನಾಥನಿಗೆ ತಿನ್ನಲು ಕೊಟ್ಟ. ಬಳಿಕ ತನ್ನ ಕೈಯಿಂದ ಅವನ ಮೈಯನ್ನೆಲ್ಲಾ ಸವರಿದಾಗ ಭೋಲಾನಾಥನಿಗೆ ಮಂಜುಗಡ್ಡೆಯಿಂದ ದೇಹವನ್ನೆಲ್ಲಾ ಒತ್ತಿದಂತಾಯಿತು. ಅವನ ಶರೀರದ ಯಾತನೆ ನಿಂತು ಆರೋಗ್ಯ ಸುಧಾರಿಸಿತು.

ಮರುದಿನ ಮತ್ತೆ ಭೋಲಾನಾಥ ಗಂಗಾ ತಟಕ್ಕೆ ಹೋದ. ಆ ಸಂನ್ಯಾಸಿಗೆ ದಂಡ ಪ್ರಣಾಮ ಮಾಡಿ ತನ್ನನ್ನು ಶಿಷ್ಯನನ್ನಾಗಿ ಪರಿಗ್ರಹಿಸಬೇಕೆಂದು ಬೇಡಿಕೊಂಡ. ಆಗ ಸಂನ್ಯಾಸಿ, "ನಿನ್ನ ಗುರು ನಾನಲ್ಲ. ನಿನ್ನ ಗುರು ಇಲ್ಲಿಂದ



ಬಹಳ ದೂರದಲ್ಲಿದ್ದಾನೆ. ಯೋಗ್ಯ ಕಾಲ ಬಂದಾಗ ವಿಧಿ ನಿನ್ನನ್ನು ಆ ಗುರುವಿನ ಬಳಿಗೆ ತಲುಪಿಸುತ್ತದೆ," ಎಂದ. ಆನಂತರ ಭೋಲಾನಾಥನಿಗೆ ಒಂದು ಯೋಗಾಸನ ಕಲಿಸಿ ಬೀಜ ಮಂತ್ರ ಉಪದೇಶಿಸಿದ. ಆನಂತರ ಗಂಗಾಸಾಗರಕ್ಕೆ ಹೊರಟುಹೋದ.

ಎರಡು ವರ್ಷ ಕಳೆದವು. ಭೋಲಾನಾಥ ಸಂನ್ಯಾಸಿ ಕಲಿಸಿದ ಯೋಗಾಸನ ಹಾಗೂ ಬೀಜಮಂತ್ರದ ಸಾಧನೆಯನ್ನು ಮುಂದುವರಿಸಿದ. ಭೋಲಾನಾಥ ಕಾಂಚನನಗರದಲ್ಲಿ ವಾಸಿಸುತ್ತಿದ್ದಾಗ, ನಗರದ ಹೊರಭಾಗಕ್ಕೆ ಓರ್ವ ಸಂನ್ಯಾಸಿ ಬಂದಿದ್ದಾನೆ, ಆತ ಸದಾ ಜಲಯೋಗದಲ್ಲಿ ನಿರತನಾಗಿರುತ್ತಾನೆ ಎಂದು ಯಾರೋ ಹೇಳುತ್ತಿದ್ದುದು ಕೇಳಿಸಿತು. ಭೋಲಾನಾಥನಿಗೆ ಎರಡು ವರ್ಷಗಳ ಹಿಂದೆ ಸ್ಮಶಾನದಲ್ಲಿ ತನಗೆ ಜೀವದಾನ ನೀಡಿದ ಸಂನ್ಯಾಸಿಯ ನೆನಪಾಯಿತು. ಕೂಡಲೇ ಭೋಲಾನಾಥ ಆ ಸಂನ್ಯಾಸಿಯನ್ನು ಭೇಟಿಯಾದ. ಆತ ಎರಡು ವರ್ಷಗಳ ಹಿಂದೆ ಭೋಲಾನಾಥನಿಗೆ ಯೋಗಾಸನ ಕಲಿಸಿ ಬೀಜ ಮಂತ್ರ ಉಪದೇಶಿಸಿದ ಸಂನ್ಯಾಸಿಯೇ ಆಗಿದ್ದ. ಆ ಸಂನ್ಯಾಸಿನಿಯ ಹೆಸರು ಸೀಮಾನಂದ ಪರಮಹಂಸ ಎಂದು. ಭೋಲಾನಾಥನೊಂದಿಗೆ ಹರಿಪಾದ ಎಂಬ ಇನ್ನೊಬ್ಬ ಹುಡುಗನೂ ಇದ್ದ. ಇಬ್ಬರೂ ಸಂನ್ಯಾಸಿಗೆ ಉದ್ದಂಡ ನಮಸ್ಕರಿಸಿ, "ಪ್ರಭೂ, ಈಗಲಾದರೂ ನನ್ನ ಮೇಲೆ ಕೃಪೆ ತೋರಿ ಶಿಷ್ಯನನ್ನಾಗಿ ಸ್ವೀಕರಿಸಿ," ಎಂದು ಬೇಡಿಕೊಂಡರು. ಈ ಬಾರಿ ಸೀಮಾನಂದರಿಗೆ ಹುಡುಗರ ಬೇಡಿಕೆಯನ್ನು ತಿರಸ್ಕರಿಸಲು ಸಾಧ್ಯವಾಗಲಿಲ್ಲ. ಅದೇ ದಿನ ಸಂಜೆ ಅವರು ಈ ಇಬ್ಬರು ಶಿಷ್ಯರ ಕಣ್ಣಿಗೆ ಬಟ್ಟೆ ಬಿಗಿದು ತಮ್ಮೊಂದಿಗೆ ಕರೆದೊಯ್ದರು. ಮರುದಿನ ಮುಂಜಾನೆ ಅವರು ವಿಂಧ್ಯಾಚಲ ತಲುಪಿದರು. ಮೂರು ನಾಲ್ಕು ದಿನಗಳ ತರುವಾಯ ಮತ್ತೆ ಸೀಮಾನಂದರು ಶಿಷ್ಯರ ಕಣ್ಣುಗಳಿಗೆ ಬಟ್ಟೆ ಕಟ್ಟಿ ಯಾತ್ರೆ ಮುಂದುವರಿಸಿದರು. ಈ ಬಾರಿ ಅವರು ಯೋಗಬಲದಿಂದ ತಮ್ಮ ಶಿಷ್ಯರನ್ನು ಹಿಮಾಲಯದ ದುರ್ಗಮ ಬೆಟ್ಟ ಪ್ರದೇಶದಲ್ಲಿದ್ದ ಯೋಗಾಶ್ರಮಕ್ಕೆ ಕರೆದೊಯ್ದರು. ಅಲ್ಲಿ ಭೃಗುರಾಮ ಪರಮಹಂಸ ಎಂಬವರು ಭೋಲಾನಾಥನಿಗೆ ಬೀಜಮಂತ್ರ ಉಪದೇಶಿಸಿ, ಯೋಗಾಸನಗಳನ್ನು ಕಲಿಸಿದರು. ಇದೇ ಯೋಗಾಶ್ರಮದಲ್ಲಿ ಪರಮ

ಹಂಸ ಶ್ಯಾಮಾನಂದ ಎಂಬವರು ಹನ್ನೆರಡು ವರ್ಷಗಳ ಕಾಲ ಸೂರ್ಯವಿಜ್ಞಾನದ ಸಾಧನೆಯನ್ನು ಭೋಲಾನಾಥನಿಗೆ ಕಲಿಸಿದರು. ಆ ವೇಳೆಗಾಗಲೇ ಭೋಲಾನಾಥ ಸಂನ್ಯಾಸಾಶ್ರಮ ಸ್ವೀಕರಿಸಿದ್ದ.

ಅನಂತರ ಅಖಂಡ ಎಂಟು ವರ್ಷಕಾಲ ಇಡೀ ಭಾರತದಲ್ಲಿ ಆತ ಸಂಚರಿಸಿದ.

ಸಂನ್ಯಾಸದೀಕ್ಷೆ ಪಡೆದ ಬಳಿಕ ಭೋಲಾನಾಥರು ಸ್ವಾಮಿ ವಿಶುದ್ಧಾನಂದರೆಂದು ಹೆಸರಾದರು. ಅವರು ತಮ್ಮ ಗುರುವಿನಿಂದ "ನಾಭಿ ಧೌತಿ" "ಕಿರಾತ ಧೌತಿ" ಹಾಗೂ 'ಕಿರಾತ ಕುಂಭವ" ಸಾಧನೆಗಳನ್ನು ಕಲಿತರು. ಈ ಸಾಧನೆಗಳಲ್ಲಿ ಪರಿಣತಿ ಗಳಿಸುವ ಮೂಲಕ ಒಬ್ಬ ಯೋಗಿ ತನ್ನ ಶರೀರವನ್ನು ಭಾರರಹಿತ ಸ್ಥಿತಿಗೆ ಪರಿವರ್ತಿಸಲು ಶಕ್ತನಾಗುತ್ತಾನೆ.

### ಶರೀರದಲ್ಲಿ ಸ್ಫಟಿಕಗೋಲಗಳು!

ಸಿದ್ಧಪುರುಷ ಸ್ವಾಮಿ ವಿಶುದ್ಧಾನಂದರ ದೇಹದಲ್ಲಿ ಮುನ್ನೂರು-ನಾನೂರು 'ಸ್ಫಟಿಕ ಗೋಲ'ಗಳು ಅಡಗಿದ್ದವಂತೆ. ಅವರು ಇವುಗಳನ್ನು ತಮ್ಮ ರೋಮರಂಧ್ರಗಳ ಮೂಲಕ ಹೊರತೆಗೆದು, ಅನಂತರ ಶರೀರದೊಳಗೆ ಸೆಳೆದುಕೊಳ್ಳುತ್ತಿದ್ದರಂತೆ. ಶರೀರದಿಂದ ಹೊರಬಂದ ಸ್ಫಟಿಕ ಗೋಲಗಳಿಂದ ವಿಶಿಷ್ಟ ಪರಿಮಳ ಹೊರಸೂಸುತ್ತಿತ್ತು. ಇಷ್ಟು ಮಾತ್ರವಲ್ಲ, ಶಿರೋಭಾಗದಿಂದ ಶಿವಲಿಂಗ, ಮಾಲೆ, ಸಾಲಿಗ್ರಾಮಗಳನ್ನು ಹೊರತೆಗೆದು ನಂತರ ಶರೀರದೊಳಗಿರಿಸುತ್ತಿದ್ದರು.

ವಿಶುದ್ಧಾನಂದರ ಹಿರಿಯ ಸಹೋದರ ಭೂತನಾಥ ಚಟ್ಟೋಪಾಧ್ಯಾಯ ವೈದ್ಯಕೀಯ ವೃತ್ತಿಯಲ್ಲಿದ್ದ. ಒಂದು ದಿನ ಆತ ವಿಶುದ್ಧಾನಂದರೊಡನೆ, "ನೀನು ಯೋಗಶಕ್ತಿಯಿಂದ ತೀರಿಹೋದ ನಮ್ಮ ತಂದೆಯನ್ನು ಕಾಣಿಸಿಕೊಳ್ಳುವಂತೆ ಮಾಡಬಲ್ಲೆಯಾ ?" ಎಂದು ಕೇಳಿದ.

"ಅಣ್ಣಾ, ಯೋಗಶಕ್ತಿಯಿಂದ ಎಲ್ಲವನ್ನೂ ಸಾಧಿಸಬಹುದು. ಆದರೆ ಸ್ವರ್ಗಸ್ಥ ತಂದೆಯವರನ್ನು ಮತ್ತೆ ಪ್ರತ್ಯಕ್ಷಗೊಳಿಸುವುದರಿಂದ ಯಾವ ಪ್ರಯೋಜನವಿದೆ ?" ಎಂದು ಮರು ಪ್ರಶ್ನಿಸಿದರು ಸ್ವಾಮಿ ವಿಶುದ್ಧಾನಂದರು.

ಆದರೆ ಭೂತನಾಥನು ಹಿಡಿದ ಹಟ ಬಿಡಲಿಲ್ಲ. ಆಗ ವಿಶುದ್ಧಾನಂದರು ಒಂದು ಸ್ವಚ್ಛವಾದ ಕೊಠಡಿಯಲ್ಲಿ ಶುಭ್ರವಾದ ಹಾಸಿಗೆ ಹಾಸಿ ಯೋಗಶಕ್ತಿಯಿಂದ ತಂದೆಯನ್ನು ಧ್ಯಾನಿಸಿದರು. ಕೆಲವೇ ಕ್ಷಣಗಳಲ್ಲಿ ತೀರಿಕೊಂಡ ತಂದೆಯವರ ಆಕೃತಿ ಹಾಸಿಗೆಯ ಮೇಲೆ ಕಾಣಿಸಿಕೊಂಡಿತು. ಸುಮಾರು ೧೫ ನಿಮಿಷ ಆ ಆಕೃತಿ ಹಾಸಿಗೆಯ ಮೇಲಿತ್ತು. ಭೂತನಾಥ ತಂದೆಗೆ ಅನೇಕ ಪ್ರಶ್ನೆಗಳನ್ನು ಕೇಳಿದ. ಎಲ್ಲ ಪ್ರಶ್ನೆಗಳಿಗೂ ಸಮರ್ಪಕ ಉತ್ತರ ನೀಡಿದ ಆ ಆಕೃತಿ ನಂತರ ಕಣ್ಮರೆಯಾಯಿತು.

ಸ್ವಾಮಿ ವಿಶುದ್ಧಾನಂದರು ತಮ್ಮ ಸೋದರ ಭೂತನಾಥನ ಸಾವಿನ ಬಗ್ಗೆ ಮೊದಲೇ ಮುನ್ಸೂಚನೆ ನೀಡಿದ್ದರು. ಒಂದು ಬಾರಿ ಭೂತನಾಥನಿಗೆ ಗಂಭೀರ ಸ್ವರೂಪದ ಕಾಯಿಲೆ ಬಂತು. ಆಗ ಸ್ವಾಮೀಜಿ ತಮ್ಮ ತಪಃಶಕ್ತಿಯಿಂದ ಅವನನ್ನು ರೋಗಮುಕ್ತಗೊಳಿಸಿದರು. ಆದರೆ ಒಂದು ಎಚ್ಚರಿಕೆಯ ಮಾತನ್ನವರು ಹೇಳಲು ಮರೆಯಲಿಲ್ಲ. "ಅಣ್ಣಾ, ಮುಂದೆಂದಾದರೂ ಹೀಗೆಯೇ ಮತ್ತೆ ತೀವ್ರವಾಗಿ ಅನಾರೋಗ್ಯ ಪೀಡಿತನಾದರೆ ಸಾವು ನಿಶ್ಚಿತ. ನೀನು ಈರುಳ್ಳಿ, ತತ್ತಿ ಸೇವನೆಯನ್ನು ತ್ಯಜಿಸಬೇಕು," ಎಂದರು. ಭೂತನಾಥರು ಆ ಸಂದರ್ಭದಲ್ಲಿ ಸ್ವಾಮೀಜಿಯ ಆದೇಶವನ್ನು ಪಾಲಿಸಿದರು. ಆದರೆ ಕೆಲಕಾಲದ ನಂತರ ಮತ್ತೆ ಅವುಗಳನ್ನು ಸ್ವೀಕರಿಸಲು ಆರಂಭಿಸಿದರು. ಮುಂದೊಮ್ಮೆ ಮತ್ತೆ ಅನಾರೋಗ್ಯ ಪೀಡಿತರಾದಾಗ, "ಇನ್ನು ನಮ್ಮ ಅಣ್ಣ ಬದುಕಿ ಉಳಿಯಲಾರ" ಎಂದು ತಮ್ಮ ತಾಯಿಗೆ

ಹೇಳಿದರು. ಅವನ ಸಾವಿನ ದಿನ, ವೇಳೆಯನ್ನೂ ಅವರು ಖಚಿತವಾಗಿ ಸೂಚಿಸಿದರು. ಅವರ ಭವಿಷ್ಯವಾಣಿ ನಿಜವಾಯಿತು.

ಸ್ವಾಮಿ ವಿಶುದ್ಧಾನಂದರು ಗುರುವಿನ ಆದೇಶದಂತೆ ವೈದ್ಯಕೀಯವನ್ನೂ ಕಲಿತು ಬರ್ದವಾನ್‌ನಲ್ಲಿ ರೋಗಿಗಳಿಗೆ ಉಚಿತವಾಗಿ ಚಿಕಿತ್ಸೆ ನೀಡುತ್ತಿದ್ದರು. ಅವರ ಬಳಿಗೆ ಕಾಯಿಲೆ ಹೊತ್ತು ಚಿಕಿತ್ಸೆಗಾಗಿ ಬಂದ ರೋಗಿ ಸಂಪೂರ್ಣ ಗುಣಮುಖನಾಗಿ ಹಿಂತಿರುಗುತ್ತಿದ್ದ.

ಅವರು ತಾಯಿಯ ಆಗ್ರಹದ ಮೇರೆಗೆ ವಿವಾಹವಾಗಬೇಕಾಯಿತು. ಗುರುವಿನ ಅನುಮತಿ ಪಡೆದು ಅವರು ವಿವಾಹವಾದರು. ಸ್ವಾಮೀಜಿಗೆ ಇಬ್ಬರು ಪುತ್ರರು ಜನಿಸಿದರು. ಇಬ್ಬರು ಮಕ್ಕಳೂ ಇಂದು ಪಶ್ಚಿಮ ಬಂಗಾಳದ ಬಂಡೂಲದಲ್ಲಿ ಅಧ್ಯಾತ್ಮಸಾಧನೆಗೈಯುತ್ತಿದ್ದಾರೆ. ಇಬ್ಬರೂ ಅದರಲ್ಲಿ ಉನ್ನತ ಹಂತವನ್ನು ತಲುಪಿದ್ದಾರೆ.

### ಸಾಧನಗೃಹದಲ್ಲಿ ವಿಷಸರ್ಪ

ವಿಶುದ್ಧಾನಂದರು ದಿನದಲ್ಲಿ ಒಟ್ಟು ಐದಾರು ಬಾರಿ ಸ್ನಾನ ಮಾಡುತ್ತಿದ್ದರು. ಉಗ್ರ ಚಳಿಗಾಲದ ದಿನಗಳಲ್ಲೂ ಅವರು ನಡುರಾತ್ರಿಯಲ್ಲಿ ತಣ್ಣೀರಿನ ಕೊಳದಲ್ಲಿ ಅರ್ಧ ಗಂಟೆ ಮುಳುಗಿ ಈಜುತ್ತಿದ್ದರು. ಭಗವಂತನ ನಾಮಸ್ಮರಣೆ ಮಾಡುತ್ತಾ ಕೊಳದಿಂದ ಹೊರಬಂದು ಪೂಜಾಗೃಹವನ್ನು ಪ್ರವೇಶಿಸಿ, ಅಖಂಡ ಮೂರುತಾಸು ದೇವರನ್ನು ಪೂಜಿಸುತ್ತಿದ್ದರು.

ಅವರ ಸಾಧನಾ ಗೃಹದಲ್ಲಿ ಒಂದು ವಿಷಸರ್ಪ ನೆಲೆಸಿತ್ತು. ಸಾಧನೆ ತೀಕ್ಷ್ಣತೆಯಲ್ಲಿ ವಿಶುದ್ಧಾನಂದರ ಮೈಯೆಲ್ಲ ಬಿಸಿಯೇರಿದಾಗ ಅವರು ಈ ಸರ್ಪವನ್ನು ಮೈ ಮೇಲೆಲ್ಲಾ ಹರಿದಾಡಲು ಬಿಟ್ಟು ದೇಹವನ್ನು ತಂಪಾಗಿಸುತ್ತಿದ್ದರಂತೆ. ಸಾಧನಾ ಗೃಹಕ್ಕೆ ಅವರನ್ನು ಹೊರತುಪಡಿಸಿ ಬೇರೆಯಾರಾದರೂ ಕಾಲಿರಿಸಿದರೆ ವಿಷಸರ್ಪ ಭಯಂಕರವಾಗಿ ಹೆಡೆ ಎತ್ತಿ ಭುಸುಗುಟ್ಟಿ ಅವರನ್ನು ಹಿಮ್ಮೆಟ್ಟಿಸುತ್ತಿತ್ತು.

> **ಇಲ್ಲದಿರುವಾಗ**
>
> ಅಕ್ಕಪಕ್ಕದಲ್ಲಿ
> ಯಾರೂ ಇಲ್ಲದಿರುವಾಗ
> ಅಕ್ಕನ
> ಪಕ್ಕದಲ್ಲೇ
> ಇರುವ
> ಭಾವ
>
> ⊙ ವೆಂಕಟೇಶ ಎಸ್. ಹಾರೇಬೈಲು

### ಅದೃಶ್ಯರಾದರು

ಒಂದು ದಿನ ಸ್ವಾಮೀಜಿ ತಮ್ಮ ಶಿಷ್ಯ ಉಪೇಂದ್ರಬಾಬು ಅವರನ್ನು ಉದ್ದೇಶಿಸಿ, "ವಾಸ್ತವವಾಗಿ ನಾವು ನಿತ್ಯವೂ ಸುತ್ತಮುತ್ತ ಏನನ್ನು ನೋಡುತ್ತೇವೆಯೋ ಅವೆಲ್ಲವೂ ಈಶ್ವರನೇ ಆಗಿವೆ. ಈ ಜಗತ್ತಿನಲ್ಲಿ ಈಶ್ವರನ ಹೊರತು ಬೇರ ಯಾವ ಅಸ್ತಿತ್ವವೂ ಇಲ್ಲ. ನಮ್ಮ ತೋಟದಲ್ಲಿ ಮಲ್ಲಿಗೆ ಹೂವಿನ ಗಿಡವಿದೆಯಲ್ಲ. ಅದನ್ನು ಚೆನ್ನಾಗಿ ನೋಡು. ಅದು ವಾಸ್ತವವಾಗಿ ಮಲ್ಲಿಗೆ ಹೂವು ಹೌದೋ ಅಲ್ಲವೊ ?" ಎಂದು ಕೇಳಿದರು.

ಆಗ ಉಪೇಂದ್ರಬಾಬು ಮಲ್ಲಿಗೆ ಗಿಡದ ಸಮೀಪ ಹೋಗಿ, "ಸ್ವಾಮೀಜಿ, ಇದು ಮಲ್ಲಿಗೆ ಹೂವೇ ಆಗಿದೆ," ಎಂದರು.

ಆದರೆ ಅವರು ಗಿಡದಿಂದ ಹೂವನ್ನು ಕೊಯ್ದಾಗ ಅದು ಗುಲಾಬಿ ಹೂ ಆಗಿ ಪರಿಣಮಿಸಿತು. ಅವರ ಆಶ್ಚರ್ಯಕ್ಕೆ ಮಿತಿಯಿರಲಿಲ್ಲ.

ಆಗ ಉಪೇಂದ್ರ ಅವರು, "ಸ್ವಾಮೀಜಿ, ಈಗ ನೀವು ನಮ್ಮ ಮುಂದೆ ಕುಳಿತಿದ್ದೀರಿ. ಇದು ಸತ್ಯವೇ ಮಿಥ್ಯವೇ ?" ಎಂದು ಪ್ರಶ್ನಿಸಿದರು.

"ಉಪೇಂದ್ರಬಾಬು, ನನ್ನ ಅಸ್ತಿತ್ವ ಎಲ್ಲಿದೆ?" ಎಂದು ಉದ್ಗರಿಸಿದ ಸ್ವಾಮೀಜಿ ಇದ್ದಕ್ಕಿದ್ದಂತೆ ಅದೃಶ್ಯರಾದರು. ಉಪೇಂದ್ರ ಬಾಬು ತೆರೆದ ಕಣ್ಣು, ಬಿಟ್ಟಬಾಯಿಯಿಂದ ನೋಡುತ್ತಲೇ ಇದ್ದರು. ಕೆಲವು ಕ್ಷಣಗಳ ಬಳಿಕ ಸ್ವಾಮೀಜಿ ತಮ್ಮ ನಿವಾಸದ ಮುಂಬಾಗಿಲಿನಿಂದ ಒಳಬರುತ್ತಿರುವುದು ಗೋಚರಿಸಿತು. ಒಳಗೆ ಬಂದು ತಮ್ಮ ಆಸನದಲ್ಲಿ ಕುಳಿತು, "ಮಗೂ, ಈ ಪೃಥ್ವಿಯಲ್ಲಿ ಕೇವಲ ಬ್ರಹ್ಮವೊಂದೇ ಸತ್ಯ. ನಿನ್ನ ಕರ್ತವ್ಯವನ್ನು ಸಮರ್ಪಕವಾಗಿ ಮಾಡುತ್ತಿರು, ಅಂದರೆ ನಿಧಾನವಾಗಿ ನೀನು ಈ ಜಗತ್ತನ್ನು ಅರ್ಥಮಾಡಿಕೊಳ್ಳುತ್ತೀಯಾ," ಎಂದು ಹೇಳಿದರು.

ಬರ್ದವಾನ್‌ದಲ್ಲಿ ಸ್ವಾಮಿ ವಿಶುದ್ಧಾನಂದರು ಉಪೇಂದ್ರನಾಥ ಚೌಧುರಿಯವರ ಮನೆಯಲ್ಲಿ ವಾಸಿಸುತ್ತಿದ್ದರು. ಉಪೇಂದ್ರನಾಥ ಚೌಧರಿ ಪೊಲೀಸ್ ಸಬ್‌ಇನ್‌ಸ್ಪೆಕ್ಟರ್ ಆಗಿದ್ದರು. ಅವರ ಮೇಲಧಿಕಾರಿ ಆರ್.ಎಫ್.ಗೈಡ್ ಎಂಬಾತ ಮಹಾ ಮುಂಗೋಪಿ ಹಾಗೂ ದರ್ಪಿಷ್ಟನಾಗಿದ್ದ. ಯಾವತ್ತೂ ಉಪೇಂದ್ರನಾಥನ ಮೇಲೆ ಸಿಟ್ಟಿನಿಂದ ಕೂಗಾಡುತ್ತಿದ್ದ.

ಒಂದು ದಿನ ಉಪೇಂದ್ರನಾಥರು ತಮ್ಮ ಪೂಜಾಗೃಹದಲ್ಲಿ ರಾತ್ರಿ ಶಿವನ ಆರಾಧನೆಯ ಸಲುವಾಗಿ ಸ್ವಾಮೀಜಿಗೆ ಎಲ್ಲ ವ್ಯವಸ್ಥೆ ಮಾಡಿ, ಅನಂತರ ತಮ್ಮ ಕೊಠಡಿಗೆ ಮಲಗಲು ಹೋದಾಗ ಶಿವನ ಅರ್ಚನೆಗೆ ಹೂಗಳನ್ನು ಇರಿಸಲು ಮರೆತಿದ್ದು ಗೊತ್ತಾಯಿತು. ಮರುದಿನ ಬೆಳಿಗ್ಗೆ ಎದ್ದು ಉಪೇಂದ್ರನಾಥರು ಪೂಜಾಗೃಹಕ್ಕೆ ಬಂದಾಗ ಪೂಜಾ ಗೃಹದಲ್ಲೆಲ್ಲ ಕಮಲದ ಹೂವುಗಳು ಕಂಗೊಳಿಸುತ್ತಿದ್ದವು.

ಆಗ ಸ್ವಾಮೀಜಿ ಅವರನ್ನು ನೋಡಿ, "ನೀನು ನಿನ್ನೆ ರಾತ್ರಿ ಶಿವಪೂಜೆಗೆ ಎಲ್ಲ ವ್ಯವಸ್ಥೆ ಮಾಡಿಹೋಗಿದ್ದೀಯ. ಆದರೆ ಅಲ್ಲಿದ್ದ ಸೌಲಭ್ಯಗಳಿಂದ ಪೂಜಾ ವಿಧಿ ನಡೆಸಲು ಸಾಧ್ಯವಿರಲಿಲ್ಲ. ಶಿವನ ಪೂಜೆ ಮಾಡುತ್ತಿದ್ದಂತೆಯೇ ನನ್ನ ಒಳಗಣ್ಣಿಗೆ ಒಂದು ಪುಷ್ಕರಣಿ ಗೋಚರಿಸಿತು. ಅದರಲ್ಲಿ ದೊಡ್ಡ ದೊಡ್ಡ ಕಮಲದ ಹೂ ಬೆಳೆದಿದ್ದವು. ನಾನು ನಿನ್ನೆ ಆ ಹೂಗಳಿಂದಲೇ ಪೂಜೆ ಮಾಡಿದೆ," ಎಂದರು.

ಸ್ವಲ್ಪ ಹೊತ್ತಿನ ಬಳಿಕ ಸ್ವಾಮೀಜಿ ಮತ್ತೆ ಉಪೇಂದ್ರನಾಥರಿಗೆ, "ಆಫೀಸಿನಲ್ಲಿ ನಿನ್ನ ಸಾಹೇಬರು ನಿನ್ನ ಬಗ್ಗೆ ಸಿಟ್ಟುಗೊಂಡಿದ್ದಾರೆ ಎಂಬುದು ನನಗೆ ಗೊತ್ತು. ಆದರೂ ಇವತ್ತೇ ನೀನು ನಿನ್ನ ಬಡ್ತಿಗಾಗಿ ಅರ್ಜಿ ಬರೆದು ಅವರಿಗೆ ಕೊಡು. ಎಲ್ಲವೂ ಒಳ್ಳೆಯದಾಗುತ್ತದೆ," ಎಂದರು.

ಆ ಪ್ರಕಾರ ಉಪೇಂದ್ರನಾಥರು ತಮ್ಮ ಬಡ್ತಿಗಾಗಿ ಅರ್ಜಿ ಬರೆದು ಅದನ್ನು ಸಾಹೇಬರ ಮುಂದಿರಿಸಿದಾಗ ಅವರು ಅರ್ಜಿಯನ್ನೋದಿ ಅದರ ಮೇಲೆ ಬಡ್ತಿಗಾಗಿ ಶಿಫಾರಸು ಮಾಡಿ ರುಜು ಹಾಕಿದರು. ಸ್ವಾಮೀಜಿಯ ಆಶೀರ್ವಾದದಿಂದಲೇ ಇದೆಲ್ಲ ಆಯಿತು ಎಂದು ಉಪೇಂದ್ರನಾಥರು ಭಾವಿಸಿದರು.

ತಮ್ಮ ಗುರುಗಳು ನೀಡಿದ 'ಹರಿಹರ' ಲಿಂಗವನ್ನು ಸ್ವಾಮೀಜಿ ತಮ್ಮ ತಲೆಯಲ್ಲಿ ಧರಿಸಿದ್ದರು. ಅನಂತರದ ದಿನಗಳಲ್ಲಿ ಅವರು ತಮ್ಮ ಹುಟ್ಟೂರಲ್ಲಿ 'ಬಂಡಲೇಶ್ವರ ಮಹಾದೇವ' ದೇವಾಲಯವನ್ನು ನಿರ್ಮಿಸಿ ಅದರಲ್ಲಿ ಈ ಶಿವಲಿಂಗವನ್ನು ಪ್ರತಿಷ್ಠಾಪಿಸಿದರು. ಪ್ರತಿ ವರ್ಷ ಮಹಾಶಿವರಾತ್ರಿಯ ದಿನದಂದು ಈ ಶಿವಲಿಂಗಕ್ಕೆ ಈಗಲೂ ಪೂಜೆ ನಡೆಯುತ್ತಿದೆ.

ಬರ್ದವಾನ್‌ನಲ್ಲಿ ಕ್ಷೇತ್ರಗೋಪಾಲ್ ಬಂದೋಪಾಧ್ಯಾಯರೆಂಬ ಜ್ಯೋತಿಷಿ ನೆಲೆಸಿದ್ದರು. ಅವರಿಗೆ ತಮ್ಮ ಜ್ಯೋತಿಷ್ಯ ಜ್ಞಾನದ ಬಗ್ಗೆ ಭಾರೀ ಅಹಂಕಾರ.

ಒಂದು ದಿನ ಅವರು ಸ್ವಾಮೀಜಿಯ ನಿವಾಸಕ್ಕೆ ಬಂದು ನೇರವಾಗಿ ಸ್ವಾಮೀಜಿ ಕುಳಿತುಕೊಳ್ಳುತ್ತಿದ್ದ ಜಮಖಾನೆಯ ಮೇಲೆ ಕುಳಿತರು. ಆ ದಿನ ಸ್ವಾಮೀಜಿ ಏನೂ ಹೇಳಲಿಲ್ಲ. ಮರುದಿನವೂ ಕ್ಷೇತ್ರಗೋಪಾಲರು

ಹಾಗೆಯೇ ಮಾಡಿದಾಗ ಸ್ವಾಮೀಜಿ, "ಮುಂದೆ ಹೀಗೆ ಮಾಡಬೇಡಿ," ಎಂದು ಹೇಳಿದರು. ಅಷ್ಟಕ್ಕೇ ಆ ಜ್ಯೋತಿಷಿ ಸಿಟ್ಟಿಗೆದ್ದು, "ನಾನೂ ಬ್ರಾಹ್ಮಣ, ನೀವೂ ಬ್ರಾಹ್ಮಣರು. ಜ್ಞಾನದಲ್ಲಿ ಹಿರಿತನದಲ್ಲಿ, ಅನುಭವದಲ್ಲಿ ನಾನೇನೂ ನಿಮಗಿಂತ ಕಡಿಮೆ ಇಲ್ಲ. ನಿಮ್ಮ ಆಸನದಲ್ಲಿ ಕುಳಿತುಕೊಂಡ ಮಾತ್ರಕ್ಕೆ ನನ್ನನ್ನು ಏಕೆ ಅಪಮಾನಗೊಳಿಸುತ್ತೀರಿ?" ಎಂದು ಪ್ರಶ್ನಿಸಿದರು.

ಆಗ ಸ್ವಾಮೀಜಿ ಮುಗುಳ್ನಕ್ಕು, "ಮಹಾಶಯರೇ, ನಿಮ್ಮಲ್ಲಿ ಬ್ರಾಹ್ಮಣತ್ವದ ಅಹಂಕಾರ ತುಂಬಿದೆ. ನೀವು ನಿಜವಾಗಿಯೂ ಬ್ರಾಹ್ಮಣರಾಗಿದ್ದರೆ ಗೌರವ ಪಡೆಯಲು ಹೀಗೆ ದುರಾಸೆ ಪಡುತ್ತಿರಲಿಲ್ಲ. ನಿಜವಾದ ಬ್ರಾಹ್ಮಣ ಇಂದ್ರಪದವಿಯನ್ನೂ ತೃಣಸಮಾನ ಎಂದು ಪರಿಗಣಿಸುತ್ತಾನೆ," ಎಂದರು.

"ಆದರೆ ಅಂತಹ ಬ್ರಾಹ್ಮಣರು ಈಗೆಲ್ಲಿದ್ದಾರೆ? ಆ ಕಾಲ ಕಳೆದುಹೋಯಿತು. ಅಂದು ಬ್ರಾಹ್ಮಣ ಸಿಟ್ಟುಗೊಂಡರೆ ಅವನ ನೇತ್ರಾಗ್ನಿಯಿಂದ ಎಲ್ಲವೂ ಸುಡುತ್ತಿತ್ತು," ಎಂದು ಪ್ರತ್ಯುತ್ತರಿಸಿದರು ಕ್ಷೇತ್ರಗೋಪಾಲರು.

ಆ ಮಾತುಕೇಳಿ ಸ್ವಾಮೀಜಿ ಕ್ಷೇತ್ರಪಾಲರು ಕುಳಿತಿದ್ದ ಜಮ್ಖಾನೆಯ ಕಡೆಗೆ ದಿಟ್ಟಿಸಿನೋಡಿದರು. ಕ್ಷಣ ಮಾತ್ರದಲ್ಲಿ ಅವರ ಜಮಖಾನೆಗೆ ಬೆಂಕಿ ಹೊತ್ತಿಕೊಂಡಿತು. ಕ್ಷೇತ್ರಪಾಲರು ಕುಳಿತಲ್ಲಿಂದ ಧಿಗ್ಗನೆ ಮೇಲೆದ್ದರು. ಇಡೀ ಜಮಖಾನೆ ಸುಟ್ಟು ಹಿಡಿ ಬೂದಿಯಾಯಿತು.

## ಶ್ರೀ ಕೃಷ್ಣನ ದೇಹದ ಪರಿಮಳ

ಸ್ವಾಮಿ ವಿಶುದ್ಧಾನಂದರು ಬರ್ದವಾನ್, ಕಲ್ಕತ್ತಾ, ಬಂಡೂಲ್, ಜಗನ್ನಾಥಪುರಿ ಹಾಗೂ ವಾರಾಣಾಸಿಗಳಲ್ಲಿ ಯೋಗಸಾಧನ ಕೇಂದ್ರಗಳನ್ನೂ ಆಶ್ರಮಗಳನ್ನೂ ಸ್ಥಾಪಿಸಿದರು. ಕಾಶಿಯಲ್ಲಿಯೂ ಯೋಗಾಭ್ಯಾಸ ಕೇಂದ್ರ ಸ್ಥಾಪಿಸಿ




ದರು.

ಒಂದು ಬಾರಿ ವಿಶುದ್ಧಾನಂದರು ಜಗನ್ನಾಥ ಸ್ವಾಮಿಯ ಪುರಿಕ್ಷೇತ್ರಕ್ಕೆ ಭೇಟಿ ನೀಡಿದಾಗ ಅಲ್ಲಿ ಮಹಾವಿದ್ವಾಂಸ ಶ್ರೀ ಗೋಪಿನಾಥ ಕವಿರಾಜರೊಂದಿಗೆ ಅವರ ಭೇಟಿಯಾಯಿತು. ಆಗ ಗೋಪಿನಾಥರು ಒಂದು ಪ್ರಶ್ನೆ ಕೇಳಿದರು: "ಸ್ವಾಮೀಜಿ, ಚೈತನ್ಯ ಚರಿತಾಮೃತ, ಗೋವಿಂದ ಲೀಲಾಮೃತ ಮುಂತಾದ ಗ್ರಂಥಗಳಲ್ಲಿ ಶ್ರೀ-ಕೃಷ್ಣ ದೇಹದ ಪರಿಮಳದ ವರ್ಣನೆ ಬಂದಿದೆಯಲ್ಲ; ವಾಸ್ತವವಾಗಿ ಅದು ಎಂಥ ಪರಿಮಳವಾಗಿತ್ತು ಹೇಳುತ್ತೀರಾ?"

ಕವಿರಾಜರು ಗೋವಿಂದ ಲೀಲಾಮೃತ ಗ್ರಂಥದಲ್ಲಿ ಶ್ರೀಕೃಷ್ಣನ ದೇಹ ಪರಿಮಳದ ವರ್ಣನೆ ಇರುವ ಭಾಗಗಳನ್ನೆಲ್ಲಾ ಒಂದೊಂದಾಗಿಯೇ ವರ್ಣಿಸುತ್ತಾ ಹೋದರು. ಅವರು ವರ್ಣಿಸುತ್ತಾ ಹೋದಂತೆ ಸ್ವಾಮೀಜಿ ಕೈ ಬೆರಳುಗಳಿಂದ ತಾವೂ ಎಣಿಸುತ್ತಾ ಅಂತಿಮವಾಗಿ ಮುಷ್ಟಿಯನ್ನು ಭದ್ರವಾಗಿ ಮುಚ್ಚಿ ಕವಿರಾಜರನ್ನು ಸಮೀಪಕ್ಕೆ ಕರೆದು, "ಇದೋ ಇಲ್ಲಿದೆ ನೋಡಿ, ಶ್ರೀ ಕೃಷ್ಣನ ದೇಹದ ಪರಿಮಳ," ಎಂದರು. ಕವಿರಾಜರು ಅವರ ಮುಷ್ಟಿಯನ್ನು ಮೂಸಿದಾಗ ಅಪೂರ್ವ ಪರಿಮಳ ಸೂರಸೂಸುತ್ತಿತ್ತು.

## ಸಾವಿನ ಅಂಚಿನಲ್ಲಿ ಪವಾಡ!

ವಿಶುದ್ಧಾನಂದರ ಜೀವನದಲ್ಲಿ ಇನ್ನೊಂದು ಅಲೌಕಿಕ ಘಟನೆ ಸಂಭವಿಸಿತು. ಒಮ್ಮೆ ಅವರು ಜಗನ್ನಾಥಪುರಿಯಲ್ಲಿ ತಮ್ಮ ಯೋಗಸಾಧನ ಕೇಂದ್ರದಲ್ಲಿ ಜಯದೇವ ಕವಿಯ ಗೀತಗೋವಿಂದವನ್ನು ಇಂಪಾಗಿ ಹಾಡುತ್ತಿದ್ದರು. ಆಗ ಇದ್ದಕ್ಕಿದ್ದಂತೆ ನೂಪುರದ ಧ್ವನಿ ಕೇಳಿಸಿದಂತಾಯಿತು. ಅವರು ಮಲಗುತ್ತಿದ್ದ ಹಾಸಿಗೆಯಲ್ಲಿ ಉಜ್ವಲ ಪಾದಪದ್ಮಗಳ ರೇಖೆಗಳ ಮುದ್ರೆಗಳು ಮೂಡಿದ್ದವು. ಈ ಮುದ್ರೆಗಳನ್ನು ಮೊದಲು ಕಲಕತ್ತಾದ ಯೋಗಸಾಧನ ಕೇಂದ್ರದಲ್ಲಿ ಪ್ರತಿಷ್ಠಾಪಿಸಲಾಯಿತು. ಅನಂತರ ಅವರು ಕಾಶೀ ಆಶ್ರಮದ ಗೋಪಾಲ ಮಂದಿರದಲ್ಲಿ ಪ್ರತಿಷ್ಠಾಪಿಸಿದರು.

ಮಹಾನ್ ಸಾಧಕ ಸ್ವಾಮೀ ವಿಶುದ್ಧಾನಂದರು ೧೯೩೭ರ ಅಂತ್ಯದಲ್ಲಿ ಕಲ್ಕತ್ತಾದ ಭವಾನಿಪುರದ ವಿಶುದ್ಧಾನಂದ ಆಶ್ರಮದಲ್ಲಿ ತಮ್ಮ ಇಹಜೀವನವನ್ನು ಸಮಾಪ್ತಗೊಳಿಸಿದರು.

ಕೊನೆಯ ದಿನಗಳಲ್ಲಿ ಸ್ವಾಮೀಜಿ ಬಹಳ ಅಸ್ವಸ್ಥರಾಗಿದ್ದರು. ಅವರ ಚಿಕಿತ್ಸೆ ಮಾಡಲು ಬಂದ ವೈದ್ಯರಿಗೆ ತಮ್ಮ ಆಯುಷ್ಯವಿಡೀ ಮರೆಯಲಾಗದ ಒಂದು ಅನುಭವವಾಯಿತಂತೆ. ವೈದ್ಯರು ಸ್ವಾಮೀಜಿಯ ಆರೋಗ್ಯ ತಪಾಸಣೆಗೆ ಬಂದಾಗ ಅವರ ನಾಡಿ ಪರೀಕ್ಷೆ ಮಾಡಲು ಬಯಸಿದರು. ಸ್ವಾಮೀಜಿ ಹಾಸಿಗೆಯಲ್ಲಿ ಮಲಗಿದ್ದರು. ವೈದ್ಯರು ಹಾಸಿಗೆಯ ಹೊದಿಕೆಯೊಳಗೆ ಕೈ ತೂರಿಸಿ ಸ್ವಾಮೀಜಿಯ ನಾಡಿಬಡಿತ ಪರಿಶೀಲಿಸಲು ಪ್ರಯತ್ನಿಸಿದರು. ಆದರೆ ವೈದ್ಯರಿಗೆ ನಾಡಿ ದೊರಕಲಿಲ್ಲ. ವೈದ್ಯರಿಗೆ ನಿರಾಶೆಯಾಗಿ ಹೊದಿಕೆಯೊಳಗಿಂದ ತಮ್ಮ ಕೈ ಹೊರತೆಗೆದರು. ಆಗ ಸ್ವಾಮೀಜಿ, "ತಾವು ದಯವಿಟ್ಟು ಈ ಹೊದಿಕೆ ಪಕ್ಕಕ್ಕೆ ಸರಿಸಿ ಪರಿಶೀಲಿಸಿ," ಎಂದರು. ವೈದ್ಯರು ಅವರ ಹೊದಿಕೆಯನ್ನು ಮೇಲೆತ್ತಿದಾಗ ಸ್ವಾಮೀಜಿಯ ಕೈಯ ಚರ್ಮ, ಮಾಂಸಪೇಶಿಗಳನ್ನು ಅಂಟಿಕೊಂಡ ಹೊದಿಕೆ ಮೇಲಕ್ಕೆ ಬಂದಿತು. ಕೈಯ ಮಾಂಸ ಚಾದರಿಗೆ ಅಂಟಿದ್ದ ಭಾಗದಲ್ಲಿ ಹಸ್ತದ ಕೆಂಪು ಕೆಂಪು ನರಗಳ ನಾಡಿಯ ಮಸುಕು ಮಸುಕಾದ ದೃಶ್ಯ ಗೋಚರಿಸಿತು. ವೈದ್ಯರು ಈ ದೃಶ್ಯ ನೋಡಿ ಸ್ತಂಭೀಭೂತರಾದರು.

ವೈದ್ಯರು ಸ್ವಾಮೀಜಿಯ ಚರಣಗಳಿಗೆ ವಂದಿಸಿದರು. ಸಾವಿನಲ್ಲೂ ಮಹಾಪವಾಡ ಪ್ರದರ್ಶಿಸಿದವರು ಸ್ವಾಮಿ ವಿಶುದ್ಧಾನಂದರು.

(ವಿವಿಧ ಮೂಲಗಳಿಂದ)

---

ಒಂದು ಸಲ ಸ್ವಾಮಿ ವಿವೇಕಾನಂದರು ಟ್ರೈನಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ಅದೇ ಬೋಗಿಯಲ್ಲಿ ಇಬ್ಬರು ಇಂಗ್ಲೀಷಿನವರು ಇದ್ದರು. ಅವರು ಸ್ವಾಮೀಜಿಯನ್ನು ಸಾಧಾರಣ ಭಿಕ್ಷುಕನೆಂದು ಭಾವಿಸಿ ಇಂಗ್ಲೀಷಿನಲ್ಲಿ ಇವರನ್ನು ಕುರಿತು ಗೇಲಿ ಮಾಡುತ್ತಿದ್ದರು. ಸ್ವಾಮೀಜಿ ಇದನ್ನೆಲ್ಲ ಆಲಿಸುತ್ತಾ ತಿಳಿದೂ ತಿಳಿಯದಂತೆ ಕುಳಿತಿದ್ದರು. ಮುಂದಿನ ಸ್ಟೇಶನ್ ಬಂದಾಗ ಇಂಗ್ಲೀಷಿನಲ್ಲಿ "ಸ್ವಲ್ಪ ನೀರು ಕೊಡಿ" ಎಂದು ಹೊರಗೆ ಕೇಳಿದರು. ಇದನ್ನು ಕೇಳಿ ಇಂಗ್ಲೀಷಿನವರು ಈ ಭಿಕ್ಷುಕನಿಗೆ ಇಂಗ್ಲೀಷ ಬೇರೆ ಗೊತ್ತಿದೆ ಎಂದುಕೊಂಡರು. ಅವರು "ನಾವು ನಿನ್ನ ವಿಚಾರವಾಗಿ ಮಾತನಾಡುತ್ತಿದ್ದಾಗ ನೀನು ಏತಕ್ಕೆ ಸುಮ್ಮನೆ ಇದ್ದೆ"? ಎಂದು ಕೇಳಿದರು. ಆಗ ಸ್ವಾಮೀಜಿ "ನಿಮ್ಮಂತಹ ಮೂರ್ಖರನ್ನು ನೋಡುವುದು ಇದೇ ಮೊದಲ ಸಲವಲ್ಲ," ಎಂದರು.

◉ ಛಾಯಾ ದೇಸಾಯಿ

# ನಕ್ಕು ನಗಿಸುವ ಪರಿ



ಹೃದಯ ಬೇಗೆಯ ಹದವಾಗಿಸಲು
ಸುಡುವ ಮಿದುಳ ತಂಪಾಗಿಸಲು
ಚಿಂತೆಯ ಸರಪಳಿ ಸಡಿಲಿಸಲು
ನಗೆಯ ಚಿಲುಮೆಯೇ ಬೇಕು
ನಗಿಸುವ ಚತುರತೆಯೇ ಸಾಕು

ಕಂದನಾ ಕಿರುನಗೆ
ಮಂದಸ್ಮಿತ ಮೆಲುನಗೆ
ಅಲ್ಲಿಹುದು ಹಾಲ್ನೊರೆಯ ಪರಿಶುದ್ಧತೆ
ಅಮೃತ ಸಿಂಪಡಿಸಿ ಈ ನಗೆ
ಮರೆಸುವುದು ನೂರಾರು ಬೇಗೆ

ಯೌವನದ ನಗೆಯ ಕೇಕೆ
ಪಸರಿಸಲು ಸುತ್ತಲಿನ ಪರಿಸರಕೆ
ಮತ್ತು ಬರಿಸುವ ಈ ನಗೆ
ಸುವಾಸನೆಯ ಪರಿಮಳದಂತೆ
ಉನ್ಮತ್ತ ಶಿಖರಕ್ಕೇರಿಸುವುದು ಅಮಲಿನಂತೆ

ನಲವತ್ತರ ಅಂಚಿನಲ್ಲಿ
ನೂರಾರು ಚಿಂತೆಗಳ ಸಂಚಿನಲ್ಲಿ
ಜೀವನದಿ ಬೇಸರಿಕೆ ಮೂಡುತಿರಲು
ನಗುವ ಕಲೆಯ ಕಲಿಯಲು ಬೇಕು
ನಗಿಸಿ ಪನ್ನೀರಲಿ ಮೀಯಬೇಕು

ಬೊಚ್ಚು ಬಾಯಿ ನಗೆಗೆ
ಸಾಟಿ ಎಲ್ಲಿದೆ ಅದಕೆ?
ನೆರೆತ ಕೂದಲಿನೊಳು ಹುದುಗಿ ಕುಳಿತು
ನಗುನಗುತ ಉಸಿರಬಿಡಲು ಹವಣಿಸುವ
ಈ ಕಲೆಯೇ ಜೀವನಕೆ ಸಾರ್ಥಕತೆಯು

• ಕಲಾ ಬಾರಿ

ವಿಚಾರ

# ಪುನರ್ಜನ್ಮ: ಒಂದು ವೈಜ್ಞಾನಿಕ ವಿವರಣೆ

ಪುನರ್ಜನ್ಮದ ಬಗ್ಗೆ ಇತ್ತೀಚಿನ ವರ್ಷಗಳಲ್ಲಿ ಕೆಲವು ಲೇಖನಗಳನ್ನು ಓದಿದ್ದೇನೆ. ಈ ವಿಷಯದ ಬಗ್ಗೆ ಒಂದು ಸಂಭಾವ್ಯವಾದಂತಹ ವಿವರಣೆ ಜೀವಶಾಸ್ತ್ರದ ಚೌಕಟ್ಟಿನಲ್ಲಿಯೇ ಇದೆಯೆಂದು ನನ್ನ ಅನಿಸಿಕೆ. ಈ ಬಗ್ಗೆ ಹೆಚ್ಚಿನ ಸಂಶೋಧನೆ ಅಗತ್ಯ.

ಎಲ್ಲ ಜೀವಿಗಳಂತೆ ಮಾನವನಲ್ಲಿಯೂ ಅನುವಂಶಿಕತೆಗೆ ಕಾರಣವಾದ ಮೂಲದ್ರವ್ಯ ಡಿ.ಎನ್.ಎ. (ಡಿ ಆಕ್ಸಿ ರೈಬೋನ್ಯೂಕ್ಲಿಯಿಕ್ ಆಮ್ಲ) ಇದೆ. ಮೂಲಭೂತವಾಗಿ ಎಲ್ಲ ಮನುಷ್ಯರಲ್ಲಿಯೂ ಇದು ಒಂದೇ ಆಗಿರುತ್ತದೆ. ಮಾನವನ ಉಗಮದಿಂದ ಹಿಡಿದು ಇಲ್ಲಿಯ ವರೆಗೆ ಅನೇಕ ತಲೆಮಾರುಗಳ ಮೂಲಕ ಈ ಮೂಲದ್ರವ್ಯ ಸತತವಾಗಿ ಹರಿದುಬರುತ್ತಿದೆ. ಇದರಲ್ಲಿನ ವಂಶವಾಹಿಗಳು (ಜೀನ್) ಎಲ್ಲಾ ದೈಹಿಕ ಮತ್ತು ಮಾನಸಿಕ ಅಭಿವ್ಯಕ್ತಿಗಳಿಗೆ ಕಾರಣವಾಗಿವೆ. ಮನುಷ್ಯನಾಡುವ ಭಾಷೆ ಮತ್ತು ಇತರ ಸಾಮಾಜಿಕ ನಡವಳಿಕೆಗಳೂ ಇವುಗಳಿಂದಲೇ ಪ್ರಭಾವಿತವಾಗಿವೆ ಎನ್ನಬಹುದು.

ಪ್ರಪಂಚದಾದ್ಯಂತ ಮನುಷ್ಯ ಅನೇಕ ಭಾಷೆಗಳನ್ನಾಡುತ್ತಿದ್ದರೂ ಒಂದೇ ಭೌಗೋಳಿಕ ಪರಿಸರದಲ್ಲಿನ ಭಾಷೆಗಳಲ್ಲಿ ಪರಸ್ಪರ ಸಾಮ್ಯವನ್ನು ಕಾಣಬಹುದು. ಬೇರೆ ಬೇರೆ ಭಾಷೆಗಳಿಗೆ ಕಾರಣ ಜೀವ ದ್ರವ್ಯವು ಅಲ್ಲಿನ ಪರಿಸರಕ್ಕೆ ಸ್ಪಂದಿಸುವ ರೀತಿಯೆ ಹೊರತು ಬೇರೆ ಅಲ್ಲ. ಮಿದುಳಿನ ಕ್ರಿಯೆಗಳೆಲ್ಲವೂ ಈ ಮೂಲದ್ರವ್ಯದಿಂದಲೇ ಪ್ರೇರಿತಗೊಳ್ಳುತ್ತವೆ ಎನ್ನುವುದು ನಿರ್ವಿವಾದ. ಅನೇಕ ವಂಶವಾಹಿಗಳು ಕೆಲ ನಿರ್ದಿಷ್ಟ ಸಮಯದಲ್ಲಿ ಕಾರ್ಯೋನ್ಮುಖವಾಗುವವು ಮತ್ತು ಕೆಲ ಕಾಲದ ನಂತರ ಸ್ಥಗಿತಗೊಳ್ಳುವವು. ಭಾಷೆಗಳಿಗೆ ಸಂಬಂಧಿಸಿದಂತೆ ಮನುಷ್ಯರಲ್ಲಿ ಅನೇಕ ವಂಶವಾಹಿಗಳಿರುವುದು ಸಾಧ್ಯ. ಕೆಲವು ವಿಶಿಷ್ಟ ಸಂದರ್ಭಗಳಲ್ಲಿ ಕೆಲ ವಂಶವಾಹಿಗಳು ಜೀವರಾಸಾಯನಿಕ ಕ್ರಿಯೆಗಳಿಂದ ಪ್ರಚೋದಿಸಲ್ಪಟ್ಟು ಮಿದುಳಿನ ಮೇಲೆ ತತ್ಸಂಬಂಧಿತವಾದ ಪರಿಣಾಮಗಳನ್ನು ಬೀರಿದಾಗ ಆ ವ್ಯಕ್ತಿಯು ತನಗೆ ಇದುವರೆಗೂ ಗೊತ್ತಿಲ್ಲದಂತಹ ಭಾಷೆಯಲ್ಲಿ ಮಾತನಾಡಬಹುದು ಅಥವಾ ಆ ಭಾಷೆಯು ಉದ್ಭವವಾದಂತಹ ಪರಿಸರವನ್ನು ಮತ್ತು ಸಂಬಂಧಪಟ್ಟ ವ್ಯಕ್ತಿಗಳನ್ನು ಗುರುತಿಸಬಹುದು.

ಇದುವರೆವಿಗೂ ದಾಖಲಾಗಿರುವ ಅನೇಕ ಪುನರ್ಜನ್ಮ ಪ್ರಕರಣಗಳಲ್ಲಿ ವ್ಯಕ್ತಿಗಳು ತಮಗೆ ,ಇದುವರೆವಿಗೂ ತಿಳಿಯದಿದ್ದಂತಹ ಭಾಷೆಗಳನ್ನು, ವ್ಯಕ್ತಿಗಳನ್ನು ಮತ್ತು ಪರಿಸರ

⊙ ಕೆ. ಮುನಿಶಾಮಣ್ಣ

ವನ್ನು ಗುರುತಿಸಿರುವುದು ಕಂಡುಬರುತ್ತದೆ. ಪ್ರಾಯಶಃ ಹಿಂದಿನ ತಲೆಮಾರಿನ ವ್ಯಕ್ತಿಯೊಬ್ಬನಲ್ಲಿನ ಜೀವರಾಸಾಯನಿಕ ಕ್ರಿಯೆಗಳಿಗೂ ಮತ್ತು ಪುನರ್ಜನ್ಮ ಪಡೆದನೆನ್ನಲಾದ ವ್ಯಕ್ತಿಯ ಜೀವರಾಸಾಯನಿಕ ಕ್ರಿಯೆಗಳಿಗೂ ಯಾವುದೋ ಒಂದು ನಿರ್ದಿಷ್ಟ ಅವಧಿಯಲ್ಲಿ ಆಶ್ಚರ್ಯಕರ ಸಾಮ್ಯ ಏರ್ಪಾಟ್ಟಾಗ ಇಂತಹ 'ನೆನಪು'ಗಳು ಮರುಕಳಿಸುತ್ತವೆ ಎನ್ನಬಹುದು. ಆದ್ದರಿಂದ ಹಿಂದಿನ ವ್ಯಕ್ತಿಯೇ ಪುನರ್ಜನ್ಮವೆತ್ತಿದ್ದಾನೆ ಎಂದು ಹೇಳಲು ಬರುವುದಿಲ್ಲ. ಎಲ್ಲರಲ್ಲಿಯೂ ಹೀಗಾಗದೆ ಕೆಲವೇ ಕೆಲವು ವ್ಯಕ್ತಿಗಳಲ್ಲಿ 'ಪುನರ್ಜನ್ಮದ' 'ನೆನಪು'ಗಳು ಬರುವುದು ಈ ವಾದವನ್ನು ಸಮರ್ಥಿಸುತ್ತದೆ.

ಒಟ್ಟಿನಲ್ಲಿ ಇದೊಂದು ಸಂಕೀರ್ಣ ಪ್ರಕ್ರಿಯೆ. ಪುನರ್ಜನ್ಮ ಇದೆ ಎನ್ನುವುದೇ ನಿಜವಾದರೆ ಇದುವರೆಗೂ ದಾಖಲಾಗಿರುವ ಎಲ್ಲಾ ಪುನರ್ಜನ್ಮ ಪ್ರಕರಣಗಳಲ್ಲಿ ವ್ಯಕ್ತಿಗಳು ತಮ್ಮ ಹಿಂದಿನ ಜನ್ಮಗಳ ಬಗ್ಗೆ ಮಾತನಾಡಿದ್ದಾರೆಯೇ ಹೊರತು ತಮ್ಮ ಮುಂದಿನ ಜನ್ಮಗಳ ಬಗ್ಗೆ ಮಾತನಾಡಿರುವುದು ಎಲ್ಲಿಯೂ ಕಾಣುವುದಿಲ್ಲ ಎನ್ನುವುದನ್ನು ಗಮನಿಸಬೇಕು. ಡಿ.ಎನ್.ಎ. ಇನ್ನೂ ಮುಂದಿನ ಪೀಳಿಗೆಗೆ ರವಾನೆಯಾಗದಿರುವುದೇ ಇದಕ್ಕೆ ಕಾರಣ ಎನ್ನಬಹುದು. ಕೆಲವು ಜೀವರಾಸಾಯನಿಕ ಕಾರಣಗಳಿಂದಾಗಿ ಕೆಲ ವಂಶವಾಹಿಗಳು ಪ್ರಚೋದಿಸಲ್ಪಟ್ಟು ತತ್ಪರಿಣಾಮವಾಗಿ ಉಂಟಾಗುವ ಮಾನಸಿಕ ಪ್ರಕ್ರಿಯೆಗಳನ್ನೇ ಬಹುಶಃ ಇದುವರೆವಿಗೂ ಪುನರ್ಜನ್ಮ ಪ್ರಕರಣಗಳೆಂದು ದಾಖಲಿಸುತ್ತಿರಬಹುದು.

ಇದುವರೆಗೂ ನಡೆದಿರುವ ಸಂಶೋಧನೆಗಳ ಪ್ರಕಾರ ದೇಹವನ್ನು ಹೊರತುಪಡಿಸಿ ಪ್ರತ್ಯೇಕವಾದ ಅಸ್ತಿತ್ವವುಳ್ಳ ಆತ್ಮ ಅಥವಾ ಜೀವವೊಂದಿದೆ ಎಂದು ಸಾಬೀತುಪಡಿಸಲು ಯಾವ ನಂಬಲರ್ಹ ಆಧಾರಗಳೂ ಲಭ್ಯವಿಲ್ಲ. ಜೀವ ಮತ್ತು ದೇಹ ಇವೆರಡೂ ಒಂದಕ್ಕೊಂದು ಪೂರಕವಾಗಿವೆಯೇ ಹೊರತು ಒಂದಿಲ್ಲದೆ ಇನ್ನೊಂದಿರುವುದು ಬಹುಶಃ ಅಸಾಧ್ಯವೆನಿಸುತ್ತದೆ. ಒಂದು ವೇಳೆ ಆ ರೀತಿ ಇದ್ದರೆ ಅದರಿಂದೇಳುವ ಅನೇಕ ಪ್ರಶ್ನೆಗಳಿಗೆ ಉತ್ತರಿಸಲು ಇದುವರೆವಿಗೂ ಸಾಧ್ಯವಾಗಿಲ್ಲ. ●

## ಹಳೆಯ ಕಾಗದಪತ್ರಗಳು ಕಂದುಬಣ್ಣಕ್ಕೆ ತಿರುಗುವುದೇಕೆ?

ಮನೆಯ ಕಪಾಟಿನಲ್ಲಿ ತುಂಬ ಹಳೆಯ ಪುಸ್ತಕಗಳನ್ನು ತೆರೆದುನೋಡಿ, ಅವುಗಳ ಪುಟಗಳು ಮಾಸಲಾಗಿರುತ್ತವೆ. ಕೆಲವು ಮುಟ್ಟಿದಾಗ ಪುಡಿಯಾಗುತ್ತವೆ. ಹೀಗೇಕೆ ?

ಕಾಗದ ಸಸ್ಯಮೂಲವಾದದ್ದು. ನೀರಿನೊಂದಿಗೆ ಬೆರೆಸಿದ ಕಟ್ಟಿಗೆಯನ್ನು ರುಬ್ಬಿ ಮೆತ್ತನೆಯ ತಿರುಳನ್ನು ತಯಾರಿಸಲಾಗುವುದು. ಇದಕ್ಕೆ ಎರಡು ವಿಧಾನಗಳಿವೆ. ಅವುಗಳಲ್ಲಿ ಒಂದು ಯಾಂತ್ರಿಕ ವಿಧಾನವಾದರೆ ಮತ್ತೊಂದು ರಾಸಾಯನಿಕ ವಿಧಾನ. ಈ ಯಾಂತ್ರಿಕ ವಿಧಾನದಲ್ಲಿ ಯಾವುದೆ ರಾಸಾಯನಿಕವನ್ನು ಬಳಸದೆ ಇರುವುದರಿಂದ ಕಟ್ಟಿಗೆಯ ಸೂಕ್ಷ್ಮ ತಂತುಗಳನ್ನು ಬಂಧಿಸುವ ಲಿಗ್ನಿನ್ ಎಂಬ ಪದಾರ್ಥವು ನಾಶವಾಗುವುದಿಲ್ಲ. ಹೀಗಾಗಿ ಲಿಗ್ನಿನ್ ಕಾಗದದಲ್ಲಿ ಉಳಿದೇ ಇರುವುದು. ಕಾಗದದಲ್ಲಿರುವ ಈ ಲಿಗ್ನಿನ್ ಪ್ರಕಾಶ ಕಿರಣಗಳಿಗೆ ಸೂಕ್ಷ್ಮ ಪ್ರತಿಕ್ರಿಯೆ ತೋರಬಲ್ಲದು. ಕಾಲಕಳೆದಂತೆ ಕಾಗದದಲ್ಲಿನ ಲಿಗ್ನಿನ್ ಹೆಚ್ಚು ಹೆಚ್ಚು ಪ್ರತಿಕ್ರಿಯೆ ತೋರಿಸುತ್ತದಲ್ಲದೆ ಕಾಗದವೂ ಹೆಚ್ಚು ಹೆಚ್ಚು ಬಿರುಸಾಗಿ ಮುರಿಯುವಂತಾಗುತ್ತದೆ. ಬಣ್ಣವೂ ಹಳದಿ, ಕಂದು ಬಣ್ಣಕ್ಕೆ ತಿರುಗುತ್ತದೆ.

★ ಮಾಲಾ




# ವಿದ್ಯಾರ್ಥಿ ಅಂಕಣ

## ಸಸ್ಯಗಳಿಗೆ ಜೀವದಾನ ಮಾಡಿದ ಬಾಟಲಿಗಳು

• ಭಾರತದಲ್ಲಿ ಪ್ರತಿವರುಷ ಸುಮಾರು ೬೪೦೦೦೦ ಟನ್ನುಗಳಿಗೂ ಮೀರಿ ಚಹಾ ಬೆಳೆಯಲಾಗುತ್ತಿದೆ. ಕೋಟ್ಯಂತರ ರೂಪಾಯಿಗಳ ವಹಿವಾಟಿನ ಈ ಉದ್ಯಮಕ್ಕೆ ಒಂದು ಆಕಸ್ಮಿಕ ಸಂಶೋಧನೆ ಕಾರಣವಾಯಿತು.

೧೮೨೯ನೆಯ ಇಸವಿಯ ಒಂದು ದಿನ ಲಂಡನ್ನಿನ ವೈದ್ಯ ಹಾಗೂ ಸಸ್ಯ ವಿಜ್ಞಾನಿಯಾಗಿದ್ದ ಡಾಕ್ಟರ್ ನಥೇನಿಯಲ್ ಬಾಗ್ ಷಾ ವಾರ್ಡ್ ಒಂದು ವಿಚಿತ್ರವಾದ ಪ್ರಯೋಗವನ್ನು ನಡೆಸುತ್ತಿದ್ದರು. ಸ್ವಲ್ಪ ಪ್ರಮಾಣದ ಒದ್ದೆ ಮಣ್ಣಿನಲ್ಲಿ ಕೋಶಾವಸ್ಥೆಯಲ್ಲಿದ್ದ ಪತಂಗವನ್ನು ಹೂಳಿಟ್ಟು, ಆ ಮಣ್ಣನ್ನು ಒಂದು ಗಾಜಿನ ಬಾಟಲಿಯಲ್ಲಿಟ್ಟಿದ್ದರು. ಬಾಟಲಿಯನ್ನು ಮುಚ್ಚಳದಿಂದ ಮುಚ್ಚಲಾಗಿತ್ತು. ಆ ಹುಳುವಿನ ಪ್ರಗತಿಯನ್ನು ಪರಿಶೀಲಿಸುತ್ತಿದ್ದ ವಾರ್ಡ್ ಒಂದು ವಿಷಯವನ್ನು ಗಮನಿಸಿದರು. ಆ ಬಾಟಲಿಯ ಸುತ್ತಲ ವಾತಾವರಣದಲ್ಲಿ ದಿನದ ಕಾವು ಜಾಸ್ತಿಯಾದ ಹಾಗೆ ಆ ಮಣ್ಣಿನಲ್ಲಿದ್ದ ತೇವದ ಹನಿಗಳು ಬಾಟಲಿನ ಒಳಗಿನ ಗೋಡೆಗಳ ಮೇಲೆ ಹರಡಿದವು. ಆದರೆ ಬಾಟಲಿಯ ಮುಚ್ಚಳ ಮುಚ್ಚಿದ್ದರಿಂದ ಆ ಹನಿಗಳು ಆವಿಯಾಗದೆ ಮತ್ತೆ ಮಣ್ಣಿಗೇ ಮರಳಿದವು. ಅಷ್ಟೇ ಅಲ್ಲ, ವಾರ್ಡ್‌ರಿಗೆ ಇನ್ನೊಂದು ಸೋಜಿಗದ ಸಂಗತಿ ಕಂಡುಬಂತು. ಜರೀಗಿಡದ ಹಾಗೂ ಹುಲ್ಲಿನ ಮೊಳಕೆಗಳು ಮಣ್ಣಿನಲ್ಲಿ ಕಾಣಿಸಿಕೊಂಡಿದ್ದವು.

ನಂತರ ವಾರ್ಡ್ ಆ ಮಣ್ಣಿನಲ್ಲಿದ್ದ ಹುಳವನ್ನು ತೆಗೆದು ಆ ಮೊಳಕೆಗಳ ಬಗ್ಗೆ ಹೆಚ್ಚು ಗಮನ ಹರಿಸಿದರು. ಬೆಳಕು ತೂರುತ್ತಿದ್ದ ಸ್ವಚ್ಛವಾದ ಬಾಟಲಿಯಲ್ಲಿ ಸಸ್ಯಗಳನ್ನಿಟ್ಟಾಗ ಅವು ತಮ್ಮ ತಾಜಾತನ ಕಳೆದುಕೊಳ್ಳುವುದಿಲ್ಲ. ಏಕೆಂದರೆ ಮಣ್ಣಿನ ತೇವದಿಂದ ತುಂತುರು ಹನಿಯಾಗಿ ಮೇಲೇರಿದ ನೀರು ಮತ್ತೆ ಮಣ್ಣನ್ನೇ ಸೇರುವ ಕಾರ್ಯ ಪುನರಾವರ್ತಿತವಾಗುತ್ತದೆ.

ಈ ಆಕಸ್ಮಿಕ ಸಂಶೋಧನೆಯಿಂದ ಉತ್ತೇಜಿತರಾದ ವಾರ್ಡ್ ಜರೀಗಿಡ ಮತ್ತು ಹುಲ್ಲಿನ ಮೊಳಕೆಗಳಿದ್ದ ಮಣ್ಣನ್ನು ಮೇಲೆ ವಿವರಿಸಿದ ರೀತಿಯಲ್ಲಿ ಗಾಜಿನ ಬಾಟಲಿಗಳಲ್ಲಿಟ್ಟು ಆ ಗಾಜಿನ ಬಾಟಲಿಗಳನ್ನು ಆಸ್ಟ್ರೇಲಿಯಕ್ಕೆ ಹೋಗುತ್ತಿದ್ದ ಹಡಗಿನಲ್ಲಿ ಕಳುಹಿಸಿದರು. ಆಸ್ಟ್ರೇಲಿಯವನ್ನು ತಲುಪಿದ ಆ ಬಾಟಲಿಗಳಲ್ಲಿದ್ದ ಸಸ್ಯಗಳು ತಮ್ಮ ತಾಜಾತನವನ್ನು ಸ್ವಲ್ಪವೂ ಕಳೆದುಕೊಳ್ಳಲಿಲ್ಲ. ಈ ಘಟನೆ ನಡೆದದ್ದು ೧೮೩೩ರಲ್ಲಿ.

. ೧೮೪೮ರಲ್ಲಿ ಬ್ರಿಟಿಶರ ಆಳ್ವಿಕೆಯಲ್ಲಿದ್ದ ಭಾರತಕ್ಕೆ ಚೀನಾದಿಂದ ಚಹಾ ಬಂದದ್ದು ಇಂತಹ ವಾರ್ಡ್ ಬಾಟಲಿಗಳಿಂದಲೇ. ಬ್ರೆಜಿಲ್‌ನಿಂದ ಸಿಲೋನ್ (ಇಂದಿನ ಶ್ರೀಲಂಕಾ) ಮತ್ತು ಮಲೇಶಿಯಾಗಳಿಂದಲೆ ರಬ್ಬರ್ ಸಸ್ಯಗಳು ಹೀಗೆಯೇ ರವಾನಿಸಲ್ಪಟ್ಟವು. ಕಾಫಿಯನ್ನು ಕೂಡ ಆಫ್ರಿಕದಿಂದ ಬ್ರೆಜಿಲ್‌ಗೆ ಈ ರೀತಿಯಾಗಿಯೆ ಕಳುಹಿಸಲಾಯಿತು. ವಾರ್ಡ್‌ರವರನ್ನು ಗೌರವಿಸುವುದಕ್ಕಾಗಿ ದಕ್ಷಿಣ ಆಫ್ರಿಕಾದಲ್ಲಿರುವ ಒಂದು ಪ್ರಭೇದದ ಪಾಚಿಗೆ ಅವರ ಹೆಸರನ್ನೇ ಇಡಲಾಯಿತು.

☆ ಕೈವಾರ ಗೋಪಿನಾಥ

# ಜ್ಞಾನನಿಧಿ

## ಭಾರತೀಯ ಬಾಹ್ಯಾಕಾಶ ಕ್ಷೇತ್ರದಲ್ಲಿ ಮೈಲುಗಲ್ಲುಗಳು

**೧೯೬೩:** ತ್ರಿವೇಂದ್ರಂನಲ್ಲಿ ಥುಂಬಾ ರಾಕೆಟ್ ಉಡಾವಣಾ ಕೇಂದ್ರದ ಸ್ಥಾಪನೆ. ನವೆಂಬರ್ ೨೧ ರಂದು ಅಮೆರಿಕ ಕೊಡಮಾಡಿದ ಎರಡು ಹಂತಗಳ ನಿಕೆ ಅಪಾಚಿ ರಾಕೆಟ್ ಉಡಾವಣೆ.

೧೯೬೯: ಭಾರತೀಯ ಉಪಗ್ರಹ ಸಂಶೋಧನ ಸಂಸ್ಥೆಯಾದ ಇಸ್ರೋದ ಸ್ಥಾಪನೆ.

೧೯೭೫: ಏಪ್ರಿಲ್ ೧೯ ರಂದು ರಶಿಯಾದಿಂದ ಪ್ರಥಮ ಭಾರತದ ಉಪಗ್ರಹ 'ಆರ್ಯಭಟ'ದ ಉಡಾವಣೆ.

೧೯೭೯: ಜೂನ್ ೭ ರಂದು ಆಗಿನ ಸೋವಿಯತ್ ಯೂನಿಯನ್‌ನಿಂದ ಭಾರತದ ಎರಡನೆಯ ಉಪಗ್ರಹ "ಭಾಸ್ಕರ-೧" ರ ಉಡಾವಣೆ.

೧೯೮೦: ಜೂನ್ ೧೮ ರಂದು ಭಾರತೀಯ ಉಪಗ್ರಹ ಉಡಾವಣೆ ವಾಹನ SLV-೩ ವು ಶ್ರೀ ಹರಿಕೋಟಾದಿಂದ ೩೫ ಕಿ.ಗ್ರಾಂ. ತೂಕದ ರೋಹಿಣಿ ಉಪಗ್ರಹವನ್ನು ಉಡಾಯಿಸಿ ಭೂಕಕ್ಷೆಗೆ ಸ್ಥಿರಪಡಿಸಿತು.

೧೯೮೧: ಮೇ ೩೧ ರಂದು ಶ್ರೀ ಹರಿಕೋಟಾದಿಂದ ಉಡಾಯಿಸಿದ SLV-೩ ಎರಡನೆಯ ರೋಹಿಣಿಯನ್ನು ಕೊಂಡೊಯಿತು.

ಜೂನ್ ೧೯ ರಂದು ಫ್ರೆಂಚ್ ಗಯಾನಾದಿಂದ ಏರಿಯನ್ ರಾಕೆಟ್ ಭಾರತದ ಪ್ರಥಮ ಪ್ರಾಯೋಗಿಕ ಭೂಸ್ಥಿರ ಸಂಪರ್ಕ ಉಪಗ್ರಹವನ್ನು ಭೂಕಕ್ಷೆಗೆ ಸೇರಿಸಿತು.

೧೯೮೨: ಏಪ್ರಿಲ್ ೧೦ ರಂದು ಅಮೆರಿಕದಿಂದ ಪಡೆದ ಪ್ರಥಮ ಬಹು ಉದ್ದೇಶಿತ ಇನ್ಸಾಟ್-IA ಉಪಗ್ರಹವನ್ನು ಅಮೆರಿಕದ ಡೆಲ್ಟಾ ರಾಕೆಟ್‌ನಿಂದ ಉಡಾಯಿಸಲಾಯಿತು.

೧೯೮೩: ಏಪ್ರಿಲ್ ೧೭ ರಂದು ಶ್ರೀ ಹರಿಕೋಟಾದಿಂದ SLV-೩ ವಾಹನದಿಂದ ೩೫ ಕಿ.ಗ್ರಾಂ ರೋಹಿಣಿ ಉಪಗ್ರಹವನ್ನು ಉಡಾಯಿಸಲಾಯಿತು. ಆಗಸ್ಟ್ ೩೦ ರಂದು ಅಮೆರಿಕದ 'ಚಾಲೆಂಜರ್' ಭಾರತದ ಎರಡನೆಯ ಬಹು ಉದ್ದೇಶಿತ ಉಪಗ್ರಹ ಇನ್ಸಾಟ್ IB ಯನ್ನು ಅಂತರಿಕ್ಷಕ್ಕೆ ಒಯ್ದಿತು.

೧೯೮೪: ಏಪ್ರಿಲ್ ೩ ರಂದು ಭಾರತ - ಸೋವಿಯತ್ ಸಹಭಾಗಿತ್ವದೊಂದಿಗೆ ಅಂತರಿಕ್ಷದಲ್ಲಿ ಮಾನವನ ಯಾತ್ರೆಯ ಆರಂಭ. ಸ್ಕ್ವಾಡ್ರನ್ ಲೀಡರ್ ರಾಕೇಶ್ ಶರ್ಮ ಅಂತರಿಕ್ಷ ಪ್ರವೇಶಿಸಿದ ಪ್ರಥಮ ಭಾರತೀಯರಾದರು.

೧೯೮೮: ಮಾರ್ಚ್ ೧೭ ರಂದು ಆಗಿನ ಸೋವಿಯತ್ ಯೂನಿಯನ್ನಿನ ಬೈಕೋನೂರ್‌ನಿಂದ ಉಡಾಯಿಸಲ್ಪಟ್ಟ 'ವಾಸ್ಟೋಕ್' ರಾಕೆಟ್ ಭಾರತದ ಸಂಪೂರ್ಣ ಸ್ವದೇಶಿ ದೂರಸಂವೇದಿ ಉಪಗ್ರಹ IRS-IA ಅನ್ನು ಸಾಗಿಸಿತು.

ಜೂನ್ ೨೨ ರಂದು ಏರಿಯನ್ ವಾಹನವು ಭಾರತದ ಮೂರನೆಯ ಬಹು ಉದ್ದೇಶಿತ ಉಪಗ್ರಹ ಇನ್ಸಾಟ್-IC ಅನ್ನು ಕಕ್ಷೆಯಲ್ಲಿ ನೆಲೆಗೊಳಿಸಿತು.

೧೯೯೦: ಜೂನ್ ೧೨ ರಂದು ಫ್ಲಾರಿಡಾದಿಂದ ಹಾರಿಸಲ್ಪಟ್ಟ ಅಮೆರಿಕದ ಡೆಲ್ಟಾ ವಾಹನವು ಭಾರತದ ಮೊದಲನೆಯ ಪೀಳಿಗೆಯ ಉಪಗ್ರಹ ಶ್ರೇಣಿಯಲ್ಲಿ ಕೊನೆಯದಾದ ಇನ್ಸಾಟ್ - ID ಯನ್ನು ಭೂ ಕಕ್ಷೆಯಲ್ಲಿ ಸ್ಥಿರಪಡಿಸಿತು.

೧೯೯೧: ಆಗಸ್ಟ್ ೨೯ ರಂದು ಆಗಿನ ಸೋವಿಯತ ಒಕ್ಕೂಟದ ವಾಸ್ಟೋಕ್ ವಾಹನದ ಮೂಲಕ ಭಾರತದ ಎರಡನೆಯ ದೂರಸಂವೇದಿ ಉಪಗ್ರಹ IRS-IB ಉಡಾವಣೆಗೊಂಡಿತು.

೧೯೯೨: ಮೇ ೨೦ ರಂದು ಶ್ರೀಹರಿಕೋಟದಿಂದ ASLV ವಾಹನದ ಯಶಸ್ವೀ ಉಡಾವಣೆ.

೧೯೯೩: ಜುಲೈ ೨೩ ರಂದು ಫ್ರಾನ್ಸ್‌ನ ಕೌರುವಿನಿಂದ ಏರಿಯನ್ ವಾಹನದ ಮೂಲಕ ಭಾರತದ ಎರಡನೆಯ ಬಹು ಉದ್ದೇಶಿತ ಉಪಗ್ರಹ ಇನ್ಸಾಟ್ ೨-B ಉಡಾವಣೆ.

೧೯೯೪: ಮೇ ೪ ರಂದು ASLV-D೪ ವಾಹನವನ್ನು ಯಶಸ್ವಿಯಾಗಿ ಶ್ರೀಹರಿಕೋಟದಿಂದ ಹಾರಿಸಲಾಯಿತು. ಅದು ಸ್ರಾಸ್ C-೨ ಉಪಗ್ರಹವನ್ನು ಕಡಿಮೆ ಎತ್ತರದ ಕಕ್ಷೆಯಲ್ಲಿ ನೆಲೆಗೊಳಿಸಿತು.

ಅದೇ ವರ್ಷ ಅಕ್ಟೋಬರ್ ೧೫ ರಂದು ಶ್ರೀ ಹರಿಕೋಟದಿಂದ PSLV-D೨ ವಾಹನವು ಯಶಸ್ವಿಯಾಗಿ ಉಡಾಯಿಸಲ್ಪಟ್ಟು, ಅದು ೮೭೦ ಕಿ.ಗ್ರಾಂ. ತೂಕದ ದೂರ ಸಂವೇದಿ ಉಪಗ್ರಹ IRS-P೨ ನ್ನು ಭೂಮಿಯ ಧ್ರುವೀಯ ಸೌರಸ್ಥಿರ ಕಕ್ಷೆಗೆ ತಂದು ಬಿಟ್ಟಿತು.

೧೯೯೫: ಫ್ರಾನ್ಸ್‌ನ ಕೌರುವಿನಿಂದ ಏರಿಯನ್ ರಾಕೆಟ್ ಮೂಲಕ ಇನ್ಸಾಟ್-೨C ಹಾಗೂ ರಶಿಯದ ಮೊಲ್ನಿಯಂ ರಾಕೆಟ್ ಮೂಲಕ ಐಆರ್‌ಎಸ್-೧C ಉಪಗ್ರಹಗಳ ಉಡಾವಣೆ.

೧೯೯೬: ಮಾರ್ಚ್ ೨೧ ರಂದು ಪಿ.ಎಸ್.ಎಲ್.ವಿ-ಡಿ೩ ವಾಹನದ ಮೂಲಕ ಐ.ಆರ್.ಎಸ್ ಪಿ೩ ಉಪಗ್ರಹದ ಯಶಸ್ವಿ ಉಡಾವಣೆ.

☆ ಚನ್ನವೀರಪ್ಪ ರೇವಡಿ

## ಜ್ಞಾನನಿಧಿ

# ಕೊಹಿನೂರಿನ ಕುತೂಹಲದ ಕಥೆ

ಆಂಗ್ಲರು ಭಾರತವನ್ನು ಆಳಿದಷ್ಟೂ ಕಾಲ ಇಲ್ಲಿದ್ದ ಅತ್ಯಮೂಲ್ಯ ವಸ್ತುಗಳನ್ನು ಒಯ್ದು ತಮ್ಮ ಭಾಂಡಾರವನ್ನು ಶ್ರೀಮಂತಗೊಳಿಸಿದರು. ಇಲ್ಲಿಂದ ಸಾಗಿಸಿದ ಅತ್ಯಮೂಲ್ಯ ವಸ್ತುಗಳಲ್ಲಿ ಅಗ್ರಗಣ್ಯವಾದುದು ಕೊಹಿನೂರ್ ವಜ್ರ.

ಕೊಹಿನೂರ್ ವಜ್ರಕ್ಕೆ ೨೦೦೦ವರ್ಷಗಳ ದೀರ್ಘ ಇತಿಹಾಸವಿದೆ. ಇದು ಕ್ರಿ.ಪೂ. ೫೨ರಲ್ಲಿ ಉಜ್ಜಯನಿ ಹಾಗೂ ಮಾಳವದ ಅರಸ ವಿಕ್ರಮಾದಿತ್ಯನ ಬಳಿ ಇತ್ತೆನ್ನಲಾಗಿದೆ. ಮಾಳವದ ರಾಜ- ಭಾಂಡಾರದಲ್ಲಿ ಹಲವು ಶತಮಾನಗಳವರೆಗೆ ಕೊಹಿನೂರ್ ಮೆರೆಯಿತು. ಕ್ರಿ.ಶ. ೧೩೦೪ರಲ್ಲಿ ಅಲ್ಲಾವುದ್ದೀನ್ ಖಿಲ್ಜಿ ಮಾಳವದ ಮೇಲೆ ದಂಡೆತ್ತಿ ಹೋಗಿ ಕೊಹಿನೂರ್ಅನ್ನು ತನ್ನ ವಶಪಡಿಸಿಕೊಂಡ. ಖಿಲ್ಜಿ ಅದನ್ನು ತನ್ನೊಂದಿಗೆ ಆಗ್ರಾಕ್ಕೆ ಒಯ್ದ. ಪಾಣಿಪತ್ ಕದನದಲ್ಲಿ ಇಬ್ರಾಹಿಂ ಲೋಧಿ ಸೋತಾಗ ವಜ್ರ ಬಾಬರನ ವಶವಾಯಿತು. ಬಾಬರನ ಮಗ ಹುಮಾಯೂನ್ ಶೇರ್‌ಶಾಹನಿಂದ ಪರಾಜಿತಗೊಂಡು ಇರಾನಿಗೆ ಪಲಾಯನಮಾಡಿದ. ಹೋಗುವಾಗ ವಜ್ರವನ್ನು ಮರೆಯದೆ ತೆಗೆದುಕೊಂಡು ಹೋದ. ಅಲ್ಲಿ ಹದಿನಾಲ್ಕು ವರ್ಷ ತನಗೆ ಆಶ್ರಯ ನೀಡಿದ ಇರಾನಿನ ಷಾನಿಗೆ ಅದನ್ನು ಕಾಣಿಕೆಯಾಗಿ ನೀಡಿದ. ಅಲ್ಲಿಂದ ಅದು ಮೀರ್ ಜುಮ್ಲಾ ಎಂಬ ವ್ಯಾಪಾರಿಯ ಕೈ ಸೇರಿತು. ಮೀರ್ ಜುಮ್ಲಾ ದೆಹಲಿಯ ಚಕ್ರವರ್ತಿಯಾದ ಶಾಹಜಹಾನನಿಗೆ ಅದನ್ನು ಕಾಣಿಕೆಯಾಗಿ ನೀಡಿದ. ಈ ರೀತಿ ಕೊಹಿನೂರ್ ಮತ್ತೆ ಮರಳಿ ಭಾರತಕ್ಕೆ ಬಂತು.

ನಾದಿರ್‌ಷಾಹನಿಂದ ಸೋಲಿಸಲ್ಪಟ್ಟ ದಿಲ್ಲಿಯ ರಾಜ ಮಹಮ್ಮದ್ ಶಾಹ ಕೊಹಿನೂರ್‌ಅನ್ನು ತನ್ನ ಪಗಡಿಯಲ್ಲಿ ಬಚ್ಚಿಟ್ಟ. ಅದನ್ನು ತಿಳಿದ ನಾದಿರ್ ಶಾಹ ಮಿತ್ರ ರಾಜರು ಸಂಧಿಸಿದಾಗ ಪರಸ್ಪರ ಪಗಡಿಗಳ ವಿನಿಮಯ ಮಾಡುವ ಪದ್ಧತಿಯ ನಾಟಕ ಹೂಡಿ ಮಹಮ್ಮದ ಶಾಹನ ಪಗಡಿಯನ್ನು ತಲೆಗೇರಿಸಿ ವಜ್ರದೊಂದಿಗೆ ಖೊರಾಸಾಗೆ ಹೋದ. ದುರ್ದೆಶೆ ಅವನನ್ನು ಬೆಂಬತ್ತಿತ್ತು.

ನಾದಿರ್‌ಶಾಹ ಕೊಲ್ಲಲ್ಪಟ್ಟು ಅವನ ಮಗ ಚ್ಯುತನಾದ. ವಜ್ರದ ಪತ್ತೆಗಾಗಿ ಅವನಿಗೆ ಬಗೆ ಬಗೆ ಚಿತ್ರಹಿಂಸೆ ನೀಡಿದರು. ಅವನ ಮೈಮೇಲೆ ಕುದಿಯುವ ರಾಳ ಸುರಿದರು. ಕಣ್ಣುಗಳನ್ನು ಕಿತ್ತಿದರು. ಇಷ್ಟು ಹಿಂಸೆ ನೀಡಿದರೂ ಆತ ಬಾಯಿ ಬಿಡಲಿಲ್ಲ. ಕೊಹಿನೂರ್ ವಜ್ರ ಅವನ ಮೊಮ್ಮಗನ ಪಾಲಿಗೆ ಬಂತು.

ನಾದಿರ್‌ಶಾಹನ ವಂಶವನ್ನು ನಾಶಮಾಡಿ ಅಧಿಕಾರಕ್ಕೆ ದೂರಾನಿ ಬಂದ. ಅವನಲ್ಲೂ ಅದು ಹೆಚ್ಚು ದಿನ ಉಳಿಯಲಿಲ್ಲ. ಶಾಹ್ರುಜಾ ದುರಾನಿ ಆ ವಜ್ರದೊಡನೆ ಪಲಾಯನ ಮಾಡಿ ಪಂಜಾಬಿಗೆ ಕ್ರಿ.ಶ. ೧೮೧೦ರಲ್ಲಿ ಬಂದು ರಣಜಿತ್ ಸಿಂಗನಿಗೆ ಶರಣಾಗಿ, ಕೊಹಿನೂರನ್ನು ಅವನಿಗೆ ಕಾಣಿಕೆಯಾಗಿ ನೀಡಿದ. ಮುಂದೆ ಪಂಜಾಬ್ ಬ್ರಿಟಿಷರಿಗೆ ಸೇರಿದಾಗ ಲಾರ್ಡ್ ಡಾಲ್‌ಹೌಸಿ ವಜ್ರವನ್ನು ವಿಕ್ಟೋರಿಯಾ ಮಹಾರಾಣಿಗೆ ಬಳುವಳಿಯಾಗಿ ಲಂಡನ್ನಿಗೆ ರವಾನಿಸಿದ.

ವಿಕ್ಟೋರಿಯಾ ರಾಣಿ ಕೊಹಿನೂರ್ ವಜ್ರವನ್ನು ತನ್ನ ಮಗ ಏಳನೇ ಎಡ್ವರ್ಡನಿಗೆ ಕೊಡದೆ ಸೊಸೆ ಅಲೆಗ್ಸಾಂಡ್ರಾಗೆ ನೀಡಿದಳು. ರಾಣಿ ಅಲೆಗ್ಸಾಂಡರ್ ತನ್ನ ಮಗ ಐದನೇ ಜಾರ್ಜನಿಗೆ ಅದನ್ನು ನೀಡದೆ ಎಲಿಜಬೆತ್ ರಾಣಿಗೆ ನೀಡಿದಳು.

ಈಗ ಕೊಹಿನೂರ್ ವಜ್ರ ಬ್ರಿಟಿಷ್ ರಾಜಕಿರೀಟದಲ್ಲಿ ಕಂಗೊಳಿಸುತ್ತಿದೆ. ಕೊಹಿನೂರ್ ಕೊನೆಗೂ ಭಾರತಕ್ಕೆ ದಕ್ಕಲಿಲ್ಲ. ಅದನ್ನು ಭಾರತಕ್ಕೆ ಮರಳಿ ತರುವ ಕೂಗುಗಳು ಆಗಾಗ ಎದ್ದರೂ ಹಾಗೆಯೇ ಸುಮ್ಮನಾಗಿಬಿಡುತ್ತವೆ.

☆ ಗಾಯತ್ರೀನಂದನ

# ಜ್ಞಾನ ನಿಧಿ

## 'ನೆಲ್ಸನ್ನನ ಕಣ್ಣು' ಹಿನ್ನೆಲೆ ಏನು?

ಆಂಗ್ಲಭಾಷೆಯ 'To turn Nelson's eye' (ನೆಲ್ಸನ್ನನ ಕಣ್ಣು ಮಾಡು) ಎಂಬುದು ಒಂದು ಅರ್ಥಪೂರ್ಣವಾದ ನುಡಿಗಟ್ಟು. ಉದಾಸೀನ ಮಾಡು, ತಾತ್ಸಾರ ಮಾಡು, ಕಡೆಗಣಿಸು, ಅನಾದರ ಮಾಡು, ಉಲ್ಲಂಘಿಸು, ಉಪೇಕ್ಷಿಸು, ಅಲಕ್ಷ್ಯಮಾಡು, ಇವೇ ಮೊದಲಾದ ಅರ್ಥಕೊಡುವ ಈ ನುಡಿಗಟ್ಟಿನ ಹಿನ್ನೆಲೆ ತುಂಬಾ ರೋಚಕ.

ಪ್ರಪಂಚದ ಚಿರಂತನ ಕೀರ್ತಿಗೆ ಪಾತ್ರರಾದ ನೌಕಾಧಿಪತಿಗಳಲ್ಲಿ ಬ್ರಿಟಿಷ್ ನೌಕಾಧಿಪತಿ ಹೊರೇಷಿಯೋ ನೆಲ್ಸನ್ನನ (೧೭೫೮-೧೮೦೫) ಹೆಸರು ಸಾಕಷ್ಟು ಪ್ರಸಿದ್ಧ. ಇಂಗ್ಲೀಷ್ ನೌಕಾಪಡೆಯ ದಳಪತಿಯಾಗಿದ್ದ ಆತನಲ್ಲಿ ಒಂದು ವಿಶಿಷ್ಟ ಸ್ವಭಾವವಿತ್ತು. ಅದರ ಕಾರಣದಿಂದಲೇ ಆತ ಚರಿತ್ರಾರ್ಹ ವ್ಯಕ್ತಿ ಎನಿಸಿದ್ದು ಮಾತ್ರವಲ್ಲದೆ ಆ ವಿಶಿಷ್ಟ ಸ್ವಭಾವವೂ 'ನೆಲ್ಸನ್ನನ ಕಣ್ಣು ಮಾಡು' ಎಂಬ ಪಡೆನುಡಿಯಾಗಿ ನಿಘಂಟುಗಳಲ್ಲಿ ಸ್ಥಾನ ಪಡೆಯಿತು.

ಸಾಮಾನ್ಯವಾಗಿ ಸೇನಾಪಡೆಗಳಲ್ಲಿ ಕೆಲಸ ಮಾಡುವವರಿಗೆ ವಿಧೇಯತೆ ಒಂದು ಕಡ್ಡಾಯ ಕರ್ತವ್ಯವಾಗಿರುತ್ತದೆ. ಮೇಲಧಿಕಾರಿಗಳ ಸೂಚನೆಗಳನ್ನು ಮರುಮಾತಾಡದೇ ಪಾಲಿಸುವುದು ಅಲ್ಲಿ ಎಲ್ಲರಿಗೂ ಕಡ್ಡಾಯ. ಎದುರು ಮಾತನಾಡುವುದು, ಕೆಲಸ ತಪ್ಪಿಸುವುದು, ಅವಿಧೇಯತೆ ಮೊದಲಾದವು ಅಲ್ಲಿ ಶಿಕ್ಷಾರ್ಹ ವರ್ತನೆ ಎನಿಸುತ್ತದೆ.

ಆದರೆ ನೆಲ್ಸನ್ನನಿಗೆ ಉನ್ನತಾಧಿಕಾರಿಗಳ ಆದೇಶ, ಸೂಚನೆ, ಎಚ್ಚರಿಕೆಗಳನ್ನು ಕಡೆಗಣಿಸಿ ಸ್ವತಂತ್ರವಾಗಿ ವರ್ತಿಸಿ ಮಹತ್ವದ ಸಾಧನೆಗಳನ್ನು ಮಾಡಿತೋರಿಸುವ ಸ್ವಭಾವವಿತ್ತು. ಅದೃಷ್ಟವಶಾತ್ ಇಂಥ ಪ್ರಯತ್ನಗಳಲ್ಲಿ ವಿಸ್ಮಯಕಾರಿ ಎನಿಸುವಂತಹ ಯಶಸ್ಸು ಪ್ರಾಪ್ತವಾಗಿದ್ದರಿಂದ ಆತ ಕೋರ್ಟ್ ಮಾರ್ಷಲ್‌ಗಳಂತಹ ಕ್ರಮಗಳಿಂದ ಪಾರಾದದ್ದು ಮಾತ್ರವಲ್ಲದೆ ಅಜರಾಮರ ಎನಿಸುವಂತಹ ಕೀರ್ತಿಗೂ ಪಾತ್ರನಾದ.

ನೆಲ್ಸನ್ ತನ್ನ ೧೨ನೇ ವಯಸ್ಸಿನಲ್ಲಿಯೇ ಬ್ರಿಟಿಷ್ ನೌಕಾದಳ ಸೇರಿದ. ಮಹತ್ವಾಕಾಂಕ್ಷಿಯಾಗಿದ್ದ ಅವನು ತನ್ನ ಜಾಣ್ಮೆ ಪರಿಕ್ರಮ ಹಾಗೂ ಮುತ್ಸದ್ದಿತನಗಳಿಂದ ಮೆಟ್ಟಿಲು ಮೆಟ್ಟಿಲಾಗಿ ಉನ್ನತ ಸ್ಥಾನಗಳಿಗೆ ಏರುತ್ತಾ ೨೪ನೇ ವಯಸ್ಸಿನಲ್ಲಿಯೇ 'ಅಗಮೆಮ್ನನ್' ಎಂಬ ಬ್ರಿಟಿಷ್ ಯುದ್ಧನೌಕೆಯ ಕಪ್ತಾನನಾದ.

ಒಮ್ಮೆ ಭೂಮಧ್ಯ ಸಮುದ್ರದಲ್ಲಿರುವ ಕೋರ್ಸಿಕಾದ್ವೀಪದ ಕಾಲ್ವಿ ಎಂಬಲ್ಲಿ ಫ್ರೆಂಚ್ ನೌಕಾ ಪಡೆಯೊಂದಿಗೆ ನಡೆದ ಘನಘೋರ ಕದನದಲ್ಲಿ ಅವನ ಬಲಗಣ್ಣಿಗೆ ಪೆಟ್ಟು ಬಿದ್ದು ಅದು ಪೂರ್ತಿಯಾಗಿ ಕುರುಡಾಯಿತು.

# ಜ್ಞಾನನಿಧಿ

ಆದರೆ ಇದರಿಂದ ಧೃತಿಗೆಡದ ನೆಲ್ಸನ್ ಕುರುಡುಗಣ್ಣಿನ ಮೇಲೊಂದು ಕಪ್ಪು ಪಟ್ಟಿಯನ್ನು ಬಿಗಿದುಕೊಂಡು ಸೈನಿಕ ಸೇವೆಯಲ್ಲಿ ಮುಂದುವರೆದ.

ಕ್ರಿ.ಶ. ೧೭೯೭ರಲ್ಲಿ ನಡೆದ ಫ್ರೆಂಚ್ ಹಾಗೂ ಸ್ಪಾನಿಷ್ ನೌಕಾಪಡೆಗಳ ವಿರುದ್ಧ ನಡೆದ ಹೋರಾಟಗಳಲ್ಲಿ ಆತ ತನ್ನ ತಾಯಿನಾಡಿಗೆ ವಿಜಯ ಸಾಧಿಸಿ ಕೊಟ್ಟ ರೀತಿ ಪ್ರಪಂಚವನ್ನು ಚಕಿತಗೊಳಿಸಿತು. ಇಂತಹ ಸಾಧನೆಗಳನ್ನು ಮಾಡುತ್ತಾ ಹೋದ ನೆಲ್ಸನ್ ಕ್ರಮೇಣ ಇಂಗ್ಲೆಂಡಿನ ನೌಕಾಪಡೆಯ ಅಡ್ಮಿರಲ್ ಪದವಿಗೇರಿದ.

ಕೆಲಸಮಯಾನಂತರ ಸಾಂತಾ ಕ್ರುಜ್ ಎಂಬಲ್ಲಿ ನಡೆದ ನೌಕಾಯುದ್ಧದಲ್ಲಿ ಅವನ ಬಲಗೈ ತುಂಡಾಯಿತು. ಇದರಿಂದಲೂ ಆತನ ಧೈರ್ಯೋತ್ಸಾಹಗಳು ಕುಗ್ಗಲಿಲ್ಲ. ಕ್ರಿ. ಶ. ೧೭೯೮ರಲ್ಲಿ ಆತ ಆಫ್ರಿಕದ ನೈಲ್ ನದಿಯ ಮೇಲೆ ಫ್ರೆಂಚ್ ನೌಕಾಪಡೆಯನ್ನು ಎದುರಿಸಿ ಶತ್ರುಗಳಿಗೆ ತೀವ್ರವಾದ ಪೆಟ್ಟು ಕೊಟ್ಟ.

ಕ್ರಿ. ಶ. ೧೮೦೧ರಲ್ಲಿ ಅವನು ಡೆನ್ಮಾರ್ಕಿನ ರಾಜಧಾನಿ ಕೋಪೆನ್ ಹೇಗನ್ ಬಳಿ ಡೇನರ ಭಾರಿ ನೌಕಾಪಡೆಯನ್ನು ಎದುರಿಸಬೇಕಾಯಿತು. ಈ ಸಂದರ್ಭದಲ್ಲಿ ಡೇನರ ಬಲ ಅಧಿಕವಾಗಿದೆಯೆಂದೂ ಹೋರಾಟವು ವಿನಾಶಕಾರಿಯಾಗಬಹುದೆಂದೂ ಭಾವಿಸಿದ ಬ್ರಿಟಿಷ್ ಉನ್ನತಾಧಿಕಾರಿಗಳು ಯುದ್ಧರಂಗದಿಂದ ಹಿಂತೆಗೆಯಬೇಕೆಂದು ನೌಕಾಧಿಪತಿ ನೆಲ್ಸನ್ನನಿಗೆ ಸೂಚನೆಯಿತ್ತರು.

ಆದರೆ ವಿಚಿತ್ರ ಸ್ವಭಾವದ ನೆಲ್ಸನ್ ಬೇರೆ ಏನನ್ನೋ ಯೋಚಿಸಿದ. ತನ್ನ ಕುರುಡಾಗಿದ್ದ ಬಲಗಣ್ಣಿಗೆ ತನ್ನ ದೂರದರ್ಶಕವನ್ನು ಹೊಂದಿಸಿಟ್ಟು ಸುತ್ತಲೂ ನೋಡುತ್ತಾ ಶತ್ರುಗಳಾಗಲಿ ಅವರ ನೌಕೆಗಳಾಗಲಿ ಕಾಣುತ್ತಿಲ್ಲ ಎಂದು ಸಾರಿ, ಮೇಲಿನವರ ಆದೇಶವನ್ನು ಬದಿಗಿರಿಸಿ ಯುದ್ಧವನ್ನು ಮುಂದುವರೆಸಿ ತನ್ನ ದೇಶಕ್ಕೆ ಅನೂಹ್ಯವಾದ ವಿಜಯ ಸಾಧಿಸಿಕೊಟ್ಟ. ಆಗಿನಿಂದ ಮೇಲಧಿಕಾರಿಗಳ ಆದೇಶವನ್ನು ಕಡೆಗಣಿಸಿ ಕಾರ್ಯಪ್ರವೃತ್ತರಾಗುವ ಸ್ವಭಾವವನ್ನು 'ನೆಲ್ಸನ್ನನ ಕಣ್ಣು ಮಾಡು' ಅಥವಾ 'ನೆಲ್ಸನ್ನನ ಕಣ್ಣು ತಿರುಗಿಸು' ಎಂದು ಕರೆಯುವ ಪರಿಪಾಠ ಆರಂಭವಾಯಿತು.

ಮುಂದೆ ಕ್ರಿ.ಶ. ೧೮೦೫ರಲ್ಲಿ ನೆಲ್ಸನ್ನನ ಬದುಕಿನಲ್ಲಿ ಇನ್ನೊಂದು ಮಹತ್ವದ ಘಟನೆ ಸಂಭವಿಸಿತು. ಆಗ ಆತ ಟ್ರಫಾಲ್ಗರ್ ಕಡಲ್ಗಾಳಗದಲ್ಲಿ ಅಜೇಯ ಎನಿಸಿದ್ದ ಫ್ರೆಂಚರ ನೌಕಾಪಡೆಯನ್ನು ಅಪ್ರತಿಮ ಮುತ್ಸದ್ದಿತನದಿಂದ ಸೋಲಿಸಿದಾಗ ಹೊರೇಷಿಯೊ ನೆಲ್ಸನ್ ಒಬ್ಬ ರಾಷ್ಟ್ರೀಯ ವೀರ ಎನಿಸಿಬಿಟ್ಟ. ಆತ ತನ್ನ ದೇಶಕ್ಕೆ ತಂದುಕೊಟ್ಟ ಸ್ಮರಣೀಯ ವಿಜಯಕ್ಕಾಗಿ ಬ್ರಿಟನ್ ಆತನಿಗೆ ಚಿರಋಣಿಯಾಯಿತು. ಲಂಡನ್ನಿನ ಅತ್ಯಂತ ಪ್ರಮುಖವಾದ ಟ್ರಫಾಲ್ಗರ್ ವೃತ್ತದಲ್ಲಿ ಆಳೆತ್ತರದ ಮೂರ್ತಿಯೊಂದನ್ನು ನಿಲ್ಲಿಸಿ ಅವನ ಕೀರ್ತಿ ಚಿರಕಾಲ ಉಳಿಯುವಂತೆ ಮಾಡಿತು. ಅದೇ ವರ್ಷ ಆತ ಮರಣ ಹೊಂದಿದ.

☆ **ಕೆ. ವೆಂಕಣ್ಣಾಚಾರ್**

# ಜ್ಞಾನನಿಧಿ

## ಆದಿವಾಸಿಗಳ ಅದ್ಭುತ ಜ್ಞಾನ!

ಆಫ್ರಿಕದ ದಕ್ಷಿಣ ಪ್ರದೇಶದಲ್ಲಿ ನೈಜರ್ ನದಿ ದೊಡ್ಡದಾಗಿ ಹರಿಯುತ್ತದೆ. ಆ ಪ್ರಾಂತದಲ್ಲಿ ಇದ್ದಾರೆ 'ಡೋಗೋನ್' ಜಾತಿ-ನೀಗ್ರೊಗಳು. ಆ ಕಾಡು ಜನರಿಗೆ ಅಂತರಿಕ್ಷ ರಹಸ್ಯಗಳು ಬಹಳಷ್ಟು ಗೊತ್ತು. 'ಹೊಂಬೇರಿ' ಗುಡ್ಡಗಾಡು ಪ್ರದೇಶದಲ್ಲಿ ಡೋಗೋನ್ ಜಾತಿಯ ನೀಗ್ರೋಗಳು ಇರುವ ಪ್ರದೇಶಕ್ಕೆ ಹತ್ತಿರದಲ್ಲಿರುವ ಜನ ವಸತಿಗಳೇ ಟಿಂಬಕ್ಟು, ಜೆಗಾಂಡ್ ಡೋಗಾನ್ ಇತ್ಯಾದಿ. ಈ ಜನಾಂಗದವರು ನೋಡುವುದಕ್ಕೆ ಉಳಿದ ಪಶ್ಚಿಮ ಆಫ್ರಿಕನ್ ಪ್ರಜೆಗಳ ಹಾಗೇ ಇರುತ್ತಾರೆ. ಆದರೆ ಒಂದು ವಿಷಯದಲ್ಲಿ ಮಾತ್ರ ಇವರಿಗೆ ತಮ್ಮದೇ ಆದ ಪ್ರತ್ಯೇಕತೆ ಇದೆ.

ಅದೇನೆಂದರೆ ಇವರಿಗೆ ಅಂತರಿಕ್ಷಕ್ಕೆ ಸಂಬಂಧಿಸಿದ ಅನೇಕ ರಹಸ್ಯಗಳು ತಿಳಿದಿರುವುದು. ಈ ರಹಸ್ಯಗಳು ಇಷ್ಟಕ್ಕೂ ಏನಿರಬಹುದು ? ಆಕಾಶದಲ್ಲಿ ಅತಿ ಸಣ್ಣ ನಕ್ಷತ್ರ ಒಂದಿದೆ. ಅದು ಮಾಮೂಲಾಗಿ ಕಣ್ಣಿಗೆ ಕಾಣಲಾರದು. ಟೆಲೆಸ್ಕೋಪ್‌ದಿಂದ ನೋಡಿದರೂ ಅದರ ದರ್ಶನವಾಗುವದು ದುರ್ಲಭ.

ಅಂತಹ ನಕ್ಷತ್ರವೆನ್ನುವದು ಒಂದಿದೆ ಎಂಬ ಅನುಮಾನ ಕೂಡ ಖಗೋಳ ವಿಜ್ಞಾನಿಗಳಿಗೆ ೧೮೪೪ ರವರೆಗೆ ಬಂದಿರಲಿಲ್ಲ. ಇತ್ತೀಚೆಗೆ-ಅಂದರೆ ಕೇವಲ ೨೫ ವರ್ಷಗಳ ಹಿಂದೆ-ಮಾತ್ರ ಅತಿ ಕಷ್ಟಪಟ್ಟು ನಕ್ಷತ್ರದ ಚಿತ್ರಗಳನ್ನು ತೆಗೆಯಲು ಸಾಧ್ಯವಾಗಿದೆ.

ಆದರೆ ಅಂತಹ ನಕ್ಷತ್ರದ ಬಗ್ಗೆ ಡೋಗೋನ್ ನೀಗ್ರೋಗಳಿಗೆ ಎಷ್ಟೋ ಕಾಲದ ಹಿಂದೆಯೇ ತಿಳಿದಿತ್ತು ಎಂಬುದು ಆಚ್ಚರಿಯಲ್ಲವೇ ? ಅವರು ಹೇಳುವ ಪ್ರಕಾರ ಪೊ-ಟೊಲೊ (ಅಂದರೆ ಅತಿ ಸಣ್ಣ ಬೀಜ)ದಲ್ಲಿರುವ ನಕ್ಷತ್ರ ಬಹಳೇ ಸಣ್ಣದು; ಅತ್ಯಂತ ಪ್ರಕಾಶಮಾನವಾದದ್ದು. ಅತಿ ಭಾರವುಳ್ಳದ್ದು ಕೂಡ.

ಲಕ್ಷಾಂತರ ವರ್ಷಗಳಷ್ಟು ಹಿಂದಿನಿಂದಲೂ ಈ ನಕ್ಷತ್ರ ಉರಿದುರಿದು ಕೊನೆಗೆ ಈಗ ನಾಶವಾಗುವ ಸ್ಥಿತಿಗೆ ಬಂದಿದೆ. ಇಂತಹ ನಕ್ಷತ್ರಗಳಿಗೆ 'ಬಿಳಿಯ ಕುಬ್ಜ' ('ವೈಟ್ ಡ್ವಾರ್ಫ್') ಎನ್ನುತ್ತಾರೆ. ಇವುಗಳೆಲ್ಲಾ ಸವೆದು ಹೋದಂತಾಗಿ ಅತಿ ಸಣ್ಣವಾಗಿ ಬಿಟ್ಟಿರುತ್ತವೆ. ಅವುಗಳಲ್ಲಿನ ಸಾಂದ್ರತೆ ಬಹಳ ಹೆಚ್ಚಾಗಿರುತ್ತವೆ, ದಟ್ಟವಾಗಿರುತ್ತದೆ. ಇವುಗಳು ಸಾಕಷ್ಟು ಭಾರವನ್ನು ಹೊಂದಿರುತ್ತವೆ, ಮಾತ್ರವಲ್ಲ, ಅತ್ಯಂತ ಪ್ರಕಾಶಮಾನವಾಗಿರುತ್ತವೆ.

ಸಿರಿಯಸ್ ಬಿ. ಎನ್ನುವ ಒಂದು 'ಬಿಳಿಯ ಕುಬ್ಜ' ನಕ್ಷತ್ರ ಡೋಗೋನ್ ನೀಗ್ರೋಗಳು ಹೇಳುವ ಪೊಟೊಲೊ ನಕ್ಷತ್ರವನ್ನು ಹೋಲುವಂತಿದೆ.

• ಕೆ. ಬಿ. ಬೊಮ್ಮನಾಳ

# ದೈಹಿಕ ರಕ್ಷಣೆಯಲ್ಲಿ ತಾಮ್ರದ ಪಾತ್ರ

ಬಸವನ ಹುಳಗಳ ಜಾತಿಯ ಹುಳಗಳ ದೇಹದಲ್ಲಿ ತಾಮ್ರ ಸೇರಿರುತ್ತದೆ. ಇವುಗಳ ಪೈಕಿ ಆಪ್ಟಪಾದಿ, ಕೆಂಪು ದ್ರವವನ್ನು ಸುರಿಸುವ ಕಟಲ್ ಮೀನು, ಕಪ್ಪೆಚಿಪ್ಪು ಮೀನಿನ ಚಿಪ್ಪುಗಳು ಮುಖ್ಯವಾದುವು. ಈ ಪ್ರಾಣಿಗಳಲ್ಲಿರುವ ತಾಮ್ರವು 'ಹೀಮೋಸಿಯನಿನ್' ಎಂಬ ಉಸಿರಾಟಕ್ಕೆ ಬೇಕಾದ ವರ್ಣದ್ರವ್ಯವನ್ನು ಉತ್ಪತ್ತಿಮಾಡುತ್ತದೆ. ಇದು ನೀಲಿ ಬಣ್ಣವುಳ್ಳದ್ದಾಗಿರುತ್ತದೆ. ಆದ್ದರಿಂದಲೇ ಬಸವನ ಹುಳಗಳಲ್ಲಿ ನೀಲಿ ರಕ್ತವಿದೆ ಎಂಬ ಅಭಿಪ್ರಾಯವಿದೆ.

ಮನುಷ್ಯರಲ್ಲೂ ಮತ್ತು ವಿಕಾಸ ಹೊಂದಿದ ಪ್ರಾಣಿಗಳಲ್ಲೂ ತಾಮ್ರವು ಪಿತ್ತಜನಕಾಂಗ ಭಾಗದಲ್ಲಿ ಸೇರಿರುತ್ತದೆ. ಇದು ಜೈವಿಕವರ್ಧನ ಕ್ರಿಯೆಗೆ ಬೇಕಾದ ಕೆಲವು ರಾಸಾಯನಿಕ ಕಿಣ್ವಗಳಲ್ಲೂ ಇದೆ. ಆಹಾರದಲ್ಲಾಗಲಿ, ಮನುಷ್ಯ, ಪ್ರಾಣಿಗಳಲ್ಲಾಗಲಿ, ತಾಮ್ರದ ಕೊರತೆ ಇದ್ದರೆ ಅದು ಮಿದುಳಿನ ಮೇಲೆ ದುಷ್ಪರಿಣಾಮವನ್ನುಂಟು ಮಾಡಬಹುದು.

ತಾಮ್ರದ ನಾಣ್ಯಗಳನ್ನು ಮುಳುಗಿಸಿದ ನೀರನ್ನು ನೇಪಾಳ ದೇಶದಲ್ಲಿ ರೋಗಿಗಳಿಗೆ ಕುಡಿಯುವುದಕ್ಕೆ ಕೊಡುತ್ತಾರೆ. ಹೊಟ್ಟೆಯ ತೊಂದರೆಗೂ ಮಿದುಳಿನಲ್ಲಿ ಆಗುವ ತೊಂದರೆಗಳಿಗೂ ಇದು ಒಳ್ಳೆಯ ಔಷಧ. ಇದಕ್ಕೆ ಕ್ರಿಮಿನಾಶಕ ಶಕ್ತಿಯುಂಟು. ಪ್ಲಿನಿಯು ತಿಳಿಸಿರುವ ಪ್ರಕಾರ ತಾಮ್ರವು ಕುರುವಿಗೆ ಒಳ್ಳೆಯ ಔಷಧ. ಬೆಳಗ್ಗೆ ಎದ್ದು ಕಣ್ಣುಗಳನ್ನು ತಾಮ್ರದ ಪಾತ್ರೆಯೊಳಗಿನ ನೀರಿನಿಂದ ತೊಳೆದರೆ ನಮ್ಮ ದೃಷ್ಟಿಯು ಉತ್ತಮಗೊಳ್ಳುತ್ತದೆ.

ಜೀವಕೋಶಗಳಲ್ಲೂ ತಾಮ್ರಕ್ಕೆ ವಿಶೇಷ ಪಾತ್ರವಿದೆ. ಪತ್ರ ಹರಿತ್ತಿನ ತಯಾರಿಕೆಗೆ ತಾಮ್ರ ಅವಶ್ಯಕ. ಮಾನವನಲ್ಲಿ ತಾಮ್ರವು ಪಿತ್ತಜನಕಾಂಗದಲ್ಲಿ ಶೇಖರವಾಗಿರುತ್ತದೆ. 'ಆಸ್ಕಾರ್ಬಿಕ್ ಆಮ್ಲದ ಆಕ್ಸಿಡೇಸ್' ಎಂಬ ರಾಸಾಯನಿಕ ಕಿಣ್ವದಲ್ಲೂ ಆಕ್ಸಿಡೇಸ್ ರಾಸಾಯನಿಕ ಕಿಣ್ವದಲ್ಲೂ 'ಟೈರೋಸಿನೇಸ್' ಎಂಬ ರಾಸಾಯನಿಕ ಕಿಣ್ವದಲ್ಲೂ ತಾಮ್ರದ ಅಂಶವಿದೆ. ಮೊದಲನೆಯದು ಉತ್ಕರ್ಷಣ ಕ್ರಿಯೆಗೂ, ಎರಡನೆಯದು ಸಿ-ಜೀವಸತ್ವದ ವರ್ತನೆಗೂ, ಮೂರನೆಯದು ಮೆಲನಿನ್ ಎಂಬ ವರ್ಣದ್ರವ್ಯದ ಉತ್ಪತ್ತಿಗೂ ವೇಗವರ್ಧಕ. ಡಿಫ್ತೀರಿಯದ ಬ್ಯಾಕ್ಟೀರಿಯಗಳು ವಿಷವನ್ನು ಉತ್ಪತ್ತಿ ಮಾಡುವುದು ತಾಮ್ರದ ಸಹಾಯದಿಂದಲೇ. ನಮ್ಮ ದೇಹದಲ್ಲಿ ತಾಮ್ರವು ಹೆಚ್ಚಾಗಿ ಶೇಖರವಾಗುವ ಅಂಗಗಳೆಂದರೆ ಮಿದುಳು, ಹೃದಯ ಮತ್ತು ಮೂತ್ರಜನಕಾಂಗಗಳು.

☆ ಕೆ.ಎಸ್. ಲಕ್ಷ್ಮಣರಾವ್

## ಜ್ಞಾನನಿಧಿ

# ಆಫ್ರಿಕನ್ ಭಕ್ತರು

ವಿದೇಶಗಳಲ್ಲಿ ವಾಸಿಸುತ್ತಿರುವ ಭಾರತೀಯರು ತಮ್ಮ ದೇವದೇವತೆಗಳನ್ನು ಆರಾಧಿಸುವುದರಲ್ಲೇನೂ ವಿಶೇಷವಿಲ್ಲ. ಆದರೆ ಆಫ್ರಿಕದ ನಾಗರಿಕರೂ ರಾಮ,'ಕೃಷ್ಣ'ಶಿವನನ್ನು ಆರಾಧಿಸುತ್ತಿದ್ದಾರೆಂದರೆ ಆಶ್ಚರ್ಯವಾದೀತು. ಘಾನಾದ ರಾಜಧಾನಿ ಆಕ್ರಾದಿಂದ ೧೦ ಕಿಲೋಮೀಟರು ದೂರದಲ್ಲಿ ಸುಂದರವಾದ ಪರಿಸರದಲ್ಲಿ ದೇವಸ್ಥಾನವೊಂದನ್ನು ನಿರ್ಮಿಸಲಾಗಿದ್ದು ಆಫ್ರಿಕದ ೨೦೦೦ ನಾಗರಿಕರು ನಿಯಮಿತವಾಗಿ ದೇವದರ್ಶನಕ್ಕಾಗಿ ಹೋಗುತ್ತಾರೆ.

ಇಪ್ಪತ್ತು ವರ್ಷಗಳ ಹಿಂದೆ ಭಾರತದಿಂದ ಘಾನಾಕ್ಕೆ ಹೋಗಿದ್ದ ಸ್ವಾಮಿ ಕೃಷ್ಣಾನಂದ ದೀಕ್ಷಿತ ಎನ್ನುವವರು ಅಲ್ಲಿ ಈ ದೇವಸ್ಥಾನವನ್ನು ಸ್ಥಾಪಿಸಿದರು. ಅವರಿಂದ ದೀಕ್ಷೆ ಪಡೆದ ಘಾನಾದ ಹಲವಾರು ಪ್ರತಿಷ್ಠಿತ ವ್ಯಕ್ತಿಗಳು ಆ ದೇವಸ್ಥಾನದ ಹೊಣೆಯನ್ನು ವಹಿಸಿಕೊಂಡಿದ್ದಾರೆ.. ಸದ್ಯ ಘಾನಾನಂದ ಎನ್ನುವವರು ದೇವಸ್ಥಾನದ ಪ್ರಮುಖರಾಗಿದ್ದಾರೆ. ಕಾಷಾಯ ವಸ್ತ್ರ ಧರಿಸಿಕೊಂಡು, ಕೊರಳಲ್ಲಿ ರುದ್ರಾಕ್ಷಿ ಮಾಲೆ ಹಾಕಿಕೊಂಡು, ಭಗವದ್ಗೀತೆ- ರಾಮಾಯಣ ಪಠಣ ಮಾಡುತ್ತಲೋ ಭಾರತೀಯ ಆಧ್ಯಾತ್ಮಿಕ ವಿಷಯಗಳ ಪ್ರವಚನ ನೀಡುತ್ತಲೋ ಘಾನಾನಂದರು ಕಾಲಕಳೆಯುತ್ತಾರೆ. ಮನಃಶಾಂತಿಗಾಗಿ ಪೂಜೆ, ಧ್ಯಾನ ಇವು ಅವಶ್ಯ ಎಂಬುದು ಅಲ್ಲಿನ ಅನೇಕ ಭಾವುಕರ ಮತವಾಗಿದೆ. ಘಾನಾದಲ್ಲಿನ ಅನೇಕ ಭಾರತೀಯರೂ ಆ ದೇವಸ್ಥಾನಕ್ಕೆ ಬರುತ್ತಿರುತ್ತಾರೆ.

ದೇವಸ್ಥಾನದ ವಾತಾವರಣ ಶಾಂತಿಮಯವೂ ಭಕ್ತಿಮಯವೂ ಆಗಿದೆ. ಅಲ್ಲಿ ಕೃಷ್ಣ, ಶಿವ ಮತ್ತು ಶ್ರೀರಾಮನ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದೆ. ಯೋಗಾಭ್ಯಾಸ ಮಾಡಲು ಅಲ್ಲಿ ಪ್ರತ್ಯೇಕ ವ್ಯವಸ್ಥೆಯಿದೆ. ವಿವಿಧ ಹಬ್ಬಗಳಲ್ಲಿ ಮತ್ತು ಉತ್ಸವದ ನಿಮಿತ್ತ ದೇವಸ್ಥಾನದಲ್ಲಿ ಸಮಾರಂಭಗಳನ್ನೇರ್ಪಡಿಸುತ್ತಾರೆ. ಆ ದೇವಸ್ಥಾನದಲ್ಲಿ ಮಾನಸಿಕ ಶಾಂತಿ ದೊರೆಯುತ್ತದೆ ಮತ್ತು ಭಕ್ತಾದಿಗಳ ಇಷ್ಟಾರ್ಥಗಳು ಸಿದ್ಧಿಸುತ್ತವೆ ಎಂಬುದು ಘಾನಾದ ಅನೇಕ ಜನರ ಅಭಿಪ್ರಾಯವಾಗಿದೆ.

೧೯೭೫ರಲ್ಲಿ ಸ್ವಾಮಿ ಕೃಷ್ಣಾನಂದರಿಂದ ದೀಕ್ಷೆ ಪಡೆದ ಘಾನಾನಂದರು ದೇವರು ಮತ್ತು ಧಾರ್ಮಿಕ ಕಾರ್ಯಗಳಲ್ಲಿ ತಮ್ಮ ಶೇಷಾಯುಷ್ಯವನ್ನು ವ್ಯಯಿಸಲು ನಿರ್ಧರಿಸಿದ್ದಾರೆ. ಅವರ ಮುಂದಾಳತ್ವದಲ್ಲಿ ಘಾನಾದ ಅನೇಕ ನಾಗರಿಕರು ಹಿಂದೂಧರ್ಮದ ದೀಕ್ಷೆಯನ್ನು ಪಡೆದು ಆ ಧರ್ಮಕ್ಕಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟಿದ್ದಾರೆ.

ಘಾನಾದಲ್ಲಿ ಪೂರ್ಣ ಧಾರ್ಮಿಕ ಸ್ವಾತಂತ್ರ್ಯವಿದೆ. ಆ ದೇಶದ ಪ್ರತಿಯೊಂದು ಊರಿನಲ್ಲೂ ಚರ್ಚ್ ಹಾಗೂ ಮಸೀದೆಗಳಿವೆ. ಒಂದೂವರೆ ಕೋಟಿ ಜನಸಂಖ್ಯೆಯಿರುವ ಘಾನಾದಲ್ಲಿ ೨೫ ಪ್ರಾದೇಶಿಕ ಭಾಷೆಗಳಿವೆ. ದೇವಸ್ಥಾನ, ಚರ್ಚ್, ಮಸೀದೆಗಳಿಗೆ ಹೋಗುವ ಜನರು ತಮ್ಮ ತಮ್ಮ ಭಾಷೆಯಲ್ಲೇ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. ಆ ದೇಶದಲ್ಲಿ ಬಹಳ ಬಡತನವಿದ್ದರೂ ಅಲ್ಲಿನ ಜನ ಧಾರ್ಮಿಕ ಸ್ವಭಾವದವರಾಗಿದ್ದಾರೆ.

☆ ಗೋಪಿನಾಥ ಸವಣೂರ

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

**ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ.**

*ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾಗಿ ಅರ್ಥಗಳನ್ನು ವಿವರಿಸಿದೆ.*

೧) ಶೃಂಗ
- (ಅ) ನಳಿಗೆ
- (ಆ) ಸಿಂಹ
- (ಇ) ತುಂಬಿ ಹುಳ
- (ಈ) ಕೋಡು

೨) ಇಳುವರಿ
- (ಅ) ಜಾರುವ ದಾರಿ
- (ಆ) ಕಡಿಮೆಯಾದದ್ದು
- (ಇ) ಅರ್ಧಕ್ಕೆ ನಿಂತದ್ದು
- (ಈ) ತುಂಬಿ ಬಂದದ್ದು

೩) ಘೂರ್ಣಿತ
- (ಅ) ತಿರುಗಿಸಿದ
- (ಆ) ಕುಟ್ಟಿದ
- (ಇ) ದಯೆಯುಳ್ಳ
- (ಈ) ನಿರ್ದಯ

೪) ಕುಶಂಕೆ
- (ಅ) ತಿವಿಗತ್ತಿ
- (ಆ) ಚಿಕ್ಕ ಶಂಖ
- (ಇ) ಕೆಟ್ಟ ಸಂಶಯ
- (ಈ) ದರ್ಭೆಯ ಹುಲ್ಲು

೫) ಚೋಷಣ
- (ಅ) ಹೀರುವುದು
- (ಆ) ಕದಿಯುವಿಕೆ
- (ಇ) ಅಲಂಕಾರ
- (ಈ) ಹೊಟ್ಟೆ ಹೊರೆಯುವದು

೬) ಧಾಮ
- (ಅ) ಹಗ್ಗ
- (ಆ) ವಸತಿ
- (ಇ) ಪ್ರವಾಹ
- (ಈ) ಓಟ

೭) ಕೌಮುದಿ
- (ಅ) ದುಃಖ
- (ಆ) ಬಹಳ ಮುದುಕಿ
- (ಇ) ವಿಷ್ಣುವಿನ ಆಯುಧ
- (ಈ) ಬೆಳದಿಂಗಳು

೮) ಆವರ್ತ
- (ಅ) ಮುತ್ತಿಗೆ
- (ಆ) ಬೆಳವಣಿಗೆ
- (ಇ) ಸುತ್ತು
- (ಈ) ಗಂಡ

೯) ಮಾನಧನ
- (ಅ) ಸ್ವಾಭಿಮಾನಿ
- (ಆ) ಮರ್ಯಾದೆ ತೆಗೆದದ್ದಕ್ಕೆ ಪರಿಹಾರ
- (ಇ) ಹಣದ ಲೆಕ್ಕ
- (ಈ) ಡಂಬಾಚಾರ

೧೦) ಭ್ರುಕುಟಿ
- (ಅ) ಹಣೆಗಣ್ಣು
- (ಆ) ಅಡವಿಯಲ್ಲಿಯ ಮನೆ
- (ಇ) ಹುಬ್ಬು ಗಂಟಿಕ್ಕಿದ್ದು
- (ಈ) ನಗುಮೊಗ

೧೧) ಪಣ್ಯ
- (ಅ) ಒಳ್ಳೇ ಕೆಲಸ
- (ಆ) ಮಾರಾಟದ ವಸ್ತು
- (ಇ) ಹಣೆಗೆ
- (ಈ) ನೀರು

೧೨) ಕರುಬು
- (ಅ) ಕುರಿ ಕಾಯುವಿಕೆ
- (ಆ) ಕಬ್ಬಿನ ಹೊಲ
- (ಇ) ಕೋಪ
- (ಈ) ಮತ್ಸರ

# 'ಶಬ್ದಭಾಂಡಾರ'ದ ಸರಿಯಾದ ಅರ್ಥಗಳು

**೧. ಶೃಂಗ**

(ಈ) ಕೋಡು, ಕೊಂಬು ತುದಿ, ಪರ್ವತ ಶಿಖರ, ಎಲ್ಲಕ್ಕೂ ಎತ್ತರದ ಸ್ಥಳ. ಉದಾ-ಶೃಂಗಸಭೆ ಅಂದರೆ ತುತ್ತ ತುದಿಯ ಅರ್ಥಾತ್ ಅತಿ ಶ್ರೇಷ್ಠ ನಾಯಕರ ಸಭೆ (ಸಂ)

**೨. ಇಳುವರಿ**

(ಅ) ಕಡಿಮೆಯಾದದ್ದು, ಇಳಿದದ್ದು, ಇಳಿದ ಅಂಶ, ಉದಾ-ಆದಾಯದಲ್ಲಿ ಇಳುವರಿ ಹತ್ತು ಲಕ್ಷ (ಕನ್ನಡ, ಇಳಿ+ಪರಿ)

**೩. ಘೂರ್ಣಿತ**

(ಅ) ತಿರುಗಿಸಿದ, ಉರುಳಿಸಿದ, ನಡುಗಿಸಲ್ಪಟ್ಟ ಉದಾ-ಮದಘೂರ್ಣಿತ ನಯನ-ಅಂದರೆ ಸೊಕ್ಕಿನಿಂದ ಕಣ್ಣು ತಿರುಗಿಸಿದ್ದು (ಸಂ. ಘೂರ್ಣ=ತಿರುಗು)

**೪. ಕುಶಂಕೆ**

(ಇ) ಕೆಟ್ಟ ಸಂಶಯ, ಆಧಾರವಿಲ್ಲದ ಸಂದೇಹ ಉದಾ-ಸಾವಿರ ಕುಶಂಕೆಗಳನ್ನೆತ್ತಿದನು. (ಸಂ. ಕು = ಕೆಟ್ಟ ಶಂಕೆ=ಸಂಶಯ)

**೫. ಚೋಷಣ**

(ಅ) ಹೀರುವುದು, ಚೀಪುವುದು, ಉದಾ-ಲಿಂಬೆಹಣ್ಣಿನ ಚೋಷಣ. (ಸಂ. ಚೂಷ್=ಚೀಪು ಎಂಬುವದರಿಂದ)

**೬. ಧಾಮ**

(ಅ) ವಸತಿ, ಇರುವ ಸ್ಥಳ, ಆಶ್ರಯ. ಉದಾ-ಸ್ವರ್ಗಧಾಮ, ಪ್ರಕಾಶ, ಶಕ್ತಿ ಎಂದೂ ಅರ್ಥವಿದೆ. (ಸಂ. ಧಾಮನ್)

**೭. ಕೌಮುದಿ**

(ಈ) ಬೆಳದಿಂಗಳು, ಚಂದ್ರನ ಬೆಳಕು, ಉದಾ-ಕೌಮುದೀ ರಾತ್ರಿಯಲ್ಲಿ. (ಸಂ.)

**೮. ಆವರ್ತ**

(ಇ) ಸುತ್ತು, ಸುತ್ತುಹಾಕುವಿಕೆ, ತಿರುತಿರುಗಿ ಇದ್ದ ಸ್ಥಾನಕ್ಕೆ ಬರುವುದು ಉದಾ-ತಾಳದ ಆವರ್ತ. ಸುಳಿ ಎಂದೂ ಅರ್ಥವಿದೆ, (ಆ=ಸುತ್ತಲೂ, ವರ್ತ್, ತೊಡಗು ಎಂಬುದರಿಂದ)

**೯. ಮಾನಧನ**

(ಅ) ಸ್ವಾಭಿಮಾನಿ, ಅಭಿಮಾನಿ, ಅಹಂಭಾವವುಳ್ಳವ, ಮಾನವನ್ನೇ ಧನವೆಂದು ಬಗೆಯುವವ, ಉದಾ-ದುರ್ಯೋಧನನು ಮಾನಧನ (ಸಂ.)

**೧೦. ಭ್ರುಕುಟಿ**

(ಇ) ಹುಬ್ಬು ಗಂಟಿಕ್ಕುವುದು ಉದಾ-ಅವಳ ಭ್ರುಕುಟಿಗೆ ಹೆದರಿದೆ. (ಸಂ. ಭ್ರೂ=ಹುಬ್ಬು ಕುಟಿ=ಬಗ್ಗಿದ)

**೧೧. ಪಣ್ಯ**

(ಆ) ಮಾರಾಟಕ್ಕಿಟ್ಟ ವಸ್ತು. ಉದಾ-ವಿದ್ಯೆ ಇಂದು ಪಣ್ಯವಸ್ತುವಾಗಿ ಬಿಟ್ಟಿದೆ.(ಸಂ.)

**೧೨. ಕರುಬು**

(ಇ) ಮತ್ಸರ, ಹೊಟ್ಟೆಕಿಚ್ಚು, ಕಪಟ (ಕನ್ನಡ)

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಯನ್ನು ತಿಳಿಯಿರಿ.

| | | | |
|---|---|---|---|
| ೬-೮ | ಸರಿಯಿದ್ದರೆ | ..... | ಸಾಧಾರಣ |
| ೯-೧೦ | ,, | ..... | ಉತ್ತಮ |
| ೧೧-೧೨ | ,, | .... | ಅತ್ಯುತ್ತಮ |

ಹರಟೆ

# ಬ್ಯಾವಿ ಸಿಕ್ಕೈತ್ರೂ!

⊙ ಎಚ್. ಆನಂದರಾಮಶಾಸ್ತ್ರೀ

'ಬಾವಿ ಕಳೆದಿದೆ' ಎಂಬ ಸುದ್ದಿಯನ್ನು ಈಚೆಗೆ ದಿನಪತ್ರಿಕೆಗಳಲ್ಲಿ ನಾವೆಲ್ಲ ಓದಿದ್ದೇವೆ ತಲೆಬರಹ ಓದಿ ಸೋಜಿಗಪಟ್ಟಿದ್ದೇವೆ. ಆದರೆ ಹಾಗೆ ಕಳೆದ ಬಾವಿ ಮತ್ತೆ ಸಿಕ್ಕ ಸುದ್ದಿಯನ್ನು ನಾವೆಲ್ಲೂ ಓದಿಲ್ಲ, ಓದಲು ಸಾಧ್ಯವೂ ಇಲ್ಲ. ಇಷ್ಟಕ್ಕೂ ಇದ್ದರಲ್ಲವೆ ಬಾವಿ ಸಿಕ್ಕುವುದು ? ದಿನಗಳೆದಂತೆ ಕಡತಗಳಲ್ಲಿ ಬಾವಿಗಳು ಹೆಚ್ಚಿದಂತೆಲ್ಲ ಸದರಿ ಬಾವಿಗಳೆಲ್ಲವೂ ಕಣ್ಮರೆಯಾಗುತ್ತಹೋಗುವುದು ಮಾತ್ರ ಖಾತ್ರಿ.

ಸಿಗಲಾರದ ಇಂಥ ಬಾವಿ ಸಿಕ್ಕ ಬಗ್ಗೆ ನಾನಿಲ್ಲಿ ಬರೆಯುಹೊರಟಿಲ್ಲ. ನಾನು ಪವಾಡ ಪುರುಷನಲ್ಲ. ನಾನು ಕೇವಲ ಓರ್ವ ಬಡ್ಡೀ ಮಗ. ಬ್ಯಾಂಕೊಂದರ ಬಡ್ಡಿ-ಮಗ.

ನನ್ನ ಬ್ಯಾಂಕಿನಲ್ಲೂ ಕೆಲವು ಬಾವಿಗಳು ಕಳೆದಿದ್ದವು. 'ಬ್ಯಾಂಕಿನಲ್ಲಿ ಬಾವಿಗಳು'ಎಂದರೆ 'ಬ್ಯಾಂಕಿನ ಸಾಲಗಾರರ ಬಾವಿಗಳು' ಎಂದರ್ಥ. ಹಾಗೆ ಕಳೆದಿದ್ದ ಬಾವಿಗಳು ನನ್ನಂಥವರ ಪ್ರಾಮಾಣಿಕ ಪ್ರಯತ್ನ ಹಾಗೂ ಚಾತುರ್ಯಗಳಿಂದಾಗಿ ಸಿಕ್ಕೇಬಿಟ್ಟವು. ಆದರೆ ಬ್ಯಾಂಕ್ ಬಾವಿಗಳ ಬಗ್ಗೆ ನಾನಿಲ್ಲಿ ಬರೆಯುತ್ತಿಲ್ಲ.

ನನಗೆ ಸಿಕ್ಕಿದ್ದು ನನ್ನ ಸ್ವಂತ ಕೆಲಸವೊಂದಕ್ಕೆ ಬೇಕಾಗಿದ್ದ ಬಾವಿ. ಅದು ನಡೆದದ್ದು ಹೀಗೆ.

ಒಂದು ದಿನ ಒಬ್ಬ ರಾವ್ ಶಾಸ್ತ್ರಿ-ಅವನ ಹೆಸರೇ ಹೀಗೆ-ನನ್ನ ಬಳಿ ಬಂದ. ನನ್ನ ಕೈನೋಡಿ, ಮುಖ ನೋಡಿ ಭವಿಷ್ಯ ಹೇಳಿದ. ನನ್ನ ಕಿಸೆ ನೋಡುತ್ತ ಒಂದು ಸಾಲಿಗ್ರಾಮ(ದಂಥದನ್ನು) ತನ್ನ ಚೀಲದಿಂದ ತೆಗೆದು ಕೊಟ್ಟ. ಅದನ್ನು ಇಟ್ಟುಕೊಂಡರೆ ನನಗೆ ಧನ, ಕನಕ, ವಸ್ತು, ವಾಹನಾದಿ ಭೋಗಗಳು ಲಭಿಸುವುವೆಂದೂ ನಿರಾಕರಿಸಿದರೆ ನನಗೆ ಭಾರೀ ಕೆಡಕಾಗುವುದೆಂದೂ ಕೆಲವೇ ತಿಂಗಳುಗಳಲ್ಲಿ ನಾನು ಸತ್ತೇಹೋಗಬಹುದೆಂದೂ ಕರಾರುವಾಕ್ಕೆಂಬಂತೆ ನುಡಿದು ಮ್ಲಾನವದನನಾದ. ಇಷ್ಟು ಬೇಗ-ನನಗಿನ್ನೂ ನಲವತ್ತೇ ವರ್ಷ- ಸಾಯುವ ಮನಸ್ಸಿಲ್ಲದೆ ನಾನು ನೂರಅಿರವತ್ತು ಕೊಟ್ಟು ಆ ಸಾಲಿಗ್ರಾಮವನ್ನು ಅವ

*"ಹಂದಿಗಳ ಮಧ್ಯೆಯೇ ತೂರಿಕೊಂಡು ಬಾವಿಯನ್ನರಸುತ್ತ ಸಾಗಿದೆ. ಹಲವು ಮನೆಗಳ ಹಿತ್ತಲಲ್ಲಿ ವಿವಿಧ ಚಟುವಟಿಕೆಗಳಲ್ಲಿ ತೊಡಗಿದ್ದವರೆಲ್ಲ ನನ್ನನ್ನು ಕಂಡು ಒಂದು ಕ್ಷಣ ಕೆಲಸಬಿಟ್ಟು ದಿಟ್ಟಿಸಿ ಮತ್ತೆ ಕಾಯಕಕ್ಕೆ ಇಳಿಯಹತ್ತಿದರು."*



ನಿಂದ ಕೊಂಡುಕೊಂಡೆ. ತಪ್ಪಾಯಿತು; ಕೊಂಡುಕೊಂಡೆ ಎನ್ನಬಾರದಂತೆ, ಅವನಿಂದ ಆಶೀರ್ವಾದ ಪೂರ್ವಕವಾಗಿ ಸ್ವೀಕರಿಸಿದೆ. ಆಫೀಸಿಂದ ಮನೆಗೆ ತರುವಾಗ ದಾರಿಯಲ್ಲಿ ಅದು ಕೈಜಾರಿ ಬಿದ್ದು ಎರಡು ಹೋಳಾಯಿತು.

ನನ್ನ ಹೆಂಡತಿ ತುಂಬ ಹೆದರಿದಳು; ಹೆದರಿಸಿದಳು. ಸಾಲಿಗ್ರಾಮ ಹೋಳಾದ್ದರಿಂದ ಕೇಡು ನಮಗೆ ಕಟ್ಟಿಟ್ಟ ಬುತ್ತಿ ಎಂದು ಕಂಪಿಸುತ್ತ ನುಡಿದಳು, ಗೋಳಾಡಿದಳು. ತಕ್ಷಣ ಮೂರು ಕಡೆ ಹರಕೆ ಹೊತ್ತಳು, ಎರಡು ವ್ರತ ಹಿಡಿದಳು. ಬೆಳಗಾಗುವುದರೊಳಗೆ ಆ ಸಾಲಿಗ್ರಾಮದ ಚೂರುಗಳನ್ನು ಯಾವುದಾದರೂ ಬಾವಿಯೊಳಗೆ ಎಸೆದು ಬನ್ನಿ ಎಂದು ಆಜ್ಞಾಪಿಸಿದಳು. ಆಗ ಸಮಯ ಸಂಜೆಯ ಆರು ಗಂಟೆ.

ನಾನಿರುವುದು ಊರಲ್ಲದ ಒಂದು ಊರಿನಲ್ಲಿ. ಈ ಊರಿನ ತುಂಬ ನೀರಿಲ್ಲದ ಬೋರುಗಳೇ ಇವೆಯೆ ಹೊರತು ಒಂದಾದರೂ ಬಾವಿ ಯಾನೇ ಓಪನ್ ವೆಲ್ ಇದುತನಕ ನನ್ನ ಕಣ್ಣಿಗೆ ಬಿದ್ದಿಲ್ಲ. ಈಗ ಇದ್ದಕ್ಕಿದ್ದಂತೆ ಬೆಳಗಾಗುವುದರೊಳಗೆ ಬಾವಿಯನ್ನು ನಾನೆಲ್ಲಿಂದ ತರಲಿ ? ಆದರೆ ಬಾವಿಯನ್ನು ಕಂಡು ಹಿಡಿಯದೆ ವಿಧಿಯಿಲ್ಲ. ಸಾಲಿಗ್ರಾಮ ಕೊಳ್ಳದಿದ್ದರೆ (ಸ್ವೀಕರಿಸದಿದ್ದರೆ) ಭಾರೀ ಕೇಡು, ಒಡೆದರೆ ಮತ್ತೂ ಕೇಡು, ಅಂಥದರಲ್ಲಿ ಒಡೆದ ಸಾಲಿಗ್ರಾಮಕ್ಕೆ 'ಸೂಕ್ತ'ಗತಿ ಕಾಣಿಸದಿದ್ದರೆ ?! ಒದಗಬಹುದಾದ ಅಪಾಯವನ್ನು ಊಹಿಸಿಯೇ ಬೆವರಿಬಿಟ್ಟೆ! ಸಾಲಿಗ್ರಾಮದ ಚೂರುಗಳೆರಡನ್ನೂ ಕಿಸೆಯಲ್ಲಿಟ್ಟುಕೊಂಡು ಬಾವಿ ಹುಡುಕುತ್ತ ನಡೆದೆ.

ಹಾಗೇ ಊರಿನ ಉದ್ದಗಲ ಅಳೆಯುವವ

ನಂತೆ ಎಡಬಲ ನೋಡುತ್ತ ಹೊರಟೆ. ಎಂದೂ ಆ ರೀತಿ ಹೋಗದಿದ್ದ ನನ್ನನ್ನು ಆ ವಿಶಿಷ್ಟ ನಡೆಯಲ್ಲಿ ಕಂಡು ಊರಿನ ಜನರೆಲ್ಲ ಆಶ್ಚರ್ಯಾನುಮಾನಗಳನ್ನು ತಂತಮ್ಮ ಕೆಪ್ಯಾಸಿಟಿಗನುಗುಣವಾಗಿ ಪ್ರಕಟಪಡಿಸತೊಡಗಿದರು. ಒಂದಿಬ್ಬರು, "ಯಾಕ್ಸಾರ್? ಏನಾರಾ ಕಳದೈತಾ?" ಎಂದು ಕೇಳಿಯೂಬಿಟ್ಟರು. ಹಾಗೆ ಕೇಳಿದವರಲ್ಲೊಬ್ಬನನ್ನು, "ಇಲ್ಲೆಲ್ಲಾದರೂ ಬಾವಿ ಇದೆಯಾ?" ಎಂದು ಮರುಪ್ರಶ್ನಿಸಿದೆ. ಆತ ಸಂಶಯ ದೃಷ್ಟಿಯಿಂದ ನನ್ನನ್ನು ದಿಟ್ಟಿಸತೊಡಗಿದ. ಆ ದಿನ ನಾನು ಗಡ್ಡವನ್ನು ಮಾಡಿಕೊಂಡಿರಲಿಲ್ಲ. ಸಂಜೆ ಆಫೀಸಿಂದ ಬಂದವನೇ ಹೆಂಡತಿಯ ಮಾತು ಕೇಳಿ, ಹೆದರಿ, ಕೂಡಲೇ ಮನೆ ಬಿಟ್ಟಿದ್ದರಿಂದ ನನ್ನ ಮುಖವೂ ತೊಳೆಯಲ್ಪಟ್ಟಿರದೆ ದರಿದ್ರ ಕಳೆ ಸುರಿಯುತ್ತಿತ್ತು. ಸಾಲಿಗ್ರಾಮ ಒಡೆದ ಬೇಸರ ಬೇರೆ ಮುಖದಲ್ಲಿ ಮನೆಮಾಡಿತ್ತು. ಪಾಪ, ಅವನ ಸಂಶಯ ಸಹಜವೆ. ಅಂಥದ್ದೇನೂ ಇಲ್ಲವೆಂದು ನಾನು ಅವನಿಗೆ ಸಮಜಾಯಿಷಿ ನೀಡಿದಾಗ ಆ ಊರಿನ ಭಿಮಾಶಂಕರ ಮಠದೊಳಗೆ ಬಾವಿ ಇದೆಯೆಂದು ಹೇಳಿ ಆತ ಮುನ್ನಡೆದ. ಆ ಮಠ ಎಲ್ಲಿದೆಯೆಂದು ಕೇಳಿದಾಗ ಗೊತ್ತಿಲ್ಲವೆಂದು ಗೋಣಾಡಿಸುತ್ತ ಕಣ್ಮರೆಯಾಗಿಬಿಟ್ಟ.

ರಸ್ತೆ, ಬಯಲು ಹಾಗೂ ಗಲ್ಲಿಗಳ ಮೂವರನ್ನು ಕೇಳಿದ ಮೇಲೆ ಮಠ ಪತ್ತೆಯಾಯಿತು. ಮಠದೊಳಕ್ಕೆ ಹೋದೆ. ಅಲ್ಲೆಲ್ಲೂ ಬಾವಿ ಕಾಣಲಿಲ್ಲ. ಯಾರೋ ಸ್ವಾಮಿಗಳಂಥವರು ಇದ್ದರು. ಅವರನ್ನು ವಿಚಾರಿಸಿದೆ. ಅದಕ್ಕವರು, "ಇಲ್ಲೆಲ್ಲಿದೆ ಬಾವಿ? ಇಲ್ಲಿ ಬಾವೀನೂ ಇಲ್ಲ, ಕೆರೀನೂ ಇಲ್ಲ. ಯಾರೋ ತುಂಟಾಟಕೆಗೆ ಹೇಳ್ಯಾರೆ ಅಷ್ಟೆ. ಅಂದ್ಹಾಂಗೆ ಯಾಕೆ ಬೇಕಾಗಿತ್ತು ಬಾವಿ?" ಅಂತ ನನ್ನ ಮುಖ ನೋಡಿ ಹುಬ್ಬೇರಿಸಿದರು. 'ಸಾಯೋಕೆ', ಅನ್ನದೆ ಸಾವಧಾನದಿಂದ ವಿಷಯ ವಿವರಿಸಿದೆ.

"ಹಾಂಗಾ? ಭೀಮಾಬಾಯಿಯವರ ಮನೀ ಹಿತ್ತಲದಾಗೇ ಬಾವಿ ಅದ ನೋಡ್ರಿ, ಅಲ್ಲಿ ಹೋಗಿ ಒಗೇರಿ ಸಾಲಿಗ್ರಾಮಾ," ಎಂಬುದಾಗಿ ಆ ಸ್ವಾಮಿರೂಪರು ಅಪ್ಪಣೆ ಕೊಡಿಸಿದರು. ಭೀಮಾಬಾಯಿಯವರ ಮನೆಯ ಪತ್ತೆಯನ್ನು ಅವರಿಂದಲೇ ಪಡೆದುಕೊಂಡು ಮುಂದಕ್ಕೆ ಹೊರಟೆ. ಅವರು ಹೇಳಿದ ರಸ್ತೆಗೆ ಬಂದು ನಿಂತೆ. ಬ್ಯಾಂಕಿನಿಂದ ಸಾಲ ತೆಗೆದುಕೊಂಡವರು ನನ್ನನ್ನು ನೋಡುತ್ತಲೇ ಕಣ್ಮರೆಯಾದರು.

ಹೊಸದಾಗಿ ಸಾಲ ಬೇಕಾದವರು ನನ್ನ ಮುಂದೆ ಬಂದು ನಿಂತು ಸಮಸ್ಕರಿಸಿ ಹಲ್ಲುಕಿರಿದರು. ಉಳಿದವರು ಮೂಕಸಾಕ್ಷಿಗಳಾಗಿ ಈ ದೃಶ್ಯವೈಭವ ನೋಡತೊಡಗಿದರು. ಒಬ್ಬೊಬ್ಬರಿಂದಲೂ ಪಾರಾಗಿ ನಿಧಾನವಾಗಿ ನಾನು ಆ ರಸ್ತೆಯ ಹಿತ್ತಲಿಗೆ ಜಾರಿದೆ. ಹಿತ್ತಲಲ್ಲಲ್ಲವೆ ಭೀಮಾಬಾಯಿಯವರ ಬಾವಿ ಇರುವುದು! ಆ ಹಿತ್ತಲ ಗಲ್ಲಿಯೋ, ಗಲ್ಲಿಗಿಂತ ಗಲ್ಲಿ! ಹಂದಿಗಳ ಖಾಯಂ ನಿವಾಸ ಸ್ಥಾನ. ಬೇರೆ ದಾರಿಯಿಲ್ಲ; ಇದ್ದರೂ ಆ ದಾರಿಯಲ್ಲಿ ಬಾವಿ ಇರಬೇಕಲ್ಲ! ಹಂದಿಗಳ ಮಧ್ಯೆಯೇ ತೂರಿಕೊಂಡು ಬಾವಿಯನ್ನರಸುತ್ತ ಸಾಗಿದೆ. ಹಲವು ಮನೆಗಳ ಹಿತ್ತಲಲ್ಲಿ ವಿವಿಧ ಚಟುವಟಿಕೆಗಳಲ್ಲಿ ತೊಡಗಿದ್ದವರೆಲ್ಲ ನನ್ನನ್ನು ಕಂಡು ಒಂದು ಕ್ಷಣ ಕೆಲಸ ಬಿಟ್ಟು ದಿಟ್ಟಿಸಿ ಮತ್ತೆ ಕಾಯಕಕ್ಕೆ ಇಳಿಯಹತ್ತಿದರು. "ಹಂದಿಯೂ ಅಲ್ಲದ, ಭಿಕ್ಷುಕನಹಾಗೂ ಕಾಣದ ಇವನಾರು? ಏಕಿಲ್ಲಿ ನುಸುಳಿದ? ಈತ ಕಳ್ಳನೋ?" ಎಂಬಿತ್ಯಾದಿ ಅನುಮಾನಗಳು ಉಂಟಾಗಿರಬೇಕು ಅವರಿಗೆ. ಅವರಲ್ಲೊಬ್ಬ ಕೇಳಿಯೇಬಿಟ್ಟ, "ಏನು ಬೇಕಾಗಿತ್ತು?"

"ಬಾವಿ."

"ಹ್ಞಾ ? !"

"ಅಲ್ಲಲ್ಲ.....ಭೀಮಾಬಾಯಿಯವರ ಮನೆ." ತಿನ್ನುವಂತೆ ದುರುಗುಟ್ಟಿ ನೋಡಿ ಆತ ಮತ್ತೆ ಕೇಳಿದ,

"ಯಾವ ಭೀಮಾಬಾಯಿ ?"

"ಬಾವಿ ಇದೆಯಲ್ಲಾ ಅವರು."

"ಯಾಕೆ ? ನಿಮಗೆ ಬಾಯಿ ಬೇಕಾ, ಬಾವಿ ಬೇಕಾ ?"

"ಬಾವಿ."

"ಯಾಕೆ ?"

"ಅದೂ... ಅದೂ... ಸಾಲಿ...."

ನನ್ನ ಮಾತನ್ನು ಪೂರ್ತಿ ಕೇಳುವಷ್ಟು ಟೈಮು ಆತನಿಗೆ ಇರಲಿಲ್ಲವೇನೋ, ಮಧ್ಯದಲ್ಲೇ ನನ್ನನ್ನು ತಡೆದು, "ಇಲ್ಲಿಂದ ಐದನೇ ಮನೆ. ಆ ಕಡೆ ಹೋಗ್ರಿ," ಎಂದು ದಿಕ್ಕು ತೋರಿಸಿ ತನ್ನ ಮನೆಯೊಳಗೆ ಅಂತರ್ಧಾನನಾದ.

ಐದನೇ ಮನೆಯ ಹಿತ್ತಲಲ್ಲಿ ಕೊನೆಗೂ ಬಾವಿ ಕಂಡಾಗ ನನಗೆ ಸಂತೋಷದಿಂದ ಮೈ ಪರಚಿಕೊಳ್ಳುವಂತಾಯಿತು ! (ನನಗೆ ಹಾಗೇನೇ.) ಅನುಮಾನಿಸುತ್ತಾ ಅನುಮಾನಿಸುತ್ತಾ ಬಾವಿಯೆಡೆಗೆ ಹೆಜ್ಜೆಯಿಡುತ್ತಿದ್ದಂತೆ, "ಯಾವನೋ ಅವ್ನು ಚಂಡಾಳ !" ಎಂಬ ಕರ್ಕಶ ಧ್ವನಿ ಕಿವಿಗಪ್ಪಳಿಸಿತು ! ತಲೆಯೆತ್ತಿ ನೋಡಿದರೆ ಬಾವಿಯ ಮನೆಯ ಹಿತ್ತಲ ಬಾಗಿಲಲ್ಲಿ ಭೀಮಾಕಾರದ ಹೆಣ್ಣು ! ಭೀಮಾಬಾಯಿಯೇ ಖಂಡಿತ.

ಒಂದೇ ಉಸುರಿನಲ್ಲಿ, ಸಾಲಿಗ್ರಾಮದ ಕಥೆಯನ್ನು ಬಾಯಿಯವರಿಗೆ ಅರುಹಿದೆ.

"ನಮ್ ಬಾವೀ ಒಳಗೆ ಅಂಥಾದ್ದೇನೂ ಹಾಕಬ್ಯಾಡ, ನಡೀ !" ಎಂದು ಅಬ್ಬರಿಸಿದಳು ಭೀಮ-ಬಾಯಿ ! ತತ್‌ಕ್ಷಣ ಅಲ್ಲಿಂದ ಕಾಲು ಕಿತ್ತೆ.

ಸಿಕ್ಕ ಒಂದು ಬಾವಿಯೂ ಕೈಕೊಟ್ಟಿತೇ ! ಗಂಟೆಯಾಗಲೇ ಆರೂ ಮುಕ್ಕಾಲು. ಪುಣ್ಯಕ್ಕೆ ಸಂಜೆ ಬೆಳಕು ಇನ್ನು ಚೆನ್ನಾಗಿದೆ. ಕತ್ತಲೇರುತ್ತ ಹೋದ ಹಾಗೆ ಬಾವಿ ಕಾಣಿಸುವುದು ಕಷ್ಟ ಅಂದುಕೊಂಡು ಇನ್ನೊಂದು ಬಾವಿ ಹುಡುಕುತ್ತ ಸರಸರನೆ ಹೆಜ್ಜೆ ಹಾಕತೊಡಗಿದೆ. ಹೋದೆ, ಹೋದೆ, ಎಲ್ಲಿದೆ ಬಾವಿ ? ಊಹ್ಞೂಂ. ಬಾವಿಯೂ ಇಲ್ಲ, ಕೆರೆಯೂ ಇಲ್ಲ. ಬರಿ ಬೋರು ! ಕೂಡಲೇ ನನ್ನ ಹೆಂಡತಿ ಜ್ಞಾಪಕಕ್ಕೆ ಬಂದಳು. ಮಾತುಮಾತಿಗೆ, "ಕೆರೇನೋ ಬಾವೀನೋ ನೋಡ್ಕೋತೀನಿ," ಅನ್ನುತ್ತಿದ್ದಳು (ಅನ್ನುತ್ತಿರುತ್ತಾಳೆ) ಆಕೆ. ಅಕಸ್ಮಾತ್ ನಾನು, "ಸರಿ, ನೋಡ್ಕೋ ಹೋಗು," ಅಂದಿದ್ದರೆ ಆಕೆಗೆ ಎಲ್ಲಿಂದ ಸಿಗ್ತಾ ಇತ್ತು ಕೆರೆ-ಬಾವಿ ಈ ಊರಲ್ಲಿ ? ಪಾಪ !, ಸಾಯೋದಕ್ಕಿಂತಲೂ ಸಾಯೋ ಸೋರ್ಸ್ ಹುಡುಕೋದೇ ಕಷ್ಟವಾಗ್ತಿತ್ತು ಅವಳಿಗೆ ! ಬಾವಿ ಹುಡುಕುತ್ತ ಮುನ್ನಡೆದೆ. ನಡೆದೂ ನಡೆದೂ ಊರ ಹೊರಗಡೆ ಬಂದುಬಿಟ್ಟೆ. ಬಾವಿ ಮಾತ್ರ ಕಾಣಲೇ ಇಲ್ಲ.

ಇರುಳು ಕಂಡ ಬಾವಿಯಲ್ಲಿ ಹಗಲು ಬೀಳ್ತಾರಂತೆ. ನನ್ನ ಕರ್ಮಕ್ಕೆ ಹಗಲೇ ಒಂದು ಬಾವಿ ಕಾಣದಾಯಿತೇ ಎಂದು ನನ್ನನ್ನು ನಾನು ಶಪಿಸಿಕೊಳ್ಳುತ್ತ ಸಾಗಿದ್ದಂತೆ ನಿಧಾನವಾಗಿ ಕತ್ತಲಾವರಿಸತೊಡಗಿತು. ನನಗೆ ಭಯವಾಗತೊಡಗಿತು. ಕತ್ತಲಲ್ಲಿ ಬಾವಿ ಕಾಣದೆಯೆ ಹಾಗೇ ಬೆಳಗಾಗಿಬಿಟ್ಟರೆ ! ಏನು ಕೇಡಾಗುವುದೋ ! ನನ್ನ ತಲೆಯೂ ಸಾಲಿಗ್ರಾಮದ ಹಾಗೆಯೇ ಒಡೆದು ಹೋಳಾಗುವುದೋ ! ಅಕಟಕಟಾ ! ಎನ್ನ ದುರ್ವಿಧಿಯೇ ! ಎಲ್ಲರಿಗೂ ಒಳ್ಳೆಯದನ್ನು ಮಾಡುವ ಸಾಲಿಗ್ರಾಮ ನನಗೇಕೆ ಹೀಗೆ ದುಃಖ ನೀಡುತ್ತಿದೆ ! ಕೇಡು ಮಾಡಲು ಹೊರ

ಡುತ್ತಿದೆ! ರಾವ್ ಶಾಸ್ತ್ರಿ ಹೇಳಿದ ಪ್ರಕಾರ ಗಂಡಕಿ ನದಿಯಲ್ಲಿ ಸಿಕ್ಕ ಈ ಸಾಲಿಗ್ರಾಮ ನನ್ನ ಪಾಲಿಗೆ ಗಂಡವಾಗಿ ಪರಿಣಮಿಸಿತೇ!

ಈ ರೀತಿ ಯಾತನೆಪಡುತ್ತ ನಾನು ಊರ ಹೊರಗಿನ ಆ ರಸ್ತೆಯಲ್ಲಿ ಅದೇ ಮೊದಲ ಬಾರಿಗೆ (ಅದೂ ರಾತ್ರಿಯ ಸಮಯದಲ್ಲಿ) ಸಾಗಿದ್ದಂತೆ ಅಲ್ಲೊಂದು ಹಾಳು ದೇವಾಲಯ ಕಾಣಿಸಿತು. ಆ ದೇವಾಲಯದ ಎದುರಿನಲ್ಲೇ.... ಹೌದು!.... ಹಾದೇ ಹೌದು! ಬಾವಿ!! ನನ್ನ ಸಂತೋಷಕ್ಕೆ ಪಾರವೇ ಇರಲಿಲ್ಲ. ನಾನೆಂಥ ಅದೃಷ್ಟವಂತ! ಎಲ್ಲವೂ ಸಾಲಿಗ್ರಾಮದ ಮಹಿಮೆ! ಅಂದುಕೊಳ್ಳುತ್ತ ನಾನು ಒಂದೇ ಓಟಕ್ಕೆ ಆ ಬಾವಿಯ ಬಳಿ ಓಡಿದೆ. ಜೇಬಿನಿಂದ ಸಾಲಿಗ್ರಾಮದ ಚೂರುಗಳನ್ನು ಹೊರತೆಗೆದೆ. ಇನ್ನೇನು, ಬಾವಿಗೆ ಎಸೆಯಬೇಕು, ಅಷ್ಟರಲ್ಲಿ ಯಾರೋ ಹಿಂದಿನಿಂದ ನನ್ನ ಕೈ ಒತ್ತಿ ಹಿಡಿದರು! ಹಿಂತಿರುಗಿ ನೋಡಿದರೆ ಭಾರೀ ಧಾಂಡಿಗನೊಬ್ಬ!

"ಏಯ್! ಏನೋ ಅದು, ಬಾವಿಗೆ ಹಾಕಾಕ್ಹತ್ತೀ!" ಎಂದಾತ ಗರ್ಜಿಸಿದ. 'ಸ..ಸ.. ಸಾಲಿಗ್ರಾಮ.'

"ಅಂದರೆ?"

"ಅಂದರೆ, .... ಅದು.... ದೇವರ ಮಣಿ."

"ಅದೆಂಥದಲೇ ಅದು ದೇವರ ಮಣಿ? ಮಾಟಾ ಮಂತ್ರಾ ಮಾಡಾಕ್ಹತ್ತಿದೀಯೇನಲೇ?" ಎಂದಾತ ಕಿರುಚಾಡಲಿಕ್ಕೂ ಅದೆಲ್ಲಿಂದಲೋ ನಾಲ್ಕಾರು ಜನ ಬಂದು ಸೇರುವುದಕ್ಕೂ ಸರಿಹೋಯಿತು.

ಮುಂದೆ ನಡೆದದ್ದನ್ನು ವಿವರವಾಗಿ ಹೇಳುವ ಧೃತಿ ನನ್ನಲ್ಲಿಲ್ಲ. ಒಂದೇ ವಾಕ್ಯದಲ್ಲಿ ಹೇಳಿಬಿಡುತ್ತೇನೆ. ನಾನು ಮಾಟಗಾರನೆಂದು ತೀರ್ಮಾನಿಸಿ ಆ ಜನರು ನನ್ನನ್ನು ಸರಿಯಾಗಿ ಚಚ್ಚಿದ್ದರಿಂದಾಗಿ ನಾನು ಮೂರು ವಾರ ಬ್ಯಾಂಕಿಗೆ ರಜೆ ಹಾಕಿ ಟ್ರೀಟ್‌ಮೆಂಟ್ ತೆಗೆದುಕೊಳ್ಳಬೇಕಾಯಿತು. ಅವರಿಂದ ಚಚ್ಚಿಸಿಕೊಳ್ಳುವ ಗಲಾಟೆಯಲ್ಲಿ ನನ್ನ ಕೈಯಲ್ಲಿದ್ದ ಸಾಲಿಗ್ರಾಮದ ಚೂರುಗಳು ಎಲ್ಲಿ ಬಿದ್ದುಹೋದವೋ ಆ ಪಶುಪತಿನಾಥನಿಗೇ ಗೊತ್ತು. ಗಲಾಟೆಯಲ್ಲಿ ಬಹುಶಃ ಅವು ಬಾವಿಯೊಳಕ್ಕೇ ಹಾರಿಬಿದ್ದಿರಬೇಕು. ಏಕೆಂದರೆ ನಾನಿನ್ನೂ ಸತ್ತಿಲ್ಲ.

ಊರೂರು ಅಲೆಯುತ್ತ ಆ ಜ್ಯೋತಿಷಿ ರಾವ್ ಶಾಸ್ತ್ರಿ ನಿಮ್ಮ ಬಳಿಯೂ ಬಂದಾನು. ಅವನು ಏನೇ ಹೇಳಲಿ, ಎಷ್ಟೇ ಹೆದರಿಸಲಿ, ಅವನಿಂದ ಸಾಲಿಗ್ರಾಮ ಮಾತ್ರ ಕೊಂಡುಕೊಳ್ಳಬೇಡಿ (ಸ್ವೀಕರಿಸಬೇಡಿ) ನಿಮ್ಮದಮ್ಮಯ್ಯ!

●

ಮರಾಠಿ ಸಾಹಿತ್ಯದಲ್ಲಿ ಆಚಾರ್ಯ ಪಿ.ಕೆ. ಅತ್ರೆಯವರದು ಪಾರಜದಂತಹ ತೀಕ್ಷ್ಣತೆಯ ವ್ಯಕ್ತಿತ್ವ. ಅವರು ಶಿಕ್ಷಕರು, ಪತ್ರಿಕಾಕರ್ತರು, ಸಂಪಾದಕರು, ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೈಯಾಡಿಸಿದವರು. ಅವರು ನಾಟಕಕಾರರೂ ಹೌದು. ಇಷ್ಟೆಲ್ಲಕ್ಕೂ ಹೆಚ್ಚಾಗಿ ಅವರು ಅತ್ಯುತ್ತಮ ಭಾಷಣಕಾರರೂ, ಸಂಭಾಷಣಾ ಚತುರರೂ, ವಿನೋದಪ್ರಿಯರೂ ಆಗಿದ್ದರು. ಒಂದು ಸಲ ಅವರು ಪುಣೆಯಲ್ಲಿ ಒಂದು ಸಾಂಸ್ಕೃತಿಕ ಸಭೆಯಲ್ಲಿ ಭಾಷಣ ಮಾಡಲಿದ್ದರು. ಆ ಸಭೆಯಲ್ಲಿ ಒಬ್ಬ ಯುವಕ ಅವರನ್ನು ಕೆಣಕಲು ನಿರ್ಧರಿಸಿದ. ಅತ್ರೆಯವರು ಭಾಷಣ ಮಾಡಲು ಎದ್ದುನಿಂತು, "ಸಭ್ಯಗೃಹಸ್ಥೊ" (ಸಭ್ಯ ಗೃಹಸ್ಥರೇ) ಎಂದೊಡನೆಯೇ ಮುಂದಿನ ಸಾಲಿನಲ್ಲಿಯೇ ಕುಳಿತ ಈ ಯುವಕ "ಕ್ಯಾಯ್‌ಬುವಾ (ಏನಪ್ಪಾ)" ಎಂದ. ತಕ್ಷಣವೇ ಅತ್ರೆಯವರು, "ತುಮ್ಹಾಲಾ ನಾಹಿ, ಬಸಾ" ಎಂದುಬಿಟ್ಟರು. ಈ ವಾಗ್ಬಾಣದ ತಿರುಗೇಟಿನಿಂದ ಸಭೆಯಲ್ಲಿ ನಗೆಗಡಲೇ ಎದ್ದಿತು. ಯುವಕ ಇಂಗುತಿಂದಂತೆ ಆಗಿದ್ದ.

● ಡಾ. ಎಸ್.ಎನ್. ಕುಲಕರ್ಣಿ

# 'ಎರ್ಗಟ್'
# ಎಂಬ ವಿಷದಿಂದ ಔಷಧ

★ಸೋಮಶೇಖರ ಎಸ್. ರುಳಿ

ಮಧ್ಯ ಯುಗ. ಯುರೋಪ್ ಖಂಡದ ಜನರ ಬದುಕೇ ದಿಕ್ಕೆಟ್ಟುಹೋಗಿತ್ತು. ಅದಕ್ಕಿದ್ದ ಕಾರಣಗಳು ಹಲವಾರು. ಇದೇ ಸಮಯದಲ್ಲಿ ಪ್ಲೇಗ್ ಮಹಾಮಾರಿ ತಾಂಡವವಾಡಿ ಕೆಲವೇ ತಿಂಗಳುಗಳ ಅವಧಿಯಲ್ಲಿ ಮೂರನೆಯ ಒಂದು ಭಾಗದಷ್ಟು ಜನಸಮುದಾಯವನ್ನೇ ನುಂಗಿಹಾಕಿತ್ತು. ಅಮೆರಿಕವೆಂಬ ಹೊಸ ಖಂಡವನ್ನು ಕಂಡುಹಿಡಿದ ಕೊಲಂಬಸ್‌ನೊಂದಿಗೆ ಹೋಗಿದ್ದ ಅನೇಕ ನಾವಿಕರು, ಬರುವಾಗ ಕೇವಲ ವಿಜಯ ಪತಾಕೆಯೊಂದನ್ನೇ ತರಲಿಲ್ಲ, ಅದರೊಟ್ಟಿಗೆ 'ಸಿಫಿಲಿಸ್' ಎಂಬ ಹೊಸ ಲೈಂಗಿಕರೋಗವನ್ನೂ ತಂದಿದ್ದರು. ಅಧಿಕಾರ ದಾಹ, ನೆಲದ ಹಪಾಹಪಿ, ಹೆಣ್ಣಿನ ವ್ಯಾಮೋಹಗಳಿಂದಾಗಿ ಸತತವಾಗಿ ಯುದ್ಧಗಳು ನಡೆಯುತ್ತಿದ್ದವು. ಹೀಗಾಗಿ ಇಡೀ ಯುರೋಪಿನ ಜನತೆ, ಯಾರು ಯಾರನ್ನು ಆಳುತ್ತಿದ್ದಾರೆ, ಯಾರು ಯಾರನ್ನು ನಿಯಂತ್ರಿಸುತ್ತಿದ್ದಾರೆ, ತಮ್ಮ ಸುತ್ತ ಮುತ್ತ ಏನಾಗುತ್ತಿದೆ ಎಂಬುದು ತಿಳಿಯದೆ ತೀವ್ರ ಗೊಂದಲದಲ್ಲಿ ಮುಳುಗಿತ್ತು. ಇವೆಲ್ಲಕ್ಕೂ ಕಳಶಪ್ರಾಯವಾಗಿ ಆಗತಾನೆ ಇನ್ನೊಂದು ಘೋರ ಸಂಕಟ ಹಬ್ಬಿಕೊಳ್ಳುತ್ತಿತ್ತು. ಜನರ ಮುಖ್ಯ ಆಹಾರವಾಗಿದ್ದ 'ರೈ' ಬೆಳೆಯನ್ನು ಒಂದು ಶಿಲೀಂಧ್ರ ರೋಗವಾದ 'ಕ್ಲ್ಯಾವಿಸೆಪ್ಸ್ ಪರ್ಪೂರಿಯಾ' ಆಕ್ರಮಿಸತೊಡಗಿತ್ತು. ಕೇವಲ ಬೆಳೆಯನ್ನು ಕಬಳಿಸಿದರೆ ಬಹುಶಃ ಅಷ್ಟು ಹಾನಿ ಆಗುತ್ತಿರಲಿಲ್ಲವೇನೋ. ಆದರೆ ಈ ಶಿಲೀಂಧ್ರ ಭೀಕರ ವಿಷ ಕೂಡ ಆಗಿದ್ದೇ ಎಷ್ಟೋ ಅನಾಹುತಗಳಿಗೆ ಕಾರಣವಾಯಿತು.

ವಿಷದ ಭೀಕರತೆ: ಈ ಶಿಲೀಂಧ್ರದಿಂದ ಆಕ್ರಮಿಸಲ್ಪಟ್ಟ 'ರೈ'ನ ತೆನೆಗಳಿಗೆಲ್ಲವೂ 'ಎರ್ಗಟ್' ಎಂಬ 'ಜಿಗಿರೋಗ' ಬಂದಿತ್ತು. ಅಂದರೆ ಅವೆಲ್ಲ ಜಿಗಿ ಜಿಗಿಯಾಗಿ, ಕಪ್ಪು ಬಣ್ಣಕ್ಕೆ ತಿರುಗಿದ್ದವು. ಇದೇನೆಂದು ಗೊತ್ತಾಗದ ಜನ ಬಾಧಿತವಾದ 'ರೈ'ಯನ್ನು ತಿಂದಾಗ, ಆಗಬಾರದ ಅನಾಹುತಗಳೇ ಸಂಭವಿಸತೊಡಗಿದವು.

ಈ ಶಿಲೀಂಧ್ರ ಉಂಟುಮಾಡುವ ವಿಷದ ಪರಿಣಾಮವಾಗಿ ಒಣ ಗ್ಯಾಂಗ್ರೀನಿನ ಲಕ್ಷಣಗಳು ಕಂಡುಬರುತ್ತವೆ. ಸುಮಾರು ಕ್ರಿ.ಪೂ. ೬೦೦ನೇ ಇಸ್ವಿಯಷ್ಟು ಹಿಂದೆಯೇ ಅಸ್ಸೀರಿಯದ ಔಷಧ ಪದ್ಧತಿಯಲ್ಲಿ ಇದನ್ನು

'ಧಾನ್ಯದ ಕಾಳಿನ ವಿಷದ ಚುಕ್ಕೆ' ಎಂದು ವರ್ಣಿಸಲಾಗಿದೆ. ಅಂದರೆ ಶತಮಾನಗಳ ಮುಂಚೆನಿಂದಲೇ ಅದು ಆಗೊಮ್ಮೆ ಈಗೊಮ್ಮೆ ಕಾಣಿಸಿಕೊಳ್ಳುತ್ತಿತ್ತು. ಆದರೆ ಯುರೋಪಿನಲ್ಲಿ ಮಧ್ಯಯುಗದ ಸುಮಾರಿಗೆ 'ಜಗಿರೋಗದ ವಿಷದ ಭಯ' ದೊಂದಿಗೆ ರೋಗ ಕೂಡ ವ್ಯಾಪಕವಾಗಿ ಹರಡಿತು. ಈ ವಿಷದ ಪರಿಣಾಮವಾಗಿ ಕಾಲುಗಳು ನಿಧಾನವಾಗಿ ಒಣಗುತ್ತ, ಮುಂದೊಮ್ಮೆ ಕಪ್ಪಾಗಿ ಕೊಳೆತು ಬಿಡುತ್ತಿದ್ದವು. ಇನ್ನೂ ತೀವ್ರತರವಾದ ಸಂದರ್ಭಗಳಲ್ಲಿ ಹೀಗೆ ಕೊಳೆತ ಕಾಲುಗಳಿಂದ ಒಂದು ಹನಿ ರಕ್ತ ಕೂಡ ಸ್ರವಿಸದೆ ಕಾಲುಗಳು ತಂತಾನೆ ಉದುರಿಬೀಳುತ್ತಿದ್ದವು! ಇದರೊಂದಿಗೇ ಸಹಿಸಲಸಾಧ್ಯವಾದ ಉರಿತದ ಅನುಭವ ಕೂಡ ರೋಗಿಗೆ ಆಗಿ ಆತ ಅಪಾರವಾದ ವೇದನೆಯನ್ನು ಅನುಭವಿಸುತ್ತಿದ್ದ. ಈ ಶಿಲೀಂಧ್ರದಿಂದಾಗಿ ಗರ್ಭಿಣಿಯರಲ್ಲಿ ಗರ್ಭಪಾತವಾಗುತ್ತಿತ್ತು! ಸ್ನಾಯು ಸೆಳೆತ, ಅಪಸ್ಮರಗಳು ಕೂಡ ಆಗಾಗ ಉಂಟಾಗುತ್ತಿದ್ದವು!

**ಸಿಕ್ಕ ಸುಳಿವು:** ಇಂಥ ಸಂದರ್ಭಗಳಲ್ಲಿ ಐತಿಹ್ಯಗಳು ಹುಟ್ಟಿಕೊಳ್ಳಲು ತಡವಾಗುವುದಿಲ್ಲ. ಈ ಸಾಂಕ್ರಾಮಿಕ ಸಂತ ಆ್ಯಂಥೋನಿಯ 'ಪವಿತ್ರವಾದ ಅಗ್ನಿ' ಯೆಂದೂ, ಈ ಅಗ್ನಿಯೇ ಕೊಳೆತ ಕಾಲುಗಳನ್ನು ಕಬಳಿಸಿದೆಯೆಂದೂ, ಸಂತ ಆ್ಯಂಥೋನಿಯ ದೇವಾಲಯಕ್ಕೆ ಹೋದ ಜನ ಹೇಳತೊಡಗಿದರು. ಬಹುಶಃ ಸಂತನ ಪವಿತ್ರ ಸ್ಥಳಕ್ಕೆ ಹೋದ ಜನರಿಗೆ ಆರೋಗ್ಯಕರವಾದ ಆಹಾರದೊಂದಿಗೆ, ಮನಸ್ಸಿಗೆ ನೆಮ್ಮದಿಯೂ ಸಿಕ್ಕಿರಬೇಕು. ಇದರಿಂದಾಗಿ ಬದುಕುಳಿದವರು ಹಾಗೆ ಹೇಳುತ್ತಿದ್ದಿರಲೂಬಹುದು.

'ಪವಿತ್ರ ಅಗ್ನಿ'ಗೆ ಇದೇ ಕಾರಣ ಎಂದು ಅರಿವಾಗುವುದಕ್ಕಿಂತ ಬಹಳ ಮೊದಲೇ 'ಎರ್ಗಟ್' ಅನ್ನು ಪ್ರಸವಕಾಲದ ವನಸ್ಪತಿ ಎಂದೇ ಗುರುತಿಸಲಾಗಿತ್ತು. ಪಾರ್ಸಿಗಳ ಧರ್ಮಗ್ರಂಥದಲ್ಲಿ ಕೂಡ ಈ ವಿಷದಿಂದ ಮಗುವಿನ ಜನನದ ಸಮಯದಲ್ಲಿ ಮಹಿಳೆಯರು ಸಾಯುತ್ತಾರೆ ಎನ್ನುವ ಉಲ್ಲೇಖವಿದೆ. ಯುರೋಪಿನ ದಾದಿಯರು ಗರ್ಭಪಾತ ಮಾಡಿಸುವುದಕ್ಕಾಗಿ ಅಲ್ಲದೆ ಗರ್ಭಾಶಯಕ್ಕೆ ಟಾನಿಕ್ ಆಗಿಯೂ ಎರ್ಗಟ್‌ಅನ್ನು ಬಳಸುತ್ತಿದ್ದರಂತೆ. ಹೀಗೆ ಇದೊಂದು ಔಷಧಿಯಾಗಬಲ್ಲುದು ಎಂಬುದರ ಸುಳಿವು ಆ ಕಾಲದ ಶಾಸ್ತ್ರಜ್ಞರಿಗೆ ಸಿಕ್ಕಿರಲೂಬಹುದು.

**ಔಷಧಿಗಳ ಆಗರ:** ೧೮೦೮ ರಲ್ಲಿ ಜಾನ್ ಸ್ಟರ್ನ್ಸ್ ಎನ್ನುವವನೊಬ್ಬ ಮಗುವಿನ ಜನನವನ್ನು 'ಎರ್ಗಟ್' ನಿಂದ ತ್ವರಿತಗೊಳಿಸಬಹುದು ಎನ್ನುವುದನ್ನು ತೋರಿಸಿಕೊಟ್ಟು ಆಧುನಿಕ ಔಷಧಪದ್ಧತಿಯಲ್ಲಿ 'ಎರ್ಗಟ್'ನ ಬಳಕೆಯನ್ನು ಆರಂಭಿಸಿದನೆಂದು ಹೇಳಬಹುದು.



## ಹಗರಣ

*ಗಂಡ* ರಣಧೀರ
ಹೆಂಡತಿ ರಣಚಂಡಿ!
ಹೀಗಾಗಿ,
ಬದುಕೊಂದು....
(ಹಗ)ರಣ ಬಂಡಿ!?

✸ ಗೋಪಿ ಹಿರೇಬೆಟ್ಟು

ಹಾಗೆ ನೋಡಿದರೆ ಔಷಧಶಾಸ್ತ್ರಜ್ಞರಿಗೆ ಈ ಶಿಲೀಂಧ್ರ ನಿಜಕ್ಕೂ ಒಂದು ಅಮೂಲ್ಯ ನಿಧಿ. ಏಕೆಂದರೆ ಇದರಲ್ಲಿ ಜೈವಿಕವಾಗಿ ಕ್ರಿಯಾತ್ಮಕವಾದ ಅಲ್ಕಲಾಯ್ಡುಗಳು, ಅಸಿಟೈಲ್‌ಕೋಲೈನ್, ಹಿಸ್ಟಾಮೈನ್, ಟೈರಮೈನ್ ಹಾಗೂ ಇತರ ಅಮೈನೋ ಆಮ್ಲಗಳು ಅಲ್ಲದೆ ಸ್ಟೀರಾಯ್ಡುಗಳ ಖಜಾನೆಯೇ ಇದೆ. ೧೯೦೭ರಲ್ಲಿ ಮೊಟ್ಟಮೊದಲ ಭಾರಿಗೆ ಡೇಲ್ ಹಾಗೂ ಆತನ ಸಹೋದ್ಯೋಗಿಗಳು ಎರ್ಗೋಟಾಕ್ಸಿನ್‌ಅನ್ನು ಪರಿಷ್ಕರಿಸಿದ ನಂತರ ಪರಿಶೋಧನೆಯ ಈ ಕಾರ್ಯ ಮುಂದುವರಿಯಿತು. ೧೯೨೦ರಲ್ಲಿ ಸ್ಟಾಲ್‌ನು ಎರ್ಗೋಟಾಮೈನ್‌ಅನ್ನೂ ೧೯೩೨ರಲ್ಲಿ ಮೊಯಿರ್ ಎಂಬಾತ ಎರ್ಗೋಮೆಟ್ರಿನ್ ಅನ್ನೂ ಕಂಡುಹಿಡಿದರು. 'ಎರ್ಗಟ್' ನಿಂದ ತಯಾರಾದ ಅಲ್ಕಲಾಯ್ಡುಗಳಾದ ಬ್ರೋಮೋಕ್ರಿಪ್ಟಿನ್, ಮಿಥೈಲ್ ಎರ್ಗೋಮೆಟ್ರಿನ್, ಮೆಥಿಸರ್ಗೈಡ್ ಮುಂತಾದವುಗಳನ್ನು ವಿವಿಧ ರೋಗಗಳಿಗೆ ಅದರಲ್ಲೂ ವಿಶೇಷವಾಗಿ ಯಾತನಾಮಯವಾದ ನೋವನ್ನು ನಿವಾರಿಸುವಲ್ಲಿ ಉಪಯೋಗಿಸಲಾಗುತ್ತಿದೆ. ಎರ್ಗೋಟಮೈನ್‌ಅನ್ನು ಅರೆತಲೆನೋವನ್ನು ಶಮನಗೊಳಿಸುವಲ್ಲಿ ಬಳಸಲಾಗುತ್ತಿದೆ. ಎರ್ಗೋಮೆಟ್ರಿನ್ ಹಾಗೂ ಮಿಥೈಲ್ ಎರ್ಗೋಮೆಟ್ರಿನ್‌ಗಳು ಗರ್ಭಾಶಯದ ಪ್ರಬಲವಾದ ಟಾನಿಕ್ ಆಗಿವೆ. ಬ್ರೋಮೋಕ್ರಿಪ್ಟಿನ್ನಿಗೆ ಬಹುಮುಖ ಉಪಯೋಗಗಳಿವೆ.

ಇದು ಮುಖ್ಯವಾಗಿ ಪಾರ್ಕಿನ್‌ಸನ್ನನ ರೋಗಕ್ಕೆ ಉತ್ತಮ ಮದ್ದಾಗಿದೆ. ಅಲ್ಲದೆ ಇನ್ನೂ ಅನೇಕ ಅಲ್ಕಲಾಯ್ಡುಗಳನ್ನು ಮಾನಸಿಕ ರೋಗಗಳಿಗೆ ಔಷಧಿಗಳಾಗಿ ಶಿಫಾರಸು ಮಾಡಲಾಗುತ್ತಿದೆ.

ಮನುಷ್ಯನ ಜೀವ ತೆಗೆದುಕೊಂಡು ಕೋಲಾಹಲ ಎಬ್ಬಿಸಿದ್ದ ಒಂದು ಚಿಕ್ಕ ಶಿಲೀಂಧ್ರದಲ್ಲಿ ಎಷ್ಟೆಲ್ಲಾ ಒಳ್ಳೆಯ ಗುಣಗಳು ಅಡಗಿವೆಯಲ್ಲವೆ? 'ಎರ್ಗಟ್'ನ ಸಂಶೋಧನೆ ಇನ್ನೂ ಮುಗಿದಿಲ್ಲ. ಇನ್ನೂ ಎಂತೆಂತಹ ಚಮತ್ಕಾರಿಕ ನಿಧಿಯನ್ನು ಬಚ್ಚಿಟ್ಟುಕೊಂಡಿದೆಯೋ ಈ ಶಿಲೀಂಧ್ರ......!? ಕಾಲವೇ ಇದಕ್ಕೆ ಉತ್ತರ ಹೇಳಬೇಕು.

(ಆಧಾರ)



# ಕೆಮಿಸ್ಟ್‌ನ ಹೆಂಡತಿ

ಅಂಕು-ಡೊಂಕು ಗಲ್ಲಿಗಳಲ್ಲಿ ಜನಭರಿತ 'ಬ' ಎಂಬ ಚಿಕ್ಕನಗರ ದಟ್ಟ ನಿದ್ರೆಯಲ್ಲಿ ಮುಳುಗಿತ್ತು. ಗಾಳಿ ಸ್ಥಿರವಾಗಿದ್ದು ಎಲ್ಲೆಲ್ಲೂ ಮೌನ ಕವಿದಿತ್ತು. ದೂರದಲ್ಲಿ ಎಲ್ಲಿಂದಲೋ ನಾಯಿಯೊಂದು ಕರ್ಕಶವಾಗಿ ಬೊಗಳುವುದು ಕೇಳಿಸುತ್ತಿತ್ತು. ಬೆಳಗಾಗಲು ಇನ್ನು ಸ್ವಲ್ಪ ವೇಳೆಯಷ್ಟೇ ಇತ್ತು.

ನಗರದಲ್ಲಿ ನಿದ್ರೆ ಬಿಡಾರ ಹೂಡಿ ಗಂಟೆಗಳೇ ಕಳೆದಿತ್ತು. ಕೆಮಿಸ್ಟ್‌ನ ಹೆಂಡತಿಯೊಬ್ಬಳು ಮಾತ್ರ ಎಚ್ಚರವಾಗಿದ್ದಳು. ಅವಳು ನಿದ್ರಿಸಲು ಮೂರು ಸಲ ಯತ್ನಿಸಿ ಸೋತಿದ್ದಳು. ಹಟಮಾರಿ ನಿದ್ರೆ ಅವಳ ಬಳಿ ಸುಳಿಯುತ್ತಲೂ ಇರಲಿಲ್ಲ. ಹೀಗೇಕಾಯಿತೆಂದು ಅವಳಿಗೆ ಅರ್ಥವಾಗಲಿಲ್ಲ. ಅವಳು ರಾತ್ರಿ ಉಡುಪಿನಲ್ಲಿ ಕಿಟಕಿಯ ಬಳಿ ಕೂತು ಗಲ್ಲಿಯೆಡೆಗೆ ನೋಡುತ್ತಿದ್ದಳು. ಬೇಸರ, ಒಂಟಿತನದಿಂದಾಗಿ ಅವಳ ಸ್ಥಿತಿ ಶೋಚನೀಯವಾಗಿತ್ತು. ಅವಳು ರೋದಿಸ ಬಯಸುತ್ತಿದ್ದಳು. ಆದರೆ ಯಾಕೆಂದು ಅವಳಿಗೇ ತಿಳಿದಿರಲಿಲ್ಲ. ತನ್ನೆದೆಯಲ್ಲಿ ಗಂಟಿದೆ, ಅದು ಮೇಲೆ ಮೇಲೆ ಬಂದು ಗಂಟಲಿನಲ್ಲಿ ಸಿಕ್ಕಿಕೊಳ್ಳುತ್ತಿದೆಯೆಂದು ಅನ್ನಿಸುತ್ತಿತ್ತು. ಅವಳ ಹಿಂದೆ ಸ್ವಲ್ಪವೇ ದೂರದಲ್ಲಿ ಆಕೆಯ ಪತಿ ಗೋಡೆಗೆ ಮುಖ ಮಾಡಿ ಗೊರಕೆಹೊಡೆಯುತ್ತಿದ್ದ. ಸೊಳ್ಳೆಯೊಂದು ಅವನ ಮೂಗಿನ ಮೇಲೆ ಕುಳಿತು ನಿರ್ವಿಘ್ನವಾಗಿ ರಕ್ತ ಹೀರುತ್ತಿತ್ತು. ಇದರ ಪರಿವೆಯೇ ಅವನಿಗಿರಲಿಲ್ಲ. ಅವನು ನಿದ್ರೆಯಲ್ಲಿ ಮುಗುಳು ನಗುತ್ತಿದ್ದ. ನಗರದ ಪ್ರತಿಯೊಬ್ಬನೂ ಕೆಮ್ಮುತ್ತಿದ್ದು, ಕೆಮ್ಮುವ ಜನರ ಗುಂಪೊಂದು ಕೆಮ್ಮಿನ ಮಿಕ್ಸ್‌ಚರ್ ಕೊಳ್ಳಲು ಅವನ ಅಂಗಡಿಗೆ ದೌಡಾಯಿಸಿ ಬರುತ್ತಿರುವಂತೆ ಆತ ಕನಸು ಕಾಣುತ್ತಿದ್ದ. ಸೂಜಿ ಅಥವಾ ತಂಬಾಕಿಯಿಂದಲೂ ಅವನನ್ನೆಚ್ಚರಿಸಲು ಸಾಧ್ಯವಿರಲಿಲ್ಲ. ಅವನ ಹೆಂಡತಿಯ ಕೋಮಲ ಮಧುರ ಆಲಿಂಗನವಂತೂ ಸುತಾರಾಂ ಎಚ್ಚರಿಸಲು ಸಾಧ್ಯವಿರಲಿಲ್ಲ.

ಕೆಮಿಸ್ಟ್‌ನ ಅಂಗಡಿ ಸುಮಾರಾಗಿ ನಗರದ ಅಂಚಿನಲ್ಲಿತ್ತು. ಅವನ ಹೆಂಡತಿಯ ಕಣ್ಣುಗಳೆದುರು ನಿರ್ಜನ ಬಯಲಿತ್ತು. ಅವಳು ಅಂಬರದ ಪೂರ್ವದ ಅಂಚನ್ನು ನೋಡುತ್ತಿದ್ದಳು.

ಸ್ವಲ್ಪ ಮುಂಚೆ ಅಲ್ಲಿ ಬೆಳಕಿದ್ದು, ಈಗ ಮಬ್ಬುಗತ್ತಲೆ ಹರಡಿತ್ತು. ಒಮ್ಮೆಲೆ ದೂರದ ಪೊದೆಗಳಿಂದ ಚಂದ್ರ ತೆವಳುತ್ತಾ ಬಂದ. ಚಂದ್ರನ ಮುಖ ಕೆಂಬಣ್ಣದಿಂದ ಕಂಗೊಳಿಸುತ್ತಿತ್ತು. ನಿಜವಾಗಿಯೆಂದರೆ ಅಷ್ಟಿಷ್ಟು ಕವಿದೃಷ್ಟಿ ಇರುವವರಿಗೆ ಚಂದ್ರ ಪೊದೆಗಳ ಹಿಂದಿನಿಂದ ಬಂದಾಗ ಚಂದ್ರ ಸದಾ ಒಂದಲ್ಲ ಒಂದು ವಿಷಯಕ್ಕೆ ನಾಚಿಕೊಂಡಂತೆ ಕಾಣುತ್ತಾನೆ.

ಚಂದ್ರ ಉದಿಸುತ್ತಲೇ ಹೆಜ್ಜೆಯ ಸದ್ದಿನಿಂದ ಮತ್ತು ಮಾತುಕತೆಯಿಂದಾಗಿ ಹೆಪ್ಪುಗಟ್ಟಿದ

* ಮೂಲ: ಆ್ಯಂಟೋನ್ ಚೆಕೊವ್
* ಕನ್ನಡಕ್ಕೆ: ಡಿ.ಎಸ್. ಶ್ರೀನಾಥ್

ಪೌನ ಒಡೆಯಿತು.

'ತಮ್ಮ ಕ್ಯಾಂಪಿಗೆ ಮರಳುವ ಅಧಿಕಾರಿಗಳಿರಬೇಕು!' ಎಂದು ಕೆಮಿಸ್ಟನ ಹೆಂಡತಿ ತನಗೆ ತಾನೇ ಹೇಳಿಕೊಂಡಳು.

ಸ್ವಲ್ಪವೇ ಹೊತ್ತಿಗೆ ಅಧಿಕಾರಿಗಳಂತೆ ಬಿಳಿ ಜಾಕೆಟ್ ಧರಿಸಿದ ಎರಡು ಪುರುಷಾಕೃತಿಗಳು ಅವಳಿಗೆ ಕಾಣಿಸಿದವು. ಅವರಲ್ಲೊಬ್ಬ ದಷ್ಟಪುಷ್ಟನಾಗಿದ್ದು, ಉದ್ದವಾಗಿದ್ದರೆ ಇನ್ನೊಬ್ಬ ಸಣಕಲಾಗಿದ್ದ. ಅವರು ತಂತಿಗೋಡೆಯ ಪಕ್ಕದಲ್ಲಿ ಸಾವಕಾಶವಾಗಿ ನಡೆದು ಬರುತ್ತಾ ಗಟ್ಟಿಯಾಗಿ ಮಾತನಾಡಿಕೊಳ್ಳುತ್ತಿದ್ದರು. ಅಂಗಡಿಯ ಎದುರಿಗೆ ಬಂದಾಗ ಇಬ್ಬರ ಗತಿ ಮಂದವಾಯಿತು. ಈಗ ಅವರು ಕಿಟಕಿಯೆಡೆಗೆ ನೋಡಿದರು.

"ಕೆಮಿಸ್ಟನ ಅಂಗಡಿಯ ವಾಸನೆ ಇದ್ದಹಾಗಿದೆಯಲ್ಲಾ!" ಸಣಕಲು ವ್ಯಕ್ತಿ ಹೇಳಿದ. "ಹೌದೌದು, ಔಷಧಿ ಅಂಗಡಿಯೇ ಕಳೆದ ವಾರ ಇಲ್ಲಿಂದಲೇ ನಾನು ಔಡಲೆಣ್ಣೆ ಕೊಂಡುಕೊಂಡಿದ್ದೆ. ಇಲ್ಲಿಯ ಕೆಮಿಸ್ಟು ತುಂಬಾ ಕೋಪಿಷ್ಟ. ಕತ್ತೆಯ ದವಡೆಯಂತಿದ್ದಾನೆ."

"ಓಹ್.....!" ದಷ್ಟಪುಷ್ಟ ವ್ಯಕ್ತಿ ಮೆಲ್ಲನೆ ಹೇಳಿದ, "ಕೆಮಿಸ್ಟು ನಿದ್ರಿಸುತ್ತಿದ್ದಾನೆ. ಅವನ ಹೆಂಡ್ತಿಯೂ ನಿದ್ರಿಸಿದ್ದಾಳೆ. ಓಬ್ಸೋಯೋವ್, ನಿನಗೊಂದು ವಿಷಯ ಹೇಳ್ಲಾ? ಕೆಮಿಸ್ಟ್‌ನ ಹೆಂಡತಿ ತುಂಬಾ ಸುಂದರಿಯಾಗಿದ್ದಾಳೆ."

"ನಾನವಳನ್ನು ನೋಡಿದ್ದೇನೆ. ಅವಳನ್ನು ಕಲ್ಪಿಸಿಕೊಳ್ಳಬಲ್ಲೆ. ಡಾಕ್ಟರ್ ಹೇಳು, ಅವಳು ಕತ್ತೆಯ ದವಡೆಯಂತಿರುವ ಆತನನ್ನು ಪ್ರೀತಿಸಬಹುದೆ?"

"ಇಲ್ಲ. ಬಹುಶಃ ಅವಳು ಕೆಮಿಸ್ಟ್‌ನನ್ನು ಪ್ರೀತಿಸೋಲ್ಲ," ಡಾಕ್ಟರನ ಮಾತಿನಲ್ಲಿ ಕೆಮಿಸ್ಟ್‌ನ ಬಗ್ಗೆ ಸ್ವಲ್ಪ ದುಃಖವಿತ್ತು, "ಅವಳು ಖಂಡಿತವಾಗಿ ಅದೇ ಕಿಟಕಿಯ ಬಳಿ ಮಲಗಿರಬಹುದು." "ನೀನೇನು ಹೇಳ್ತೀಯಾ ಓಬ್ಸ್ತೋಯೋವ್? ಈ ಕೆಮಿಸ್ಟ್‌ಗೆ, ತನಗೆಷ್ಟು ಸುಂದರಿಯಾದ ಹೆಣ್ಣು ಸಿಕ್ಕಿದ್ದಾಳೆ ಎನ್ನುವುದೇ ಗೊತ್ತಿಲ್ಲ, ನಾನು ಈ ಬಗ್ಗೆ ನಿನ್ನಲ್ಲಿ ಬೆಟ್ ಕಟ್ತೇನಿ. ಸುಂದರಿಯಾದ ಹೆಣ್ಣು ಅಥವಾ ಕಾರ್ಬೋಲಿಕ್ ಆ್ಯಸಿಡ್‌ನ ಒಂದು ಬಾಟ್ಲಿ ಎರಡೂ ಒಂದೇ ಅವನಿಗೆ!"

"ಒಳಗೆ ಹೋಗಿ ಏನಾದ್ರು ಕೊಳ್ಳೋಣ. ಅಂದ್ರೆ ನಮಗೆ ಒಮ್ಮೆ ಅವಳ ದರ್ಶನಭಾಗ್ಯ ಲಭಿಸಬಹುದು......." ಓಬ್ಸ್ತೋಯೋವ್ ಅಂಗಡಿಯ ಹೊರಗೆ ನಿಂತ.

"ಏನ್ ಹೇಳ್ತಿದ್ದೀಯಾ ನೀನು, ಈ ಸರಿ ರಾತ್ರಿಯಲ್ಲಿ?"

"ಏನಾಯ್ತೀಗ? ಈ ನಡುರಾತ್ರಿಯಲ್ಲಿ ನಮ್ಮಂತಹ ಗಿರಾಕಿಗಳು ಬಂದರೆ ಅವರು ನಮಗೆ ಧನ್ಯವಾದಗಳನ್ನರ್ಪಿಸಬೇಕು...ನಡಿ, ಹೋಗೋಣ!"

"ಸರಿ!"

*** *** *** ***

ಕೆಮಿಸ್ಟ್‌ನ ಹೆಂಡತಿ ಪರದೆಯ ಹಿಂದೆ ನಿಂತು ಕಾಲಿಂಗ್ ಬೆಲ್‌ನ ತೀಕ್ಷ್ಣ ಸದ್ದನ್ನು ಆಲಿಸಿದಳು. ಅವಳು ಗೊರಕೆ ಹೊಡೆಯುತ್ತಾ ಕನಸು ಕಾಣುತ್ತಿದ್ದ ಪತಿಯೆಡೆಗೆ ನೋಡಿದಳು. ಅವನು ನಿದ್ರೆಯಲ್ಲಿ ಮುಗುಳ್ನಗುತ್ತಿದ್ದ. ಅವಳು ಕೂಡಲೇ ಮತ್ತೊಂದು ಉಡುಪು ಧರಿಸಿ, ಚಪ್ಪಲಿಗಳನ್ನು ಮೆಟ್ಟಿಕೊಂಡು ಅಂಗಡಿಗೆ ಓಡಿ ಬಂದಳು.

ದೀಪ ಹಾಕಿದಾಗ ಅವಳಿಗೆ ಗಾಜಿನ ಆ ಕಡೆ ಎರಡು ನೆರಳುಗಳು ಕಂಡವು. ಈಗ ಅವಳಿಗ ಬೇಸರ ದೂರವಾಗಿತ್ತು. ನಿದ್ರೆಯ ಬಯಕೆ ಅವಳಿಗಿರಲಿಲ್ಲ. ಆದರೆ ಅವಳ ಹೃದಯದ ಬಡಿತ ಹೆಚ್ಚಿತ್ತು. ಡಾಕ್ಟರ್ ಮತ್ತು ಓಬ್ಸ್ತೋಯೋವ್ ಇಬ್ಬರೂ ಅಂಗಡಿಯೊಳಗೆ ಬಂದಿದ್ದರು. ಡಾಕ್ಟರನ ಬೊಜ್ಜು ಹೊಟ್ಟೆ ಮತ್ತು ಅವನ ಗಡ್ಡ ಕೆಮಿಸ್ಟ್‌ನ ಹೆಂಡತಿಗೆ



ರುಚಿಸಲಿಲ್ಲ. ಅವನು ಅತ್ತ ಇತ್ತ ನೋಡಿದಾಗ ಅವನ ಜಾಕೆಟ್‌ನ ಮಧ್ಯಭಾಗ ತನ್ನ ಬಾಯಿ ತೆರೆದುಕೊಳ್ಳುತ್ತಿತ್ತು. ಮುಖದಲ್ಲಿ ಬೆವರು ಮೂಡುತ್ತಿತ್ತು. ಆದರೆ ಅವನೊಂದಿಗಿದ್ದ ಯುವಕ ಅಧಿಕಾರಿ ಗುಲಾಬಿ ವರ್ಣದವನಾಗಿದ್ದು ಕೊಂಬೆಯಂತೆ ಬಳುಕುತ್ತಿದ್ದ.

"ಏನು ಬೇಕಿತ್ತು ?" ಅವಳು ತನ್ನ ವಕ್ಷಸ್ಥಳದ ಬಟ್ಟೆಯನ್ನು ಸರಿಪಡಿಸಿಕೊಳ್ಳುತ್ತಾ ಅವರನ್ನೇ ಗಮನಿಸಿದಳು.

"ನಮಗೆ ಏಡಿಸ್ಟೇನು ಕೊಪೆಕ್‌ನ ಪೆಪ್ಪರ್‌ಮೆಂಟಿನ ಮಾತ್ರೆಗಳು ಸಿಗಬಹುದೆ ?"

ಕೆಮಿಸ್ಟ್‌ನ ಹೆಂಡತಿ ಮೆಲ್ಲನೆ ಮುಂದುವರಿದು ಒಂದು ಜಾಡಿಯನ್ನು ಕೆಳಗಿಟ್ಟು, ಅದರಿಂದ ಮಾತ್ರೆಗಳನ್ನು ತೆಗೆದು ತೂಕ ಮಾಡಲಾರಂಭಿಸಿದಳು. ಅವಳ ಇಬ್ಬರು ಗ್ರಾಹಕರು ಎವೆಯಿಕ್ಕದೆ ಅವಳನ್ನೇ ನೋಡುತ್ತಿದ್ದರು. ಡಾಕ್ಟರ್ ಸಾಕಿದ ದಪ್ಪ ಬೆಕ್ಕಿನಂತೆ ಕಣ್ಣುಗಳನ್ನು ಮುರುಟಿಕೊಂಡು ಅವಳನ್ನು ನೋಡುತ್ತಿದ್ದ. ಯುವಕ ಅಧಿಕಾರಿ ಓಬ್ಸ್‌ತೋಯೋವ್‌ನ

ಮುಖದಲ್ಲಿ ಗಾಂಭೀರ್ಯವಿತ್ತು.

"ಯಾವಳಾದರೂ ಹೆಂಗಸು ಔಷಧಿ ಅಂಗಡಿಯನ್ನು ನಡೆಸುವುದನ್ನು ನಾನಿವತ್ತೇ ನೋಡ್ತಿರೋದು," ಡಾಕ್ಟರ್ ಉಸುರಿದ.

"ಇದರಲ್ಲಿ ಅಂಥಾ ಆಶ್ಚರ್ಯವೇನೂ ಇಲ್ಲ." ನನ್ನ ಮನೆಯವರು ಯಾವ ಕೆಲಸಗಾರನನ್ನೂ ಇಟ್ಟುಕೊಳ್ಳುವುದಿಲ್ಲ. ನಾನೇ ಅವರಿಗೆ ಸಹಾಯಕಿ." ಕೆಮಿಸ್ಟ್‌ನ ಹೆಂಡತಿ ಓಬ್ಸ್‌ತೋಯೋವ್‌ನ ಗುಲಾಬಿ ಮುಖವನ್ನು ಓರೆಗಣ್ಣಿನಿಂದ ಗಮನಿಸುತ್ತಾ ಹೇಳಿದಳು.

"ಓಹ್! ನಿಮ್ಮ ಅಂಗಡಿ ಎಷ್ಟು ಚೆನ್ನಾಗಿದೆ! ಜಾಡಿಗಳ ವೈವಿಧ್ಯತೆ ವರ್ಣಿಸಲಸಾಧ್ಯ! ನಿಮ್ಮ ಸುತ್ತಮುತ್ತ ಇಷ್ಟೆಲ್ಲಾ ವಿಷ ಆವರಿಸಿದ್ದರೂ ನೀವು ಹೆದರುವುದಿಲ್ಲವಲ್ಲ!"

ಕೆಮಿಸ್ಟ್‌ನ ಹೆಂಡತಿ ಮಾತ್ರೆಗಳ ಪೊಟ್ಟಣ ಕಟ್ಟಿ ಅದನ್ನು ಡಾಕ್ಟರನ ಕೈಗೆ ಹಾಕಿದಳು. ಓಬ್ಸ್‌ತೋಯೋವ್ ಅವಳಿಗೆ ಹದಿನೈದು ಕೊಪೆಕ್ ಕೊಟ್ಟ. ಅರ್ಧ ನಿಮಿಷ ಮೌನ ಆವರಿಸಿತು. ಇಬ್ಬರು ಗ್ರಾಹಕರೂ ಪರಸ್ಪರ ನೋಡಿಕೊಂಡು ಬಾಗಿಲೆಡೆಗೆ ಹೆಜ್ಜೆ ಹಾಕಲಾರಂಭಿಸಿದರು.

"ನನಗೆ ಹತ್ತು ಕೊಪೆಕ್‌ನ ಸೋಡಾ ಕೊಡಿ," ಡಾಕ್ಟರ್ ಅವಳೆಡೆಗೆ ನೋಡಿದ. ಮತ್ತೊಮ್ಮೆ ಕೆಮಿಸ್ಟ್‌ನ ಹೆಂಡತಿ ಗೂಡಿನೆಡೆಗೆ ಮಂದಗತಿಯಲ್ಲಿ ಸಾಗಿದಳು.

"ನಿಮ್ಮ ಹತ್ರ ಬಹುಶಃ ಬಹುಶಃ..." ಓಬ್ಸ್‌ತೋಯೋವ್ ಪಿಸುಗುಟ್ಟಿದ, "ಅದೇನು ಹೇಳ್ತಾರೆ ಅದಕ್ಕೆ....ಒಂದು ತರಹದ ಕೃತ್ರಿಮ ಜಲ...ಸೋಡಾ ವಾಟರ್....ಸಿಗುತ್ತಾ!"

"ಹೂಂ, ಅದನ್ನೂ ನಾವಿಟ್ಟೀವಿ."

"ವಾಹ್-ವಾಹ್! ನೀವು ಹೆಣ್ಣಲ್ಲ, ವರ ಕೊಡುವ ಓರ್ವ ಅಪ್ಸರ. ನಮಗೆ ಮೂರ್‍ನಾಲ್ಕು ಬಾಟ್ಲಿ ಕೊಡಿ." ಕೆಮಿಸ್ಟನ ಹೆಂಡತಿ ಕೂಡೆ ಸೋಡಾ ಬಾಟ್ಲಿಗಳ ಪ್ಯಾಕ್ ಮಾಡಿಕೊಟ್ಟು ಬಾಗಿಲಹಿಂದೆ ಕತ್ತಲಲ್ಲಿ ಮರೆಯಾದಳು.

"ಒಳ್ಳೇ ದೋರೆ ಹಣ್ಣು!" ಡಾಕ್ಟರ್ ಕಣ್ಣು ಹೊಡೆದ. "ಇಂಥವಳು ಇನ್ನೊಬ್ಬು ಸಿಗೋದು ಕಷ್ಟ ಓಬ್ಸ್‌ತೋಯೋವ್! ನೀನು ಹುಡುಕ್ತಾ ಹುಡುಕ್ತಾ ಮೆಡರಿಶಾ ದ್ವೀಪಕ್ಕೆ ಹೋದರೂ ಸಾಧ್ಯವಿಲ್ಲ....ಏನ್ ಯೋಚ್ನೆ ಮಾಡ್ತಿದ್ದೀಯಾ? ಆದ್ರೆ ಎಚ್ಚರ! ಈ ಗೊರಕೆ ಸದ್ದು ಕೇಳ್ತಿದ್ದೀಯಲ್ಲ, ಅದು ಕೆಮಿಸ್ಟ್‌ನದು. ಅವನ ಹೆಂಡತಿ ಅಂಗಡಿ ನೋಡಿಕೊಳ್ತಿದ್ದಾಳೆ, ಅವನು ನಿದ್ರೆ ಮಾಡಿ ಖುಷಿಯಾಗಿದ್ದಾನೆ."

ಕೆಮಿಸ್ಟ್‌ನ ಹೆಂಡತಿ ಮರಳಿ ಬಂದು ಕೌಂಟರ್‌ನಲ್ಲಿ ಐದು ಸೋಡಾವಾಟರ್ ಬಾಟಲಿಗಳನ್ನು ಜೋಡಿಸಿಟ್ಟಳು. ಇದೀಗತಾನೇ ನೆಲಮಾಳಿಗೆಯಿಂದ ಬಂದಿದ್ದರಿಂದ ಅವಳು ಬೆವತಿದ್ದಳು. ಆಕೆ ಹೆದರಿದಂತೆಯೂ ಇತ್ತು.

"ಮೆಲ್ಲ...ಸೆ.....ಮೆಲ್ಲನೆ, ಸದ್ದಿನಿಂದ ನಿಮ್ಮ ಮನೆಯವರು ಎಚ್ಚರಗೊಳ್ತಾರೆ," ಅವಳು ಬೀಗದ ಕೀಯನ್ನು ಕೌಂಟರ್‌ಗೆ ಎಸೆದಾಗ ಓಬ್ಸ್ ತೋಯೋವ್ ಅಂದ.

"ಎಚ್ಚರಗೊಂಡರೆ ಏನಾಯ್ತು?"

"ಅವರು ಸಿಹಿ ನಿದ್ರೆ ಮಾಡ್ತಿದ್ದಾರೆ, ನಿಮ್ಮ ಕನಸು ಕಾಣುತ್ತಾ!"

"ಮತ್ತೊಂದು ವಿಷಯ. ಈ ಪತಿ ಮಹಾಶಯರು ಎಷ್ಟು ಬೋರ್ ಅಂದ್ರೆ ಇವರು ಯಾವಾಗ್ಲೂ ನಿದ್ರೆ ಮಾಡೋದೇ ಒಳ್ಳೆಯದು....ಸ್ವಲ್ಪ ಒಳ್ಳೇ ಕೆಂಪು ಮದ್ಯವಿದ್ದಿದ್ದರೆ, ಸೋಡಾವಾಟರ್ ಜೊತೆಗೆ ಒಳ್ಳೆ ಮಜವೆನಿಸುತ್ತಿತ್ತು," ಡಾಕ್ಟರ್ ಹೇಳಿದ.

"ನೀವು ಹೇಳೋದೇನು?" ಕೆಮಿಸ್ಟ್‌ನ ಹೆಂಡತಿ ನಕ್ಕಳು.

"ನಿಜವಾಗ್ಲೂ ಹೇಳ್ತಿದ್ದೀನಿ. ಮಜವೆನಿಸುತ್ತಿತ್ತು. ಆದ್ರೆ ಏನ್ ಮಾಡೋದು? ಕೆಮಿಸ್ಟ್‌ಗಳು ಅದನ್ನಿಡುವುದಿಲ್ಲ....ನೀವು ಔಷಧಿಯಂತೆಯೇ ಅದನ್ನಿಡ್ಬೇಕು. ನಿಮ್ಮ ಹತ್ರ

ಫ್ರೆಂಚಿನ ಒಳ್ಳೇ ಕೆಂಪು ಮದ್ಯ ಇದೆಯಾ ?"
"ಇದೆ."
"ಮತ್ತೆ, ಬೇಗ ತೆಗೇರಿ....ಸರ್ವ್ ಮಾಡಿ,"
"ಎಷ್ಟು ತೆಗೆದುಕೊಳ್ತೀರ ?"
"ಅಗತ್ಯವಿದ್ದಷ್ಟು. ಮೊದಲು ನಮ್ಮಿಬ್ಬರ ಗ್ಲಾಸುಗಳಿಗೆ ಒಂದೊಂದು ಔನ್ಸ್ ಸೋಡಾವಾಟರ್ ಜೊತೆಗೆ ಹಾಕಿ...ಆಮೇಲೆ ನೋಡಿಕೊಳ್ಳೋಣ....ಏನು ಓಬ್ಸ್‌ತೋಯೋವ್....! ಮೊದ್ಲು ಸೋಡಾದೊಂದಿಗೆ, ಆಮೇಲೆ....."

ಡಾಕ್ಟರ್ ಮತ್ತು ಓಬ್ಸ್‌ತೋಯೋವ್ ಕೌಂಟರ್‌ನಲ್ಲಿ ಕೂತರು. ಅವರು ತಮ್ಮ ಹ್ಯಾಟುಗಳನ್ನು ಕಳಚಿಟ್ಟು ಕೆಂಪು ಮದ್ಯವನ್ನು ಸೇವಿಸಲು ಪ್ರಾರಂಭಿಸಿದರು.

"ಮದ್ಯ ಸ್ವಲ್ಪ ಅಪಾಯದ್ದು. ಅದು ನರಕದ ಬಾಗಿಲನ್ನೂ ತೆರೆಯುತ್ತೆ. ಆದ್ರೆ ಯಾರಾದರೂ ವಿಶೇಷವಾಗಿ ಉಪಸ್ಥಿತರಿದ್ದಾಗ ಅದರ ಸ್ವಾದವೇ ಅಮೃತದಂತಾಗುತ್ತದೆ. ನೀವು ತುಂಬಾ ಸುಂದರಿಯಾಗಿದ್ದೀರಿ ದೇವಿಯವರೇ! ನಾನು ಮನಸ್ಸಿನಲ್ಲೆ ನಿಮ್ಮ ಕೈಯನ್ನು ಚುಂಬಿಸುವೆ."

"ನಾನದನ್ನು ನಿಜವಾಗಿಯೂ ಚುಂಬಿಸಲು ಏನನ್ನಾದರೂ ಕಳೆದುಕೊಳ್ಳಬಲ್ಲೆ-ನನ್ನ ಜೀವನವನ್ನೇ ಬೇಕಾದರೂ !" ಓಬ್ಸ್‌ತೋಯೋವ್ ಹುಚ್ಚನಂತಾಗಿದ್ದ.

"ಹೀಗೆಲ್ಲಾ ಮಾತಾಡಬೇಡಿ !" ಕೆಮಿಸ್ಟನ ಹೆಂಡತಿ ನಾಚುತ್ತಾ ಗಡುಸಾಗಿಯೇ ಹೇಳಿದಳು.

"ವಾಹ್, ಎಂಥಾ ಹಾವಭಾವ, ಏನು ವಯ್ಯಾರ !" ಡಾಕ್ಟರ್ ಮೆಲ್ಲನೆ ಮುಗುಳ್ನಗುತ್ತಾ ತನ್ನ ದಟ್ಟ ಹುಬ್ಬುಗಳ ಕೆಳಗಿನಿಂದ ತುಂಟ ದೃಷ್ಟಿಯನ್ನು ಕೆಮಿಸ್ಟ್‌ನ ಹೆಂಡತಿಯೆಡೆಗೆ ಹರಿಸಿದ, "ನಿಮ್ಮ ಈ ಕಣ್ಣುಗಳು ನಿಜವಾಗಿಯೂ ನನ್ನ ಮನಸ್ಸನ್ನು ಭೇದಿಸಿವೆ. ನೀವು ನನ್ನನ್ನು ಚೂರು ಚೂರು ಮಾಡಿಬಿಟ್ಟಿರಿ. ನಾವು ಆಘಾತಗೊಂಡುಬಿಟ್ಟೆವು."



ಇದು ಪೊಲೀಸರನ್ನು ಗುರ್ತಿಸುವ ನಾಯಿ....!

ಕೆಮಿಸ್ಟ್‌ನ ಹೆಂಡತಿ ಅವರ ಕೆಂಪಗಾದ ಮುಖಗಳನ್ನು ನೋಡಿದಳು. ಅವರ ಇಂಪಾದ ಮಾತುಗಳನ್ನು ಆಲಿಸಿದಳು. ಅವಳಿಗೆ ಸ್ಫೂರ್ತಿ ಬಂತು. ಅವಳಿಗೆಷ್ಟು ಖುಷಿಯಾಗಿತ್ತು ! ಈಗ ಅವಳು ಅವರ ಮಾತುಕತೆಯಲ್ಲಿ ಪಾಲುಗೊಂಡಳು, ವಿನೋದವಾಡಿದಳು, ಕಡೆಗೆ ಮೂರ್‍ನಾಲ್ಕು ಔನ್ಸ್ ಮದ್ಯವನ್ನೂ ಸೇವಿಸಿದಳು.

"ನಿಮ್ಮಂತಹ ಅಧಿಕಾರಿಗಳು ನಗರಕ್ಕೆ ಬರ್‍ತಿರಬೇಕು. ಇಲ್ಲದಿದ್ರೆ ಇಲ್ಲಿ ಮಂಕುಕವಿದ ವಾತಾವರಣವಿರುತ್ತೆ. ನಾನಂತೂ ಬೇಸರದಿಂದ ಸಾಯ್ತಾ ಇದ್ದೀನಿ," ಕೆಮಿಸ್ಟ್‌ನ ಹೆಂಡತಿ ದೀರ್ಘವಾಗಿ ನಿಟ್ಟುಸಿರುಬಿಟ್ಟಳು.

"ಹೀಗಾಗುತ್ತೆ," ಡಾಕ್ಟರ್‌ಗೆ ಆಶ್ಚರ್ಯವಾಯಿತು, "ದೇವರ ಅದ್ಭುತಗಳಲ್ಲಿ ಇದೂ ಒಂದು....ಈಗಿಲ್ಲಿ, ಯೋಚ್ನೆ ಮಾಡೋದಕ್ಕೇ ಸಾಧ್ಯವಿಲ್ಲ".

".......ಸರಿ, ನಾವಿನ್ನು ಬರ್‍ತೀವಿ. ನಿಮ್ಮನ್ನು ಭೇಟಿಯಾಗಿ ನನಗಂತೂ ತುಂಬಾ ಸಂತೋಷವಾಗಿದೆ ! ನಮ್ಮದುಡ್ಡು ಎಷ್ಟಾಯ್ತು ?"

ಕೆಮಿಸ್ಟ್‌ನ ಹೆಂಡತಿ ಭಾವಣಿಯೆಡೆಗೆ ನೋಡುತ್ತಾ ಲೆಕ್ಕ ಮಾಡಲಾರಂಭಿಸಿದಳು. ಅವಳು ಮಾತನಾಡಲಿಲ್ಲ, ಅವಳ ತುಟಿಗಳಷ್ಟೇ ಕಂಪಿಸುತ್ತಿದ್ದವು.

"ಹನ್ನೆರಡು ರೂಬಲ್ ಮತ್ತು ನಲವತ್ತೆಂಟು ಕೋಪೆಕ್." ಓಬ್ಸ್ತೋಯೋವ್ ತನ್ನ ಜೇಬಿನಿಂದ ದಪ್ಪ ಪರ್ಸ್ ಹೊರತೆಗೆದು ಹಣ ಕೊಟ್ಟ. "ನಿಮ್ಮ ಮನೆಯವರು ಸಿಹಿ ನಿದ್ರೆಯಲ್ಲಿದ್ದಾರೆ, ಕನಸು ಕಾಣುತ್ತಾ...." ಬೀಳ್ಕೊಂಡು ಹೋಗುತ್ತಾ ಅವಳ ಕೈಯನ್ನು ಮೃದುವಾಗಿ ಒತ್ತಿ ಮುಗುಳ್ನಕ್ಕ.

"ನನಗೆ ಮೂರ್ಖತನ ಹಿಡಿಸೋಲ್ಲ."

"ಮೂರ್ಖತನ? ಇದರಲ್ಲೇನೂ ಮೂರ್ಖತನವಿಲ್ಲ... ಯಾವನು ತಮ್ಮ ಯೌವನಾಸ್ಥೆದಲ್ಲಿಯೂ ಯುವಕನಾಗಿದ್ದನೋ ಅವನೇ ಅದೃಷ್ಟವಂತ ಅಂತ ಶೇಕ್ಸ್‌ಪಿಯರ್ ಹೇಳಿದ್ದಾನೆ."

"ಅಯ್ಯೋ, ನನ್ನ ಕೈ ಬಿಡಿ!"

ಕಡೆಗೆ ಕೈ ಚುಂಬಿಸುವ ಒಪ್ಪಿಗೆ ಪಡೆದೇ ಇಬ್ಬರೂ ಅಂಗಡಿಯಿಂದ ಹೊರ ಬಂದರು. ಆದರೆ ಅವರು ವ್ಯಗ್ರತೆಯಲ್ಲಿಯೇ ಇದ್ದರು.

*** *** ***

ಈ ಮಧ್ಯೆ ಕೆಮಿಸ್ಟ್‌ನ ಹೆಂಡತಿ ಓಡಿ ಹೋಗಿ ಕಿಟಕಿಯ ಬಳಿ ಕೂತಳು. ಅಲ್ಲಿಂದಲೇ ಅವಳು ಡಾಕ್ಟರ್ ಮತ್ತು ಓಬ್ಸ್ತೋಯೋವ್, ಸುಮಾರು ಹತ್ತಿಪ್ಪತ್ತು ಹೆಜ್ಜೆ ಹೋಗಿ, ಮತ್ತೆ ನಿಂತು, ತಮ್ಮ ತಮ್ಮಲ್ಲೇ ಪಿಸುಗುಟ್ಟುತ್ತಿರುವುದನ್ನು ನೋಡಿದಳು. ಅವರೇನು ಮಾಡುತ್ತಿರಬಹುದು? ಅಂದುಕೊಂಡಳು. ಅವಳೆದೆ ಕಂಪಿಸುತ್ತಿತ್ತು. ಆದರೆ ಅವಳಿಗೆ ಹೀಗೇಕಾಗುತ್ತಿದೆಯೆಂದು ಗೊತ್ತಾಗುತ್ತಿರಲಿಲ್ಲ.

ಸುಮಾರು ಐದು ನಿಮಿಷಗಳ ನಂತರ ಡಾಕ್ಟರ್ ಹೊರಟುಹೋದ. ಓಬ್ಸ್ತೋಯೋವ್ ಹಿಂದಕ್ಕೆ ಹೊರಳಿದ. ಈಗ ಅವನು ಅಂಗಡಿಯೆಡೆಗೆ ಬರಲಾರಂಭಿಸಿದ. ಮೂರುನಾಲ್ಕು ಬಾರಿ ಅಂಗಡಿಯವರೆಗೆ ಬಂದು ಮರಳಿ ಹೋದ. ಮತ್ತೆ ಬಂದು ಬಾಗಿಲ ಬಳಿ ನಿಂತ. ಕೊನೆಗೆ ಕಾಲಿಂಗ್ ಬೆಲ್ ಒತ್ತಿದ.

"ಏನು! ಯಾರು ಅದು?" ಕೆಮಿಸ್ಟನ ಧ್ವನಿ ಕಿಟಕಿಯ ಬಳಿ ಕುಳಿತ ಅವನ ಹೆಂಡತಿಯನ್ನು ದಿಗಿಲುಗೊಳಿಸಿತು. "ಗಂಟೆ ಒಂದೇಸವನೆ ಬಾರಿಸುತ್ತಿದೆ, ನಿನಗೆ ಕೇಳಿಸುತ್ತಲೇ ಇಲ್ಲವಲ್ಲ? ಏನು ಯೋಚನೆ ಮಾಡ್ತಿದ್ದೀಯಾ?" ಅನ್ನುತ್ತಾ ಅವನು ಎದ್ದು, ಗೌನ್ ಧರಿಸಿ, ನಿದ್ರೆಯ ಮಂಪರಿನಲ್ಲಿ ಓಲಾಡುತ್ತಾ ಅಂಗಡಿಗೆ ಬಂದ.

"ನಿಮಗೇನು ಬೇಕು?" ಅವನು ಓಬ್ಸ್ತೋಯೋವ್‌ನನ್ನೇ ತದೇಕ ದೃಷ್ಟಿಯಿಂದ ನೋಡುತ್ತಾ ಕೇಳಿದ. ನನಗೆ....ನನಗೆ...ಹದಿನೈದು ಕೊಪೆಕ್‌ನ ಪೆಪ್ಪರ್‌ಮೆಂಟ್ ಮಾತ್ರೆಗಳನ್ನು ಕೊಡಿ!"

ಕೆಮಿಸ್ಟ್ ಜೋರಾಗಿ ಆಕಳಿಸಿ ಮೈಮುರಿಯುತ್ತಾ ಗೂಡಿನಿಂದ ಜಾಡಿಯನ್ನು ಕೆಳಗಿಟ್ಟ. ಇನ್ನೂ ನಿದ್ದೆಯ ಮಂಪರಿನಲ್ಲೇ ಇದ್ದ ಆತನ ಕಾಲುಗಳು ಕಂಪಿಸುತ್ತಿದ್ದವು. ಕೌಂಟರ್‌ಗೆ ಹೇಗೋ ಒರಗಿಕೊಂಡು ಮಾತ್ರೆಗಳನ್ನು ತೆಗೆಯಲಾರಂಭಿಸಿದ.

ಕೆಮಿಸ್ಟ್‌ನ ಹೆಂಡತಿ ಓಬ್ಸ್ತೋಯೋವ್ ಅಂಗಡಿಯಿಂದ ಹೊರಟು, ಪೆಪ್ಪರ್‌ಮೆಂಟಿನ ಪೊಟ್ಟಣವನ್ನು ಧೂಳಿಗೆ ಎಸೆದಿದ್ದನ್ನು ನೋಡಿದಳು. "ಅಯ್ಯೋ! ನಾನು ತುಂಬಾ ದುರಾದೃಷ್ಟೆ" ಕೆಮಿಸ್ಟನ ಹೆಂಡತಿಯ ಬಾಯಿಂದ ನಿಟ್ಟುಸಿರೊಂದು ತಂತಾನೆ ಹೊರಬಂತು. ಇದ್ದಕ್ಕಿದ್ದಂತೆಯೇ ಕಣ್ಣೀರು ಒಸರಿ ಗಲ್ಲಗಳು ಒದ್ದೆಯಾದವು.

"ನಾನು ಹದಿನೈದು ಕೊಪೆಕ್‌ಅನ್ನು ಕೌಂಟರಿನಲ್ಲಿಯೇ ಮರೆತು ಬಂದಿದ್ದೇನೆ. ಅದನ್ನು ಪೆಟ್ಟಿಗೆಯಲ್ಲಿಡು!" ಕೆಮಿಸ್ಟ್ ತನ್ನ ಹೆಂಡತಿಗೆ ಆದೇಶಿಸಿ, ಒಳಗೆ ಹೋಗಿ, ಹಾಸಿಗೆಯಲ್ಲಿ ಮಲಗಿ, ಕಂಬಳಿಯನ್ನು ಹೊದ್ದುಕೊಂಡು ಮತ್ತೆ ಗಡದ್ದಾಗಿ ನಿದ್ದೆ ಮಾಡತೊಡಗಿದ.

●



# ಹೀಗೊಂದು ಪುಕ್ಕಟೆ ನಿಧಿ ಪ್ರಸಂಗ

* ಮೈಸೂರು ಶ್ರೀಕಂಠಸ್ವಾಮಿ

ನನ್ನ ಮಗಳ ನಿಮಿತ್ತದಿಂದ ನನಗೆ ಅಮೆರಿಕದಲ್ಲಿನ ಕ್ಯಾಲಿಫೋರ್ನಿಯಾ ನೋಡುವ ಸಂದರ್ಭ ಒದಗಿಬಂತು. ಅಲ್ಲಿನ ಬದುಕನ್ನು ನೋಡಿ ನನಗೆ ಮೋಜೆನಿಸುತ್ತಿತ್ತು. ಅದರಲ್ಲಿಯೂ 'ಪುಕ್ಕಟೆ' ಎಂಬ ನಾಮಫಲಕವನ್ನು ಹೊತ್ತು ರಸ್ತೆಯ ಬದಿಯಲ್ಲಿ ಇರುತ್ತಿದ್ದ ಸೋಫಾಗಳು, ಸೈಕಲ್, ರೇಡಿಯೋಗಳನ್ನು ಕಂಡಾಗ ಬಹಳೇ ಮೋಜೆನಿಸುತ್ತಿತ್ತು. ಏಕೆಂದರೆ ಭಾರತದಲ್ಲಿ ಸಣ್ಣ ಕಳ್ಳತನ ಮಾಡುವವರು ಬಚ್ಚಲಿನ ಮುಚ್ಚಳಗಳನ್ನೋ ಪ್ಲಾಸ್ಟಿಕ್ ಬಕೆಟ್ಟುಗಳನ್ನೋ ಕದ್ದುಕೊಂಡು ಹೋದಾಗ, 'ಅಯ್ಯೋ ಹೋಯಿತೇ!' ಎಂದುಕೊಳ್ಳುತ್ತಿದ್ದೆವು. ಆದರೆ ಇಲ್ಲಿ ಭಾರತೀಯರ ದೃಷ್ಟಿಯಲ್ಲಿ ಗುಜರಿಗೆ ಹಾಕಿದರೂ ಬೆಲೆಬರುವಂತಹ ಅನೇಕ ವಸ್ತುಗಳನ್ನು 'ಪುಕ್ಕಟೆ' ಎಂದರೂ ಯಾರೂ ತೆಗೆದುಕೊಂಡು ಹೋಗದೆ ಅವುಗಳು ಬೆಳಗಿನಿಂದ ಸಂಜೆಯ ವರೆಗೆ ಬಿಸಿಲು, ಗಾಳಿ, ಒಂದೊಂದು ವೇಳೆ ಮಳೆಯನ್ನೂ ಸಹ

ಅನುಭವಿಸಿ, ಕೊನೆಗೊಮ್ಮೆ ಕಸಭಕ್ಷಕ ಭೂತ ವಾಹನಗಳ ಬಾಯನ್ನು ಸೇರುವುದನ್ನು ನೋಡಿ ಸೋಜಿಗವೂ ಅನಿಸುತ್ತಿತ್ತು ಹಾಗೂ ಕನಿಕರವೂ ಆಗುತ್ತಿತ್ತು. ಈ ದೇಶಕ್ಕೆ ಬಂದಾಗಿ ನಿಂದ ನಮ್ಮ ಮನೆಯ ಕಸವನ್ನು ಹೊರಕ್ಕೆ ಹಾಕುವ ಕೆಲಸ, ಮಗಳ ಮನೆ ಸ್ವಚ್ಛವಾಗಿರ ಲೆಂಬ ಅಭಿಮಾನದಿಂದಲೋ ಅಥವಾ ಮಡದಿ,"ಸುಮ್ಮನೆ ಕುಳಿತು ಕಾಲಕಳೆಯುವಿ ರಲ್ಲ; ಈ ಕಸವನ್ನು ತೊಟ್ಟಿಯಲ್ಲಿ ಹಾಕಿಬರ ಬಾರದೆ" ಎನ್ನುವಳು ಎಂದೋ ನಾನಾಗಿಯೇ ರೂಢಿಸಿಕೊಂಡ ಪ್ರತಿದಿನದ ಕರ್ತವ್ಯವಾ ಗಿತ್ತು.

ಕಸವನ್ನು ತೊಟ್ಟಿಯಲ್ಲಿ ಹಾಕಿ ಬರುವುದ ರಲ್ಲಿಯೂ ನನಗೆ ಒಂದು ರೀತಿಯ ಮಜ ಸಿಗುತ್ತಿತ್ತು. ನಾವಿದ್ದುದು ಸುಮಾರು ಅರ ವತ್ತು ಅಪಾರ್ಟಮೆಂಟ್‌ಗಳಿದ್ದ ಸಂಕೀರ್ಣದ ಲ್ಲಿನ ಒಂದು ಅಪಾರ್ಟಮೆಂಟ್‌ನಲ್ಲಿ. ಗಂಡ ಹೆಂಡಿರಂತೆ ಎರಡು ಬೃಹದಾಕಾರದ ತೊಟ್ಟಿ ಗಳು, ಅವುಗಳ ಪಕ್ಕದಲ್ಲಿಯೇ ತುಂಬಿದ ಸಂಸಾರದ ಮಕ್ಕಳಂತೆ ಸಣ್ಣ ಸಣ್ಣ ತೊಟ್ಟಿ ಗಳು-ಪ್ಲಾಸ್ಟಿಕ್, ಕಾಗದ, ಗಾಜು ಹಾಗೂ ತರಕಾರಿಸಿಪ್ಪೆ ಕಸಗಳನ್ನು ಪ್ರತ್ಯೇಕ ಪ್ರತ್ಯೇಕ ವಾಗಿ ಹಾಕಲು. ಹೀಗೆ ಅಷ್ಟೊಂದು ಮನೆಗಳ ಕಸ ತುಂಬಿಕೊಳ್ಳಲು ತೊಟ್ಟಿಗಳ ಸಂಕೀ ರ್ಣವೇ ಇತ್ತು. ಆ ಗೃಹ ಸಂಕೀರ್ಣದಲ್ಲಿ ಉತ್ಪತ್ತಿಯಾದ ಕಸವನ್ನು ತೊಟ್ಟಿಗಳಲ್ಲಿ ಹಾಕಿ ದರೆ ಬೇಡದ ವಸ್ತುಗಳನ್ನು ತೊಟ್ಟಿಗಳ ಬದಿ ಯಲ್ಲಿ 'ಯಾರಾದರೂ ತೆಗೆದುಕೊಂಡು ಹೋಗಲಿ' ಎಂದು ಇಟ್ಟು ಹೋಗುತ್ತಿದ್ದರು. ಹೀಗೆ ಇಟ್ಟು-ಬಿಟ್ಟು ಹೋದ ವಸ್ತುಗಳಲ್ಲಿ ಕೆಲವು ವೇಳೆ ಟೇಬಲ್ ಲ್ಯಾಂಪುಗಳು, ರೇಡಿ ಯೋಗಳು, ಸೈಕಲ್‌ಗಳು, ಪ್ರಯಾಣಕ್ಕೆ ಅನು ಕೂಲವಾಗುವಂತಹ ಪೆಟ್ಟಿಗೆಗಳು ಇತ್ಯಾದಿ ಅನೇಕ ವಸ್ತುಗಳ ಇರುತ್ತಿದ್ದವು. ಹಾಗೆ ಇಟ್ಟು-ಬಿಟ್ಟು ಹೋದ ವಸ್ತುಗಳು ಯಾರ ಮನಸ್ಸನ್ನಾ ದರೂ ಆಕರ್ಷಿಸಿದರೆ ಅವು ಅವರ ಮನೆ ಯನ್ನು ಸೇರುತ್ತಿದ್ದವು. ಇಲ್ಲದಿದ್ದರೆ ವಾರ ಕ್ಕೊಮ್ಮೆ ಬರುತ್ತಿದ್ದ ಕಸಬಕಾಸುರನ ಹೊಟ್ಟೆ ಯನ್ನು ಸೇರುತ್ತಿದ್ದವು.

ಭಾರತದಿಂದ ಬಂದಿದ್ದ ನನಗೆ ಈ ಬಿಸಾಡಿದ ವಸ್ತುಗಳನ್ನು ನೋಡುವುದೇ ಮೋಜಾಗಿತ್ತು. ನಮ್ಮ ಮನೆಯ ಕಸವನ್ನು ಎಸೆದು ಹಿಂದಿರುಗಿ ಬಂದು ನನ್ನ ಮಡದಿಗೆ ವರದಿಯನ್ನು ಒಪ್ಪಿಸುತ್ತಿದ್ದೆ- "ನೋಡೇ, ಈ ದಿನ ಮಕ್ಕಳ ಸೈಕಲ್ಲನ್ನು ಎಸೆದಿದ್ದರು, ಈ ದಿನ ರೇಡಿಯೋ ಎಸೆದಿದ್ದರು, ಈ ದಿನ ಚೆನ್ನಾದ ಸೂಟ್‌ಕೇಸನ್ನು ಎಸೆದಿದ್ದರು," ಹೀಗೆ. ಅವಳು ಆಶ್ಚರ್ಯದಿಂದ "ಹೌದಾ!" ಎನ್ನುತ್ತಿದ್ದಳು. ಆದರೆ ನನ್ನ ಮಗಳಿಗಾಗಲಿ ಅಥವಾ ಅಳಿಯನಿ ಗಾಗಲಿ ಈ ವಿಷಯವನ್ನು ಹೇಳಿದರೆ ಅವರೆಲ್ಲಿ "ನಿಮಗೇಕೆ ಈ ಕಸಹುಡುಕುವ ಕೆಲಸ ?" ಎನ್ನುವರೋ ಎಂಬ ಭಯ.

ಒಂದು ದಿನ ಕಸಎಸೆಯಲು ಹೋದಾಗ ಅಲ್ಲಿ ಒಂದು ರಟ್ಟಿನ ಪೆಟ್ಟಿಗೆ ಕಣ್ಣಿಗೆ ಬಿತ್ತು. ಇಣುಕಿ ನೋಡಿದೆ. ಅದರ ತುಂಬಾ ಸಿ.ಡಿ. ಕ್ಯಾಸೆಟ್‌ಗಳು ತುಂಬಿದ್ದವು. ಮೇಲಿದ್ದ ಕ್ಯಾಸೆ

> "ನನಗೆ ನಿಧಿ ಸಿಕ್ಕಂತಾಯಿತು. ಮನಸ್ಸು ತಡೆಯಲಿಲ್ಲ. ಆಸೆ ಮನಸ್ಸ ನ್ನೆಲ್ಲಾ ಆವರಿಸಿ ಕೆಟ್ಟ ಯೋಚನೆಗೆ ಎಡೆಗೊಟ್ಟಿತು. ಆದರೆ ಆಸೆಯ ಬೆಲೂನ್ ಒಡೆಯಲು ತಡವಾಗಲಿಲ್ಲ......"

ಟ್ಟಿನ ಮೇಲೆ 'ಜುರಾಸ್ಸಿಕ್ ಪಾರ್ಕ್' ಎಂದಿತ್ತು. ನನಗೆ ನಿಧಿ ಸಿಕ್ಕಂತಾಯಿತು. ಮನಸ್ಸು ತಡೆಯಲಿಲ್ಲ. ಆಸೆ ಮನಸ್ಸನ್ನೆಲ್ಲಾ ಆವರಿಸಿ ಕೆಟ್ಟ ಯೋಚನೆಗೆ ಎಡೆಗೊಟ್ಟಿತು. ಈ ಕ್ಯಾಸೆಟ್‌ಗಳನ್ನು ತೆಗೆದುಕೊಂಡು ಹೋಗಿ ನನ್ನ ಮಗಳು- ಅಳಿಯಂದಿರ ಕಣ್ಣಿಗೆ ಬೀಳದಹಾಗೆ ಪೆಟ್ಟಿಗೆಗಳನ್ನಿಟ್ಟ ಮೂಲೆಗೆ ಸೇರಿಸಿ ಭಾರತಕ್ಕೆ ಕೊಂಡೊಯ್ಯಬಹುದು ಎನ್ನಿಸಿತು.

ಕ್ಯಾಸೆಟ್‌ಗಳನ್ನು ಈ ಜಾಗದಿಂದ ತೆಗೆದುಕೊಂಡು ಹೋಗುವಾಗ ಹತ್ತಿರದ ಅಪಾರ್ಟ್‌ಮೆಂಟ್‌ನವರು ಯಾರಾದರೂ ನೋಡಿದರೆ ? ನೋಡಿ, ಇನ್ನೊಬ್ಬರು ಬೀಸಾಡಿದ ವಸ್ತುಗಳನ್ನು ಈ ಮನೆಯವರು ತಮ್ಮ ಮನೆಗೆ ಸೇರಿಸಿಕೊಳ್ಳುತ್ತಾರೆ; ಅವರಿಗೆ ಕ್ಯಾಸೆಟ್‌ಗಳನ್ನು ಕೊಳ್ಳುವಷ್ಟೂ ಶಕ್ತಿ ಇಲ್ಲ ಎಂದು ಕೊಂಡರೆ ? ಇಂತಹ ಅವಮಾನವನ್ನು ಲವಲೇಶದಷ್ಟೂ ಈ ವಿಷಯ ತಿಳಿಯದ ನನ್ನ ಅಳಿಯ-ಮಗಳಿಗೆ ಅಂಟಿಸುವುದು ಸರಿಯೆ ? ಎಂದು ಮನಸ್ಸಿನಲ್ಲಿ ತುಮುಲವೇ ಎದ್ದಿತಾದರೂ ಕೊನೆಗೆ ಆಸೆಯೇ ಗೆದ್ದಿತು.

ಆ ಸಿ.ಡಿ. ಕ್ಯಾಸೆಟ್ ಇದ್ದ ಪೆಟ್ಟಿಗೆಯನ್ನು ಮನೆಗೆ ತೆಗೆದುಕೊಂಡು ಹೋದೆ. ನನ್ನ ಹೆಂಡತಿಯ ಧ್ವನಿ ಮೊದಲೇ ದೊಡ್ಡದು. ಅಂತಹುದರಲ್ಲಿ ಏನಾದರೂ ವಿಶೇಷ ಕಂಡಾಗ ಕೇಳಬೇಕೆ ? ಅವಳು ನನ್ನನ್ನು ನೋಡಿ ಮನೆಯ ಬಾಗಿಲಲ್ಲೇ, "ಇದೇನ್ರಿ ಇದು ? ಇಷ್ಟನ್ನು ಎಲ್ಲಿಂದ ತಂದಿರಿ ?" ಎಂದೇಬಿಟ್ಟಳು ದೊಡ್ಡ ಧ್ವನಿಯಿಂದ. "ಶ್..... ಒಳಗೆ ಬಾ, ಎಲ್ಲವನ್ನೂ ಹೇಳುತ್ತೇನೆ," ಎಂದು ಬಾಗಿಲನ್ನು ತಳ್ಳಿ ಅಳಿಯ-ಮಗಳು ಆಫೀಸಿಗೆ ಹೋಗಿದ್ದರೂ ಆಕಸ್ಮಾತ್ತಾಗಿ ಬಂದು ಬಿಟ್ಟಾರೆಂಬ ಭಯದಿಂದ ಅಗಳಿ ಹಾಕಿ ಬಾಗಿಲನ್ನು ಭದ್ರಪಡಿಸಿ, ನನ್ನ ಹೆಂಡತಿಯನ್ನು ಮುಂದೆ ಕೂರಿಸಿಕೊಂಡು, ಒಂದೊಂದಾಗಿ ಕ್ಯಾಸೆಟ್ ಪೆಟ್ಟಿಗೆಯನ್ನು ತೆರೆದು ನೋಡಿದೆ.

ನನ್ನ ಆಸೆಯ ಬೆಲೂನ್ 'ಭಡ್' ಎಂದು ಒಡೆಯಿತು. ಎಲ್ಲಾ ಕ್ಯಾಸೆಟ್‌ಗಳೂ ಖಾಲಿ- ಮೇಲಿನ ರಕ್ಷಾಕವಚಗಳು ಮಾತ್ರ ಪೆಟ್ಟಿಗೆಯನ್ನು ತುಂಬಿದ್ದವು. ಅಂದು ಏಪ್ರಿಲ್ ಒಂದನೇ ತಾರೀಖಲ್ಲದಿದ್ದರೂ ನಾನು ಮೋಸಹೋಗಿದ್ದೆ. ಸಪ್ಪೆ ಮೋರೆಯಿಂದ ಯಾವ ಮಾತನ್ನೂ ಆಡದೆ ಆ ಪೆಟ್ಟಿಗೆಯನ್ನು ತೆಗೆದುಕೊಂಡು ಹೋಗಿ ಅದು ಇದ್ದ ಸ್ಥಳದಲ್ಲೇ ಇಟ್ಟು ಬಂದೆ. ಬಂದವನೆ ಹೆಂಡತಿಯನ್ನು ಎಚ್ಚರಿಸಿದೆ, "ಈ ವಿಷಯ ಗುಟ್ಟಾಗಿ ಇರಲಿ, ಯಾರಿಗೂ ಹೇಳಬೇಡ," ಎಂದು. ಹೀಗೆ ನಾವಿಬ್ಬರೂ ಮುಚ್ಚಿಟ್ಟಿದ್ದ ಗುಟ್ಟನ್ನು ಈಗ ಬಿಚ್ಚಿಟ್ಟಿದ್ದೇನೆ-ಅನುಭವವನ್ನು ಹಂಚಿಕೊಳ್ಳುವ ನಿಮಿತ್ತದಿಂದ. ●

## ಐನ್‌ಸ್ಟೈನರೂ ನೀಗ್ರೋ ಹುಡುಗನೂ

ಒಮ್ಮೆ ಅಲ್ಬರ್ಟ್ ಐನ್‌ಸ್ಟೈನರು ಒಬ್ಬ ನೀಗ್ರೋ ಬಾಲಕನನ್ನು ಕರೆದು, "ನೀನು ಮುಖವನ್ನು ಚೆನ್ನಾಗಿ ತೊಳೆದುಕೊಂಡು ಬಂದರೆ ನಿನಗೆ ಐದು ಸೆಂಟ್ ಬಹುಮಾನ ಕೊಡುತ್ತೇನೆ," ಎಂದರು. ಅವನು ಮುಖವನ್ನು ತೊಳೆದುಕೊಂಡು ಬಂದಮೇಲೆ ಅವನಿಗೆ ಐದು ಸೆಂಟ್ ಕೊಡುತ್ತಾ, "ಈ ದುಡ್ಡಿನಿಂದ ಏನು ಮಾಡುತ್ತೀ ?" ಎಂದು ಕೇಳಿದರು. ಅದಕ್ಕೆ ಆ ನೀಗ್ರೋ ಹುಡುಗ, "ನೀವು ಚೆನ್ನಾಗಿ ಹೇರ್‌ಕಟ್ ಮಾಡಿಸಿಕೊಂಡರೆ ಈ ದುಡ್ಡನ್ನು ನಿಮಗೇ ವಾಪಸು ಕೊಡುತ್ತೇನೆ," ಎಂದ.

★ಡಿ. ಗುಂಡೂರಾವ್

# ಮಾತು ಮಾಣಿಕ್ಯ ೪೦

## ಬುದ್ಧಿಯುಳ್ಳವ ಮಾನವ

ಸುತ್ತಲೂ ಹರಡಿರುವ ಹತ್ತಾರು ವಿಷಯಗಳ ನಡುವೆ ನಮ್ಮ ಅನುದಿನದ ಬದುಕು. ಅನುಗಾಲವೂ ಅವುಗಳೊಂದಿಗೆ ನಮ್ಮ ಕಣ್ಣು, ಕಿವಿಗಳಂತಹ ಇಂದ್ರಿಯಗಳ ಸಂಪರ್ಕ. ಅದರಿಂದ ಜನಿಸುವ ಅನುಭವವೆಂಬ ಅಭಿನವ ಶಿಶುವು ಪವಡಿಸುವ ತಾಣವೆಂದರೆ ಮನವೆಂಬ ಮಮತೆಯ ಮಡಿಲು; ಸತತ ತೂಗುತ್ತಿರುವ ತೊಟ್ಟಿಲು ಎಂದರೂ ಸರಿಯೆ. ಈ ಮಗುವಿನ ಪೂರ್ವಾಪರವನ್ನರಿತು ಅದರ ಯುಕ್ತಾಯುಕ್ತತೆಯನ್ನು ಅಳೆಯುವ ಕಾರ್ಯ ಬುದ್ಧಿಯದು. ಒಂದು ನಿರ್ಧಾರಕ್ಕೆ ಬಂದಾಗಲೆ ಈ ಬುದ್ಧಿಗೆ ಅರ್ಥಾತ್ ಧೀಶಕ್ತಿಗೆ ಸಮಾಧಾನ.

"ಬುದ್ಧಿರ್ನಾಮ ನಿಶ್ಚಯಾತ್ಮಿಕಾಂತಃಕರಣವೃತ್ತಿಃ" ಸಂಕಲ್ಪ ವಿಕಲ್ಪಗೈಯುವುದು ಮನದ ವ್ಯಾಪಾರವಾದರೆ ಒಂದು ನಿಶ್ಚಯದ ಹಂತಕ್ಕೆ ತಲುಪಲು ನೆರವಾಗುವುದು ಬುದ್ಧಿಯ ಸ್ವಭಾವ. 'ಬುಧ್' ಎಂಬ ಧಾತುವಿನಿಂದ ಹೊಮ್ಮುವ 'ಬುದ್ಧಿ' ಎಂಬೀ ಪದದ ಪ್ರಯೋಗ ಜ್ಞಾನ, ಯೋಚನೆ, ವಿವೇಕ, ವಿವೇಚನೆ ಮುಂತಾದ ಅರ್ಥಗಳಲ್ಲಿ. ಅದು ಕೈಕೊಳ್ಳುವ ವಿವಿಧ ಪಾತ್ರಗಳಿಂದಾಗಿ "ಬುದ್ಧಿರ್ಮನೀಷಾ ಧಿಷಣಾ, ಧೀಃ ಪ್ರಜ್ಞಾ, ಶೇಮುಷೀಮತಿಃ" ಎಂಬ ಪರ್ಯಾಯ ಪದಗಳ ಪಟ್ಟಿ ಅಮರಕೋಶದಲ್ಲುಂಟು.

ಜೀವ ಪ್ರಪಂಚದಲ್ಲಿ ಅನ್ಯ ಪ್ರಾಣಿಗಳಿಂದ ಮಾನವನನ್ನು ವಿಂಗಡಿಸುವುದು ಆತನಿಗೆ ಮಾತ್ರ ಪ್ರಕೃತಿದತ್ತವಾದ ಈ ಬುದ್ಧಿಶಕ್ತಿ. ಇದರಿಂದಾಗಿಯೇ ಮಾನವ ವಿಚಾರವಂತ, ವಿವೇಚನಾಶೀಲ, ಪ್ರಾಣಿಯೆಂದು ಹೆಸರಾದುದು. ಹಸಿವೆಯಾದಾಗ ಆಹಾರ ಸೇವಿಸುವುದು, ದಣಿವಾರಿಸಿಕೊಳ್ಳಲು ನಿದ್ರಿಸುವುದು, ಅಧಿಕ ಬಲಶಾಲಿಯನ್ನು ಕಂಡೊಡನೆ ಹೆದರುವುದು, ಸಂತಾನಕ್ಕೋಸುಗ ಲೈಂಗಿಕ ಕ್ರಿಯೆಯಲ್ಲಿ ತೊಡಗುವುದು- ಇವೆಲ್ಲ ಮಾನವನಿಗೂ ಇತರ ಪ್ರಾಣಿಗಳಿಗೂ ಇರುವ ಸಾಮಾನ್ಯ ಅಂಶಗಳು. ಪಶುಗಳ ಅಚ್ಚುಮೆಚ್ಚಿನ ಹಚ್ಚಹಸಿರು ಹುಲ್ಲನ್ನು ತಿನ್ನದಿದ್ದರೂ ಈ ನರಮಹಾಶಯ ಬದುಕುತ್ತಾನಲ್ಲ! ಆತ ತೃಣಭಕ್ಷಣ ಮಾಡದಿರುವುದು ಪಶುಗಳ ದೃಷ್ಟಿಯಿಂದ ಒಂದು ಸುದೈವವೇ ಸೈ ಎಂಬುದು ಪ್ರಾಚೀನ ಕವಿಯ ಅನಿಸಿಕೆ. ಇಪ್ಪತ್ತೊಂದನೆಯ ಶತಮಾನದಲ್ಲಿ ಕಾಲಿರಿಸುತ್ತಿರುವ ನಮ್ಮ ಭಾರತದಲ್ಲಿ ತಮ್ಮ ಆಹಾರವನ್ನಲ್ಲದೆ ಪಶುವಿನ ಆಹಾರಕ್ಕೂ ಹಪಹಪಿಸುವ ಭೂಪರು ಜನಿಸಿ ಬರುವರೆಂಬ ಅಂಶವು ಅಂದಿನ ಕವಿಗೆ ಹೊಳೆಯಲಿಲ್ಲವೇನೋ!

ಮಾನವನಿಗೆ ನಿಸರ್ಗ ಕರುಣಿಸಿರುವ ಬುದ್ಧಿಶಕ್ತಿ ಇನ್ನಿತರ ಪ್ರಾಣಿಗಳಿಗೆ ಎಳ್ಳಿನಿತೂ ಇಲ್ಲ ಎನ್ನಲಾಗದು. ಅವುಗಳದು ಅವಿಕಸಿತ ಇಲ್ಲವೆ ಅರೆಬರೆ ವಿಕಸಿತ ಬುದ್ಧಿ. ಹಸಿರು ಹುಲ್ಲಿನ ಸಿವುಡನ್ನು ಕೈಯಲ್ಲಿ ಕಂಡಾಕ್ಷಣ ಹಸುವು ಅಪನತ್ತ ಧಾವಿಸುವುದಿಲ್ಲವೆ? ಹೊಡೆಯಲೆನ್ನುವಂತೆ ಎತ್ತಿ ಹಿಡಿದ ಬಡಿಗೆ ಕಣ್ಣಿಗೆ ಬಿದ್ದೊಡನೆ ಅದೇ ಪಶುವು ಓಡಿ ಹೋಗುವುದಿಲ್ಲವೆ? ಮತ್ತೆ ಮತ್ತೆ ರೊಟ್ಟಿಯ ತುಣುಕನ್ನು ಕೊಡುತ್ತ ಬಂದವನ ಹತ್ತಿರ ಸುಳಿಯುತ್ತ ನಾಯಿಯು ಬಾಲವನ್ನು

ಅಲ್ಲಾಡಿಸುವುದಿಲ್ಲವೆ? ಈ ಎಲ್ಲ ಉದಾಹರಣೆಗಳು ಮೂಕ, ಪಶುವಿಗಿರುವ ಬುದ್ಧಿಶಕ್ತಿಯ ದ್ಯೋತಕ ಎಂದೇ ಬಗೆಯಲಾಗುತ್ತದೆ.

ಬುದ್ಧಿಶಕ್ತಿಯು ಮಾನವರೆಲ್ಲ ಪಡೆದಿರುವ ಸರ್ವ ಸಾಧಾರಣ ಗುಣವೇನೋ ನಿಜ. 'ಪಿಂಡೇ ಪಿಂಡೇ ಮತಿರ್ಭಿನ್ನಾ' ಎನ್ನುವಂತೆ ವ್ಯಕ್ತಿ ವ್ಯಕ್ತಿಯಲ್ಲಿರುವ ಮತಿಯ ಸ್ಥಿತಿ ಮತ್ತು ಶಕ್ತಿಯಲ್ಲಿ ವ್ಯತ್ಯಾಸ ಒಡೆದು ಕಾಣುವಂಥದು. ಕೆಲವೇ ಕೆಲವರು ಕುಶಾಗ್ರಮತಿಗಳು. 'ನಮೋಸ್ತುತೇ ವ್ಯಾಸ ವಿಶಾಲ ಬುದ್ಧೇ' ಎಂಬಲ್ಲಿಯಂತಹ ಪ್ರಜ್ಞಾವಂತ ಜನ ಅವರು. ಅವರು ಪ್ರತಿಭೆಯಿಂದಾಗಿ ಜ್ಞಾನಿಗಳೋ, ವಿಜ್ಞಾನಿಗಳೋ, ವರಕವಿಗಳೋ, ಕಲಾವಿದರೋ, ಮುತ್ಸದ್ದಿಗಳೋ ಧಾರ್ಮಿಕ ಪುರುಷರೋ ಎಂದು ಹೆಸರಾಗಿ ಸುತ್ತಣ ಸಮಾಜವನ್ನು ಬೆಳಗುವರು. ಇನ್ನು ಬೇರೆ ಕೆಲವರು ಮಂದಮತಿಗಳೆಂದು ತೆಗಳಿಕೆಗೆ ಗುರಿಯಾಗುವವರು. ಉಳಿದವರೋ ಮಧ್ಯಮ ದರ್ಜೆಯ ಬುದ್ಧಿಗೆ ಪಾತ್ರರು. ಸಂದರ್ಭಕ್ಕೆ ತಕ್ಕ ಯುಕ್ತಿಯನ್ನು ಕಲ್ಪಿಸಿ ಇಷ್ಟಾರ್ಥವನ್ನು ಸಹಜವಾಗಿ ಸಾಧಿಸಿಕೊಳ್ಳುವ ಪ್ರತ್ಯುತ್ಪನ್ನಮತಿಗಳಾದ ಬೀರಬಲ್, ತೆನಾಲಿರಾಮರಂತಹರು ಸರ್ವರಿಗೂ ಸುಪರಿಚಿತರು. ಸಮಾಜದಲ್ಲಿ ಎರಡು ವರ್ಗಗಳು. ಕೃಷಿಕ, ಕಾರ್ಮಿಕರುಳ್ಳ ಶ್ರಮಜೀವಿಗಳ ವರ್ಗವೆಂದು ಬೆವರು ಸುರಿಸಿ ಮೈ ಮುರಿದು ದುಡಿಯುವ ಈ ಜನಕ್ಕೆ ಬುದ್ಧಿಯ ಕೆಲಸ ಅಷ್ಟಕ್ಕಷ್ಟೆ. ಇನ್ನೊಂದು, ಬುದ್ಧಿಜೀವಿಗಳ ವರ್ಗ. ಮೊದಲಿನ ವರ್ಗ ತಮ್ಮ ಬಾಹುಬಲವನ್ನು ಉಪಜೀವನಕ್ಕಾಗಿ ಅವಲಂಬಿಸಿದರೆ, ಈ ಬುದ್ಧಿಜೀವಿಗಳು ತಮ್ಮ ಬುದ್ಧಿಯ ತೀಕ್ಷ್ಣತೆಯನ್ನು ನಂಬಿದವರು. ಇವರ ಹಣೆಯ ಮೇಲೆ ಕಾಣಿಸಿಕೊಳ್ಳುವುದು ಬೆವರ ಹನಿಯ ಬದಲು ಯೋಚಿಸಿ ಆಲೋಚಿಸಿ ಮೂಡಿದ ನಿರಿಗೆಗಳು.

ಬುದ್ಧಿಯೆಂಬುದನ್ನು ನಿಸರ್ಗವು ಸಮಸ್ತ ಮಾನವರಿಗೆ ಇತ್ತುದಾದರೂ ಅದು ಕೆಲವರ ಸೊತ್ತು ಮಾತ್ರ ಎಂಬ ಭ್ರಮೆಯೋ ಏನೋ, ಕೆಲವೊಂದು ಜನಕ್ಕೆ. ತಮ್ಮೊಡೆಯನನ್ನು ಕುರಿತು 'ಹೂನ್ರಿ ಬುದ್ಧಿ', 'ಬಂದೇನ್ರಿ ಬುದ್ಧಿ' ಎಂದಾಗಿ ಸೇವಕರು ನುಡಿಯುತ್ತಾರೆ. ಅದರಂತೆಯೇ ಮಠಾಧಿಪತಿಗಳನ್ನು ಭಕ್ತಗಣ ಮಾತಿಗೊಮ್ಮೆ 'ಬುದ್ಧಿ!' ಎಂದಾಗಿ ಕರೆಯುತ್ತಾರೆ. ದೊಡ್ಡವರಿಗಿದ್ದ ಬುದ್ಧಿ ತಮಗಿಲ್ಲವೆಂಬ ಅಳುಕು ಇಂತಹ ಜನಗಳ ಮನದೊಳಗೆ ಇದ್ದಿರುವುದೇನೋ!

ಗಾದೆಯ ಮಾತೊಂದು ರಾಜಾರೋಷವಾಗಿ ಸಾರುತ್ತದೆ: "ಶಾಲೆಯ ಮಾಸ್ತರನಿಗೆ ಬುದ್ಧಿಯಿಲ್ಲ, ಸ್ಟೇಷನ್ ಮಾಸ್ತರನಿಗೆ ನಿದ್ದೆಯಿಲ್ಲ." ಒಮ್ಮೊಮ್ಮೆ ಹೊತ್ತಿಗೆ ಸರಿಯಾಗಿ, ಹಲವು ಬಾರಿ ಹೊತ್ತು ಮಾಡಿ ಓಡುವ ರೈಲುಗಾಡಿಗಳ ಓಡಾಟದ ಆರ್ಭಟ, ಸೀಟಿಗಾಗಿ ಪ್ರಯಾಣಿಕರ ಕೂಗಾಟ, ಕಿತ್ತಾಟ- ಇಂತಹ ಹಿನ್ನಲೆಯಲ್ಲಿ ಸ್ಟೇಷನ್ ಮಾಸ್ತರನಿಗೆ ನಿದ್ದೆ ಅದೆಂತು ಸಾಧ್ಯ? ಆದರೆ ಗಂಟೆಗಟ್ಟಲೆ ಗಂಟಲು ಸಿರ ಹರಿಯುವಂತೆ ತುಂಟ ಪೋರರನ್ನು ಎದುರು ಕುಳ್ಳಿರಿಸಿಕೊಂಡು, ವಿದ್ಯೆಯನ್ನು ವಿತರಿಸುವ ಬಡಮಾಸ್ತರನಿಗೆ 'ಬುದ್ಧಿಯಿಲ್ಲ' ಎನ್ನುವುದು ಅದೆಂಥ ಮುತ್ಸದ್ದಿ ಆತನ ನಾಣ್ಣುಡಿಯ ಮೂಲ ಪ್ರವರ್ತಕನದು! ಸ್ವಂತಕ್ಕೇನೆ ಬುದ್ಧಿ ಇಲ್ಲದವ ಅದೆಂತು ಇತರರ ಬುದ್ಧಿಯ ವಿಕಾಸಕ್ಕೆ ನೆರವಾಗಬಲ್ಲ? ಈ ಅಂಶವನ್ನು ಗಮನಿಸಿಯೆ ಮಹಾಕವಿ ಭವಭೂತಿ ನುಡಿದಿರಬೇಕು: 'ನ ತು ಖಲು ತಯೋರ್ಜ್ಞಾನೇ ವೃದ್ಧಿಂ ಕರೋತ್ಯಪಹಂತಿ ವಾ' ಎಂದು. ಜಾಣ ಮತ್ತು ದಡ್ಡ ವಿದ್ಯಾರ್ಥಿಗಳ ಜ್ಞಾನಭಂಡಾರದಲ್ಲಿ ಗುರುವಾದವನು ಒಂದಿನಿತು ಬೆಳೆಸುವುದೂ ಇಲ್ಲ, ಕಳೆಯುವುದೂ ಇಲ್ಲ ಎಂಬುದು ಈ ಕವಿಯ ಅಭಿಪ್ರಾಯ. ತನ್ನ ಬಳಿ ಬುದ್ಧಿ ಇದ್ದರೆ ತಾನೆ ಅನ್ಯರ ಬುದ್ಧಿಯನ್ನು ಬೆಳೆಸಲು ಸಾಧ್ಯ ಅವನಿಗೆ? ಹೆರವರನ್ನು ಕಿತ್ತುಕೊಳ್ಳುವ ಬುದ್ಧಿಯೂ ಅವನದಲ್ಲ. ಶಾಲೆಯ ಮಾಸ್ತರನಿಗೆ ಬುದ್ಧಿಯಿಲ್ಲ ಎಂಬ ಗಾದೆಮಾತು ಇದರಿಂದಾಗಿಯೇ ರೂಢವಾಯಿತೇನೋ.

• ಶ್ರೀನಿವಾಸ ತೋಫಖಾನೆ

# ಆರೈಯುವರ ಕಾಣ್ಕೆ

★ *ಗೀತಾ ಹೆಗಡೆ*

ಒಂದು ಕಡೆ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಸಿಗುವ ಅಪಾರ ಮನ್ನಣೆ, ಇನ್ನೊಂದು ಕಡೆ ಇದೇ ಅಭಿವ್ಯಕ್ತಿ ಸ್ವಾತಂತ್ರ್ಯದ ದೆಸೆಯಿಂದ ತಮ್ಮ ತಮ್ಮ ಜೀವರಕ್ಷಣೆಗೆ ಒದ್ದಾಡುವ ಪೇಚಾಟ- ಹೀಗೆ ಎಲ್ಲ ಕಲಸುಮೇಲೋಗರ ಆಗಿಬಿಟ್ಟಿದೆ. ನೂರು-ಇನ್ನೂರು-ಮುನ್ನೂರು ಚಿಲ್ಲರೆ ಪುಸ್ತಕಗಳನ್ನು ಬರೆಬರೆದು ಹಬ್ಬ ಮಾಡುವವರದು ಒಂದು ಬಗೆಯ ಸಂಭ್ರಮ ವಾದರೆ, ಒಂದೊಂದೇ ಪುಸ್ತಕ ಬರೆದರೂ ದಿನ ಬೆಳಗಾಗುವಷ್ಟರಲ್ಲಿ ಹಲವು ಭಾಷೆಗಳಲ್ಲಿ ಬೇಡಿಕೆ ಗಿಟ್ಟಿಸಿಕೊಳ್ಳುವವರದು ಇನ್ನೊಂದು ಬಗೆಯದು. ಈ ಮಧ್ಯೆ, ಬರೆದ ಇಡಿ ಇಡೀ ಕಾದಂಬರಿಯ ಒಂದೋ ಎರಡೋ ಸಾಲುಗ ಳಲ್ಲೋ ಅಥವಾ ಪ್ಯಾರಾಗಳಲ್ಲೋ, 'ಹೋ! ಏನೋ ಇದೆ! ತದುಕಿ!!'ಎಂದು ಅರಚುವ ವರ ಕೈಗೆ ಸಿಗದಂತೆ ಭೂಗತವಾಗಿಯೋ, ಗಡೀಪಾರಾಗಿಯೋ ಬದುಕುವವರದೇ ಒಂದು ವ್ಯಥೆ.

ಇದು ಹೀಗೆಯೇ ಸಾಗಿದರೆ, ಸಾಹಿತ್ಯಕ್ಕೆ ಸಾಹಿತಿಗಳ ಅವಶ್ಯಕತೆಯೇ ಇಲ್ಲದಂತೆ (ಅಡುಗೆಯ ಬದಲು ಕ್ಯಾಪ್ಸೂಲ್‌ನಂತೆ) ಕಂಪ್ಯೂಟರ್ ವಿಧಾತನೂ ಹೂಡುವ ಹುನ್ನಾ ರುಗಳೆಷ್ಟೋ? ಎಂದು ನಾನು ಭಾರೀ ಚಿಂತೆ ಯಲ್ಲಿ ಇರುವಾಗ, ದಶಕಗಳ ಹಿಂದೆ ಬಹುಶಃ ಇದೇ ಸಮಸ್ಯೆ ಕಾಡಿದ್ದಿರಬಹುದಾದ ಪ್ರಸಿದ್ಧ ಲೇಖಕ ಆರ್.ಕೆ. ನಾರಾಯಣರ ಲಹರಿ ಯೊಂದು ಕಣ್ಣಿಗೆ ಬಿತ್ತು. ಅದೆಷ್ಟು ಸ್ವಾರಸ್ಯಕರ ಭವಿಷ್ಯವಾಣಿಯಂತೆ ಇದೆ ಎಂದರೆ ಆ ಸೊಗ ಸಾದ ಗುಟ್ಟಿನ ಸ್ವಗತವನ್ನು ನಿಮ್ಮೊಂದಿಗೆ ಹಂಚಿಕೊಳ್ಳದೇ ಇರಲಾರೆ. ಆ ಮಹಾನ್ ಲೇಖಕರದೂ ಇದಕ್ಕೆ ಆಶೀರ್ವಾದವಿದೆ, ಆಕ್ಷೇಪವಿ(ರಲಿಕ್ಕಿ)ಲ್ಲ ಎಂದು ಕೋರಿ ಪ್ರಸ್ತುತ ಪಡಿಸುತ್ತಿದ್ದೇನೆ.

* * * *

ಇಪ್ಪತ್ತನೆಯ ಶತಮಾನ ಮುಗಿಯುವ ವೇಳೆಯಲ್ಲೊಂದು ದಿನ. ಲೇಖಕ ತನ್ನ ನೂರ ಒಂದನೆಯ ಕೃತಿರಚನೆಯಲ್ಲಿ ತೊಡಗಿದ್ದಾಗ ಹೊರಗೆ ಬೂಟಿನ ಸಪ್ಪಳ ಕೇಳಿಸಿತು. ಹಾಗೆಯೇ ಬಾಗಿಲನ್ನು ತೆರೆದುಕೊಂಡು ನಾಲ್ವರು ಮುಗುಂ-ಮೊಗದ ವ್ಯಕ್ತಿಗಳು ಲೇಖಕನ ಸ್ಟಡಿ ರೂಮನ್ನು ಹೊಕ್ಕರು. ಅವರ ಮುಖಂಡ ನುಡಿದ, "ನಾವು IT-FKEON" "ಓಹ್, ಅದ್ಭುತ!" ಕಿರುಚಿದ ಸಾಹಿತಿ, "ಕುಳಿತುಕೊಳ್ಳಿರಲ್ಲ."

ಆ ಬಿಗಿಮನುಷ್ಯರು ಬಿಗುಮಾನದಿಂ ದಲೇ ಆಸೀನರಾದರು. ಈಗ ಸಾಹಿತಿ ಕೇಳಿದ, "ಈ ITF... ಇತ್ಯಾದಿ ಏನೆಂದು ನಾನು ಕೇಳಬಹುದೇ?"

"ಹಾಗೆಂದರೆ, 'ಇಂಟರ್‌ನ್ಯಾಷನಲ್ ಟ್ರಿಬ್ಯುನಲ್ ಫಾರ್ ಕೀಪಿಂಗ್ ಆ್ಯನ್ ನಾವೆ ಲ್ಟಿಸ್'. ಐವತ್ತೇಳು ರಾಷ್ಟ್ರಗಳನ್ನು ಒಳ ಗೊಂಡು (ರಶಿಯಾ) ಹೊರತುಪಡಿಸಿ ಈ ಕುರಿತ ನಿಯಮಾವಳಿಯೊಂದಕ್ಕೆ ಇತ್ತೀಚೆ ಗಷ್ಟೇ ಜಿನೀವಾದಲ್ಲಿ ಸಹಿ ಹಾಕಲಾಗಿದೆ.

ಅಲ್ಲದೆ ಮಾನವ ಪ್ರಗತಿಯ ದೃಷ್ಟಿಯಿಂದ ನಮಗೆ ಪೊಲೀಸ್ ಹಾಗೂ ನ್ಯಾಯಾಂಗ ಅಧಿಕಾರಗಳನ್ನೂ ನೀಡಿದ್ದಾರೆ."

ನಂತರ ಮುಖಂಡ ತನ್ನ ಪ್ರಶ್ನೆ ಕೇಳಿದ,

"ನಿಮ್ಮಲ್ಲಿ ಪ್ರಕಟಿತ ಗ್ರಂಥಗಳ ಒಟ್ಟೂ ತೂಕ ಎಷ್ಟು ?"

ಸಾಹಿತಿ ಅಸಂತೋಷದಿಂದ ನಿರುಕಿಸಿದ. ಅವರೊಂದು ತೂಕಮಾಪನ ಯಂತ್ರವನ್ನೆಳೆದಿಟ್ಟು ಆಜ್ಞೆ ಮಾಡಿದರು.

"ನಿಮ್ಮ ಎಲ್ಲಾ ಪುಸ್ತಕಗಳ ಪ್ರತಿಯೊಂದನ್ನು ಇದರ ಮೇಲಿಡಿ."

ಸಾಹಿತಿ ಶೆಲ್ಫೊಂದರಿಂದ ಎಳೆದೆಳೆದು ಮುಖಪುಟದ ಮೇಲೆ ತನ್ನ ಹೆಸರು ಹೊತ್ತ ಎಲ್ಲ ಪುಸ್ತಕಗಳನ್ನೂ ತೆಗೆದ.



ತನ್ನ ಕೈಯಲ್ಲಿದ್ದ ಫೈಲಿನೊಳಗೆ ಇರುವ ಲಿಸ್ಟನ್ನು ಪರಿಶೀಲಿಸಿ ಮುಖಂಡ ಘೋಷಿಸಿದ.

"ತೂಕಯಂತ್ರದ ಮೇಲೆ ನೀವು ನಿಮ್ಮ ಎಲ್ಲ ಪುಸ್ತಕಗಳನ್ನು ಪೂರ್ತಿ ಹೇರಿಲ್ಲ."

"ಹಾಗಾಗಿರಬಹುದು," ಸಾಹಿತಿ ವಿನಮ್ರನಾಗಿ ನುಡಿದ, "ಆದರೆ ನಾನೇನು ಮಾಡಲಿ ? ನಿಮಗೆ ಗೊತ್ತಿರ್ರೋ ಹಾಗೆ ನನ್ನ ಪ್ರಕಾಶಕರು ಪ್ರತಿಯೊಂದು ಹೊಸ ಪ್ರಕಟಣೆಗೆ ಕೇವಲ ಆರು ಪ್ರತಿಗಳನ್ನು ಕೊಡ್ತಾರೆ, ಆದರೆ ನನಗೋ ಅದಕ್ಕಿಂತ ನೂರಾರು ಪಟ್ಟು ಮಿತ್ರರು, ಬಂಧುಗಳು, ಹಿತೈಷಿಗಳು ಎಲ್ಲರೂ ಎರವಲು ತಗೋಳೋಕೆ ನೋಡ್ತಾರೆಯೇ ಹೊರತು ಹಿಂತಿರುಗಿಸೊಲ್ಲ....."

"ನೀವು ಬರೆದಿದ್ದರ ಒಂದೊಂದು ಪ್ರತಿ ಇಟ್ಕೊಳ್ಳದೆ ಇರೋದು ಒಂದು ಅಪರಾಧ ಅಂತ ನಿಮಗ್ಗೊತ್ತಿಲ್ವಾ ?"

"ಇಲ್ಲ", ಸಾಹಿತಿ ಉತ್ತರಿಸಿದ.

"ಹಾಗಾದ್ರೆ ಅಪರಾಧಗಳು ಎರಡು," ಮುಖಂಡ ಮುಂದುವರಿಸಿದ.

"ಏನೇನು ಕಾನೂನುಗಳು ಪಾಸಾಗಿವೆ ಎಂದು ಅರಿಯದಿರೋದು ತೀರ ಗಂಭೀರ ಅಪರಾಧ." ಕ್ಲರ್ಕ್‌ನತ್ತ ತಿರುಗಿ ಹೇಳಿದ.

"ಎರಡೂ ಅಪರಾಧಗಳನ್ನು ನೋಟ್ ಮಾಡಿಕೋ"

ಸಾಹಿತಿ ಕ್ಷಮಾಯಾಚನೆಯ ದನಿಯಲ್ಲಿ ಹೇಳಿದ.

"ನನ್ನ ಓದು-ಬರವಣಿಗೆಯ ಸ್ವಂತ ರಗಳೆಯಿಂದಾಗಿ ಇತ್ತೀಚೆಗೆ ಬರ್ತಾ ಇರೋ ಕಾನೂ. ನುಗಳ ಗಂಧವೇ ಇರಲಿಲ್ಲ."

"ಒಳ್ಳೇದು, ಆದರೆ ಇದೇನೂ ಬಚಾವ್ ಮಾಡೊಲ್ಲ," ಮುಖಂಡ ತೂಕಯಂತ್ರದ ಮುಳ್ಳನ್ನೇ ದಿಟ್ಟಿಸುತ್ತ ಹೇಳಿದ.

"ಸದ್ಯದ ನಿಮ್ಮ ಪ್ರ ಟಿತ ಪುಸ್ತಕಗಳ ತೂಕ, ಈಗಾಗಲೇ ನೂರು ಪೌಂಡುಗಳ ಮೇಲಿದೆ; ಉಳಿದಿದ್ದನ್ನು ಹಾಕಿದ ಮೇಲಂತೂ ಹೆಚ್ಚಾಗಲಿಕ್ಕೇ ಬೇಕು. ಹೆಚ್ಚೂ ಕಮ್ಮಿ ನಲವತ್ತು 'ಎಲ್ಬಿಸ್'ನಷ್ಟಾದರೂ ಮಿತಿ ಮೀರಿದ್ದಿರಿ."

"ಏನರ್ಥ ಹಾಗೆಂದರೆ ?" ಸಾಹಿತಿ ಕೇಳಿದ.

"ಪ್ರತಿಯೊಬ್ಬ ನಾಗರಿಕನಿಗೂ ಸ್ವಅಭಿವ್ಯಕ್ತಿಗೆ ಗರಿಷ್ಠ ಅವಕಾಶ ಕೊಡಬೇಕೆನ್ನುವುದೇ ನಮ್ಮ ಇಚ್ಛೆ. ಹಾಲಿ ಲಭ್ಯವಿರುವ ಶೆಲ್ಫ್ ಜಾಗವನ್ನೆಲ್ಲ ಒಬ್ಬನೇ ಸಾಹಿತಿ ಅಥವಾ ಕೆಲವು ಸಾಹಿತಿಗಳ ಗುಂಪು ಆಕ್ರಮಿಸೋದು ನಮಗೆ ಬೇಕಾಗಿಲ್ಲ."

"ಒಟ್ಟು ತೂಕ ಅರವತ್ತೇ ಅಂತ ಹೇಗೆ ನಿರ್ಧರಿಸಿದಿರಿ ?"

"ಇಡೀ ಪ್ರಪಂಚದ ಜನಸಂಖ್ಯೆಯನ್ನು ಪ್ರತಿಯೊಬ್ಬ ನಾಗರಿಕ ತನ್ನ ಜೀವಮಾನದಲ್ಲಿ ಓದುವ ಒಟ್ಟು ತಾಸುಗಳ ಸಂಖ್ಯೆಯಿಂದ ಭಾಗಿಸಿ ನಿರ್ಧರಿಸಲಾಗಿದೆ. ಡೈರೆಕ್ಟರ್ ಜನರಲ್ ಆಫ್ ಸ್ಟಾಟಿಸ್ಟಿಕ್ಸ್ ಮತ್ತು ಇಂಟಲಿಜೆನ್ಸ್ ಟೆಸ್ಟಿನ ಡೈರೆಕ್ಟರ್ ಜನರಲ್‌ರ ಸಂಯುಕ್ತ ಕಾರ್ಯದ ಫಲ ಇದು."

"ಇಷ್ಟೊಂದು ತೂಕದ ವ್ಯಕ್ತಿಯಾಗಬಲ್ಲೆನೆಂದು ನಾನೆಂದೂ ಎಣಿಸಿರಲಿಲ್ಲ," ಸಾಹಿತಿ ಕ್ಷಮಾಯಾಚನೆ ಮಾಡಿದ. "ಈಗ ಇದಕ್ಕೇನು ಪರಿಹಾರ ?"

"ಮತ್ತಿನ್ನೇನು ? ಅಗತ್ಯಕ್ಕಿಂತ ಹೆಚ್ಚಿರುವ ತೂಕವನ್ನೆಲ್ಲ ನಾಶಮಾಡಿ ಬಿಡೋದಷ್ಟೇ," ಮುಖಂಡ ಮಾರ್ನುಡಿದ. "ಇಲ್ಲದಿದ್ದರೆ 'ಡಿಫೆನ್ಸ್ ಆಫ್ ದಿ ರೆಲ್ಮ್ ಆ್ಯಕ್ಟ್' ಪ್ರಕಾರ ನಿಮ್ಮ ಮೇಲೆ ಆರೋಪ ಹೊರಿಸಬೇಕಾಗುತ್ತದೆ. ಈಗಲೇ ಅದನ್ನು ಮಾಡೋಣ. ಈಗ, ಸುಮ್ಮನೇ ಕುಳಿತು ನಮ್ಮ ಪ್ರಶ್ನೆಗಳಿಗೆ ಉತ್ತರಿಸಿ..... ನಮ್ಮೊಂದಿಗೆ ಮಾತನಾಡುತ್ತಿರುವಾಗ ನೀವು ತೀರ ಆರಾಮಾಗಿ ಕುಳಿತುಕೊ

ಳ್ಳೋಹಾಗಿಲ್ಲ."

ಸಾಹಿತಿ ಸರಿಯಾಗಿ ಸೆಟೆದು ಕುಳಿತುಕೊಂಡ.

ಮುಖಂಡ ಪ್ರಶ್ನಿಸಿದ, "ನಿಮ್ಮ ಎಲ್ಲ ಪುಸ್ತಕಗಳೂ 'ಮಾಲ್ಗುಡಿ' ಎಂಬ ಒಂದು ಸ್ಥಳದ ಕುರಿತಾಗಿವೆ. ಎಲ್ಲಿದೆ ಅದು ?"

"ನನಗ್ಗೊತ್ತಿಲ್ಲ." ಸಾಹಿತಿ ತಪ್ಪೊಪ್ಪಿಕೊಂಡ. ಅವರು ಕೆಲವು ಗೆಜೆಟ,ನಕಾಶ, ರೇಲ್ವೆ ಗೈಡುಗಳನ್ನು ತೆಗೆದುಕೊಂಡು ಪುಟ ತಿರುವಿ ಪರಿಶೀಲಿಸಿದರು.

"ನಮಗೆಲ್ಲ ಮಾಲ್ಗುಡಿ ಜಾಗ ಕಾಣ್ತಾ ಇಲ್ಲ. ಅದೊಂದು ಕಾಲ್ಪನಿಕ ಊರಾ ?" "ನೋಡಿ..." ಸಾಹಿತಿ ವಿವರಿಸಲು ಪ್ರಯತ್ನಿಸಿದ.

"ಅದೆಲ್ಲ ಬೇಕಾಗಿಲ್ಲ, 'ಹೌದು' ಅಥವಾ 'ಇಲ್ಲ' ಅಷ್ಟೇ ಉತ್ತರಿಸಿ. ಮಾಲ್ಗುಡಿ ಒಂದು ಕಾಲ್ಪನಿಕ ಸ್ಥಳವೆ ?"

"ಹೌದು."

ಮುಖಂಡನ ಗಂಟುಮುಖದ ಗಂಟು ಮತ್ತೂ ಬಿಗಿಯಾಯಿತು.

"ನಾವೆಣಿಸಿದ್ದಕ್ಕಿಂತ ಇದು ಸೀರಿಯಸ್ಸಾಗ್ತಾ ಇದೆ. ಸದ್ಯದ ಪರಿಸ್ಥಿತಿಯಲ್ಲಿ ಜಿಯಾಗ್ರಫಿ ವಿಷಯವಾಗಿ ಸಾರ್ವಜನಿಕರನ್ನು ತಪ್ಪು ಹಾದಿಗೆಳೆಯೋದು ಒಂದು ಅಪರಾಧ ಅಂತ ಗೊತ್ತಿಲ್ವೇನ್ರೀ ನಿಮಗೆ ? ಬದಲಿಗೆ ನಮ್ಮ ನಿರೀಕ್ಷೆಯಂತೆ ಎಲ್ಲ ಕಾದಂಬರಿಕಾರರೂ ತಮ್ಮ ಕೃತಿಗಳಲ್ಲಿ ವಿದೇಶೀ ಪ್ರವಾಸಿಗರನ್ನು ಆಕರ್ಷಿಸುವಂಥ ಚೂರುಪಾರನ್ನು ಸಾಮಾನ್ಯ ನೆಲೆಯಲ್ಲಿ ಸೇರಿಸತಕ್ಕದ್ದು. ಪ್ರತಿಯೊಬ್ಬ ಸಾಹಿತಿಯೂ ತನ್ನ ದೇಶಕ್ಕೆ ಋಣಸಂದಾಯ ಮಾಡಬೇಕಾದದ್ದು ಕರ್ತವ್ಯ. ನಿಮಗೆ ರಾಷ್ಟ್ರೀಯ ಉದ್ಯಮವಾದ ವಿದೇಶೀ ಪ್ರವಾಸೋದ್ಯಮದ ಮಹತ್ವದ ಅರಿವೂ ಇಲ್ಲವೇ ? ಪ್ರತಿಯೊಂದು ರಾಷ್ಟ್ರಕ್ಕೂ ಫಾರಿನ್ ಕರೆನ್ಸಿಯ ಜರೂರು ಅಗತ್ಯ ಎಷ್ಟಿದೆ ಅನ್ನೋದು ಗೊತ್ತಿಲ್ವೇನ್ರೀ ನಿಮಗೆ ?"

ಸಾಹಿತಿ ನಾಚಿಕೆ-ಅವಮಾನದಿಂದ ತಲೆ ತಗ್ಗಿಸಿದ.



ಮುಖಂಡ ಇನ್ನೊಂದು ವಿಷಯವನ್ನು ಕೈಗೆತ್ತಿಕೊಂಡು ಮುಂದುವರಿದ, "ನಿಮ್ಮ ಮೇಲೆ ಇರುವ ಆಪಾದನೆಯೆಂದರೆ, ನೀವು ಪಾತ್ರಗಳನ್ನು 'ತ್ರಿಶಂಕು' ಅವಸ್ಥೆಯಲ್ಲಿ ಬಿಟ್ಟುಬಿಡ್ತೀರಿ. ಬಗೆಹರಿಯದ ಅವುಗಳ ಅನಿಶ್ಚಿತ ಭವಿಷ್ಯಗಳು. ನೀವು ಸ್ವಾಮಿಯನ್ನು (ಸ್ವಾಮಿ ಅಂಡ್ ಹಿಸ್ ಫ್ರೆಂಡ್ಸ್‌ನಲ್ಲಿ) ರೇಲ್ವೆ ಪ್ಲಾಟ್‌ಫಾರ್ಮ್ ಒಂದರಲ್ಲಿ ಮರೆಯಾಗ್ತಿರೋ ರೈಲನ್ನು ನೋಡ್ತಾ ಇರುವ ಹಾಗೇ ಬಿಟ್ಟುಬಿಟ್ಟಿದ್ದೀರಿ; (ಬ್ಯಾಚಲರ್ ಆಫ್ ಆರ್ಟ್ಸ್‌ನ) ಚಂದ್ರನ್‌ಅನ್ನೂ ನೀವು ದಾರಿ ದಿಟ್ಟಿಸುತ್ತಾ ಇರೋ ಹಾಗೆ ಬಿಟ್ಟು ಬಿಟ್ಟಿದ್ದೀರಿ; (ದಿ ಡಾರ್ಕ್ ರೂಮ್‌ನ) ಸಾವಿತ್ರಿ ಕಿಟಕಿ ಪಕ್ಕ ಕುಳಿತುಕೊಂಡ ನಿಸ್ತೇಜ ಅಬಲೆಯಾಗಿಬಿಟ್ಟಿದ್ದಾಳೆ; ಹ್ಹಾ! ಆ ನಿಮ್ಮ 'ಇಂಗ್ಲಿಷ್ ಟೀಚರ್' ಕೊನೆಯ ಪುಟದಲ್ಲಿ ಸತ್ತೇಹೋಗ್ಬಿಟ್ಟಿದ್ದಾನೋ ಅಥವಾ ಸುಳ್ಳೇ ಹಗಲುಗನಸು ಕಾಣ್ತಾ ಇದಾನೆಯೋ ?"

"ಆ 'ಸಂಪತ್'ಗೆ ಕೊನೆಗೇನಾಯ್ತು? 'ಜ್ಯೋತಿಷಿಯ ದಿನ', 'ಸ್ಲೆಕ್ಲೋನ್' ಇತ್ಯಾದಿ ನಿಮ್ಮ ಸಣ್ಣ ಕತೆಗಳೋ.... ಎಲ್ಲ ತುಂಬ ವಿಕ್ಷಿಪ್ತವಾಗಿವೆ. ಯಾವುದನ್ನೂ ಸರಿಯಾಗಿ ಮುಕ್ತಾಯ ಮಾಡೋ ಮನಸೇ ನಿಮಗಿಲ್ಲ ಎನಿಸುತ್ತೆ. ಇಂಥ ವ್ಯವಹಾರ ಖಂಡಿತವಾಗಿ ಅನ್ಯಾಯ. ಸಾವಿರಾರು ಮಾನವ ಗಂಟೆಗಳು, "ಮುಂದೇನಾಯ್ತು ?" ಅಂತ ಆಶ್ಚರ್ಯಪಡೋದರಲ್ಲೇ ವ್ಯರ್ಥವಾಗುತ್ವೆ. ಹೀಗೆ ಸತತ ಚಿಂತೆಯಿಂದ ನರಗಳ ಕಾಯಿಲೆ, ಸಮೂಹ-ದುಗುಡ (ಮಾಸ್ ಟೆನ್ಷನ್) ಕಾಣಿಸಿಕೊಳ್ಳುತ್ತವೆ- ಎಂದು 'ಡೈರೆಕ್ಟೊರೇಟ್ ಆಫ್ ಸೈಕಾಜಿಕಲ್ ವೆಲ್‌ಫೇರ್'ನ ಇತ್ತೀಚಿನ ವರದಿ. ಇನ್ನುಮೇಲೆ, ಈ ಫಾರ್ಮನ್ನು ನೀವು ಫಿಲ್-ಅಪ್ ಮಾಡಬೇಕಾಗುತ್ತೆ-ಮತ್ತು ಚಿಕ್ಕದಿರಲಿ, ದೊಡ್ಡದಿರಲಿ, ಯಾವುದೇ ಕತೆಯನ್ನು ಶುರು ಮಾಡಬೇಕಾದರೆ, ಲೈಸೆನ್ಸ್ ತಗೊಳ್ಳಬೇಕಾಗುತ್ತೆ."

ಸಾಹಿತಿ ಅಧೋಮುಖನಾಗಿ ಕಣ್ಣೋಡಿಸಿದಾಗ ಆತನ ಕೈಯಲ್ಲೊಂದು ಸಂಕೀರ್ಣವಾದ ಫಾರ್ಮ್ ಇಡಲ್ಪಟ್ಟಿತು. ಅದರಲ್ಲಿ 'ಪ್ರಸ್ತುತ ಪುಸ್ತಕದ ಹೆಸರು ಮತ್ತು ಶೀರ್ಷಿಕೆ,' 'ಪಾತ್ರಗಳೆಷ್ಟು ?', 'ಅವರ ಹೆಸರುಗಳು ಮತ್ತು ಚಹರೆಗಳು', 'ಅವರು ಆಡುವ ಭಾಷೆ ಯಾವುದು ?', 'ಅವರ ನೈತಿಕ, ರಾಜಕೀಯ ಹಾಗೂ ಸಾಮಾಜಿಕ ಹೊರನೋಟಗಳೇನು ?' ಇತ್ಯಾದಿ.... ಇತ್ಯಾದಿ ಅಂಕಣಗಳಿದ್ದವು. ಸಾಹಿತಿ ಇವನ್ನೆಲ್ಲ ಪರೀಕ್ಷಿಸುತ್ತಿದ್ದಾಗ, ಮುಖಂಡ ಇನ್ನೊಮ್ಮೆ ತನ್ನ ಫೈಲನ್ನು ನೋಡಿ ಕೇಳಿದ.

"ನೀವು ಹೇಗೆ ಸಾಹಿತಿಯಾದಿರಿ ?"

"ನನಗೆ ತಿಳಿಯದು."

"ನಿಮ್ಮ ತಂದೆ ಏನಾಗಿದ್ದರು ?"

"ಅವರೊಬ್ಬ ಒಳ್ಳೆಯ ಶಿಸ್ತಿನ, ಅಚ್ಚುಕಟ್ಟಿನ ಹೆಡ್ಮಾಸ್ಟರಾಗಿದ್ದರು."

"ಹಾಗಿದ್ದ ಪಕ್ಷದಲ್ಲಿ ನೀವು ಕೂಡ ಸ್ಕೂಲ್‌ಮಾಸ್ಟರೇ ಆಗಬೇಕಾಗಿತ್ತು. ಜನ ತಮ್ಮ ವಂಶಪಾರಂಪರ್ಯ ವೃತ್ತಿಗಳನ್ನು ತ್ಯಜಿಸುವುದು ನಮಗೆ ಸರಿಬೀಳೊಲ್ಲ."

ಸಾಹಿತಿ ಉತ್ತರಿಸಿದ, "ನಾನೂ ಪ್ರಯತ್ನಿಸಿದ್ದೆ. ಒಂದು ಸರ್ಕಾರೀ ಹೈಸ್ಕೂಲಿನಲ್ಲಿ ನಾಲ್ಕು ದಿನ ಟೀಚರಾಗಿದ್ದೆ. ಆಮೇಲೆ ನಾನದನ್ನು ಬಿಡಲೇಬೇಕಾಯ್ತು, ಆ ಹುಡುಗರು ಸುಮ್ಮನೇ ತಮ್ಮ ಜಾಗದಲ್ಲಿ ಕೂತುಕೊಳ್ತಿರಲಿಲ್ಲ, ಶಾಂತವಾಗಿಯೂ ಇರ್ತಿರಲಿಲ್ಲ; ಶಿಸ್ತು ಕಾಪಾಡದಿದ್ದಕ್ಕೆ ಅಧಿಕಾರಿಗಳು ನನ್ನನ್ನು ಬೈದರು."

"ಚೆನ್ನಾಯ್ತು, ಅವರು ಹಾಳಾಗೋದಿದ್ದರೆ ಹಾಳಾಗ್ತಿದ್ದರು, ನೀವು ಮಾತ್ರ ಕಲಿಸೋದು ಬಿಡಬೇಕಾಗಿರಲಿಲ್ಲ. ನೀವು ವಾಪಸ್ ಅದಕ್ಕೇ ಹೋಗಿ. ಬೇರೆ ಆಯ್ಕೆಯ ಪ್ರಶ್ನೆಯೇ

ಇಲ್ಲ. ಈಗ ನೀವು ಮಾಡಬೇಕಾದ ಕೆಲಸ ಎಂದರೆ, ಇನ್ನು ಮುಂದೆ ಯಾವುದೇ ಪುಸ್ತಕ ಬರೆಯೊಲ್ಲ ಎಂದು ಸಹಿ ಮಾಡಬೇಕು."

"ಇಲ್ಲ, ನಾನು ಸಹಿ ಮಾಡೊಲ್ಲ," ಸಾಹಿತಿ ನುಡಿದ.

"ಮತ್ತೊ, ನಿಮ್ಮ ಹಾಲೀ ಪುಸ್ತಕಗಳ ಬಗೆಗೆ; ನಿಮ್ಮೆಲ್ಲ ಪುಸ್ತಕಗಳ ಕೊನೆಯ ಭಾಗ ವನ್ನು ಪುನಃ ಬರೆಯಲಿಕ್ಕೇ ಬೇಕು."

"ಯಾಕೆ ?"

"ಯಾಕೇಂದ್ರೆ, ನೀವು 'ಸತ್ಯಕ್ಕೆ ಸಾವಿಲ್ಲ; ಸುಳ್ಳಿಗೆ ಸುಖವಿಲ್ಲ' ಎಂದು ಸಾರಬೇಕಾಗಿದೆ."

"ಅದು ಹೇಗೆ ಸಾಧ್ಯ ?" ಕೇಳಿದ ಸಾಹಿತಿ, "ಅಂಥ ಒಂದು ವ್ಯವಸ್ಥೆ ಮಾಡಲು ಬ್ರಹ್ಮನಿಂದಲೂ ಸಾಧ್ಯವಿಲ್ಲದಿರುವಾಗ ? ಅದೇನೇ ಇರಲಿ, ನಾನಂತೂ ಇದಕ್ಕೆ ಸಹಿ ಹಾಕಲಾರೆ. ಏಕೆಂದರೆ ನನ್ನ ಪಾತ್ರಗಳಲ್ಲಿ ಒಳ್ಳೆಯದಾವುದು, ಕೆಟ್ಟ ಅಂಶ ಯಾವುದೆಂದು ಸ್ವತಃ ನನಗೇ ಗೊತ್ತಿಲ್ಲ. ನನಗೆ ಒಲವಿದ್ದದ್ದು ಅವರೆಲ್ಲ ವ್ಯಕ್ತಿಗಳು (ಮನುಷ್ಯರು) ಅಂತಲೇ ಹೊರತು, ಒಳ್ಳೆಯತನದ್ದೋ, ಕೆಡುಕಿನದೋ ಎರಕ ಅಥವಾ ಸಂಕೇತವಾಗಿ ಅಲ್ಲ. ಅವರವರ ಸೀಮಿತ ಪ್ರಪಂಚದಲ್ಲಿ ಅವರೇನು ಹೇಳ್ತಾರೋ ವಿಚಾರಿಸುತ್ತಾರೋ, ಕಷ್ಟ-ಸುಖ ಅನುಭವಿಸುತ್ತಾರೋ ಆಸೆ-ಆಕಾಂಕ್ಷೆ......"

"ನಿಲ್ಲು! ನಮ್ಮೆದುರಿಗೆ ನೀನು ಭಾಷಣ ಬಿಗಿಯಕೂಡದು. ಪ್ರತಿ ಕಾನೂನು-ಕಟ್ಟಳೆಗಳನ್ನು ಭಂಗ ಮಾಡಿದ್ದಕ್ಕಾಗಿ ನಾಳೆ ನಿನ್ನ ವಿಚಾರಣೆ ನಡೆಯಲೇಬೇಕು. ದೋಷಾರೋಪದ ಸಂಖ್ಯೆ...."

"ಇಪ್ಪತ್ತೈದು," ಕ್ಲರ್ಕ್ ತಕ್ಷಣ ಹೇಳಿದ.

"ಅದನ್ನು ಇಪ್ಪತ್ತಾರು ಮಾಡಿ," ಪ್ರತಿಕ್ರಿಯಿಸಿದ ಸಾಹಿತಿ ಮುಖಂಡನ ತಲೆಯತ್ತ ಒಂದು ಪೇಪರ್‌ವೈಟ್ ತೂರಿದ. ಆತ ಸ್ತಂಭೀಭೂತನಾಗಿ ನಿಂತಂತೆಯೇ ಸಾಹಿತಿ ತನ್ನ ಪೇಪರ್‌ನೈಫ್ ಕೈಗೆತ್ತಿಕೊಂಡು ನಿಧಾನವಾಗಿ ತನ್ನ ಪಕ್ಕೆಗೆ ಇರಿದುಕೊಂಡ.

ಈಗ ನಾಲ್ಕೂ ಜನ ಆ ಭಯಂಕರ ಮನುಷ್ಯರು ಎದ್ದು ನಿಂತರು. ಮುಖಂಡ ಸಾಹಿತಿಯೊಡನೆ ನುಡಿದ, "ನಿನಗೆ ಅರ್ಧ ಗಂಟೆ ಕೊಡಲಾಗಿದೆ. ನಿನ್ನ ಸಂತಾಪ ಸಂದೇಶ ಬರೆಯೋದಕ್ಕೋಸ್ಕರ. ಅದು ನಮ್ಮ ಫೈಲಿಗೆ ಅವಶ್ಯ. ಆಮೇಲೆ ನೀನು ನಮ್ಮ ಜೊತೆ ಹೊರಡಬೇಕು......!"

## ಬೇಸ್ತುಬಿದ್ದ ಪೋಲೀಸರು

ಆತ ವಿಚಿತ್ರ ಕಳ್ಳ. ಕಳವು ಮಾಡಲು ಪೊಲೀಸರ ನೆರವನ್ನೇ ಪಡೆದ ಭೂಪ.

ಅಲೀಗಢದ ಟಪ್ಪಲ್ ಠಾಣೆಗೆ ಒಬ್ಬ ಟ್ರ್ಯಾಕ್ಟರ್ ನಡೆಸಿಕೊಂಡು ಬಂದ ಮತ್ತು ಹತ್ತಿರದಲ್ಲೆ ನಡೆಯುತ್ತಿದ್ದ ಜಾತ್ರೆ ನೋಡಿಬರುವುದಾಗಿ ಹೇಳಿ ಹೋದ. ತುಸು ಹೊತ್ತಿನ ಬಳಿಕ ಅಲ್ಲಿಗೆ ಯುವಕನೊಬ್ಬ ಬಂದು ಟ್ರ್ಯಾಕ್ಟರ್ ಸ್ಟಾರ್ಟ್ ಮಾಡಲೆತ್ನಿಸಿದ ಆದರೆ ಅದು ಸ್ಟಾರ್ಟ್ ಆಗದ್ದರಿಂದ ಹತ್ತಿರದಲ್ಲೇ ಇದ್ದ ಸಿಪಾಯಿಗೆ ಸಹಾಯಮಾಡುವಂತೆ ವಿನಂತಿಸಿದ. ಆ ಯುವಕನೇ ಟ್ರ್ಯಾಕ್ಟರಿನ ಮಾಲಿಕನೆಂದು ಭಾವಿಸಿದ ಸಿಪಾಯಿ ಅವನಿಗೆ ನೆರವಾದ. ಯುವಕ ಟ್ರ್ಯಾಕ್ಟರ್ ನಡೆಸಿಕೊಂಡು ಹೊರಟುಹೋದ. ಸ್ವಲ್ಪ ಸಮಯದ ಬಳಿಕ ಟ್ರ್ಯಾಕ್ಟರಿನ ನಿಜವಾದ ಮಾಲಿಕ ಬಂದಾಗ ಪೊಲೀಸರು ಬೆರಗಾದರು. ಕಟ್ಟಕಡೆಗೆ ಅವರು ಕಳ್ಳನನ್ನು ಹಿಡಿಯುವುದರಲ್ಲಿ ಯಶಸ್ವಿಯಾದರು. ಆ ಮಾತು ಬೇರೆ.

★ 'ಅಡಿಗ'

# ಅಳಿದ ವೈಭವ ಮರಳಿ ಪಡೆಯಲು ಪ್ರತಾಪನ ಯತ್ನ

ಇಂತು ಒಮ್ಮೆಲೆ ಉಪ್ಪರಿಗೆಯು ತಿಪ್ಪೆಯಾಗಿ ಪರಿವರ್ತನ ಹೊಂದಿದ್ದು ಮೊದಲು ಆಘಾತವನ್ನುಂಟು ಮಾಡಿದರೂ ನಂತರ ತುಸು ಸಮಯದಲ್ಲಿಯೆ ಅದಕ್ಕೆ ಕಾರಣವೇನೆಂಬುದು ಪ್ರತಾಪನಿಗೆ ಅರ್ಥವಾಗಹತ್ತಿತು. ತನ್ನ ತಾಯಿಯ ತಪ್ಪೇ ಇದೆಂದು ಅವನಿಗೆ ಖಚಿತವಾಯಿತು. ತಾನು ಅಂಗವಸ್ತ್ರಗಳನ್ನು ಎಂಥದೇ ಪ್ರಸಂಗದಲ್ಲೂ ಬೇರಾರ ಕೈಗೂ ಕೊಡಕೂಡದೆಂದು ಎಚ್ಚರಿಸಿದ್ದರೂ ಆಕೆಯಿಂದ ಪ್ರಮಾದವಾಗಿರಲೇಬೇಕೆಂದು ಅವನೆಂದುಕೊಂಡನು.

ಆ ಸಮಯಕ್ಕಾಗಲೆ ಪ್ರತಾಪನ ಅಣ್ಣಂದಿರೆಲ್ಲ ಅವನೆದುರು ಬಂದು ನಿಂತಿದ್ದರು. ಈ ರೀತಿ ಒಮ್ಮೆಲೆ ಎಲ್ಲರ ಮೈಮೇಲಿನ ರಾಜಚಿಹ್ನೆಗಳೂ ಅವರೇರಿದ ಕುದುರೆಗಳೂ ಮಾಯವಾಗಿಬಿಟ್ಟುದೇಕೆಂಬ ಆಶ್ಚರ್ಯ ಅವರ ಮುಖಗಳ ಮೇಲೆ ಒಡೆದು ಕಾಣುವಂತಿತ್ತು.

ಈ ಪ್ರಸಂಗದ ಅರ್ಥವನ್ನೂ ಅದರ ಇತಿಹಾಸವನ್ನೂ ಪ್ರತಾಪನು ಸಂಕ್ಷಿಪ್ತವಾಗಿ ವಿವರಿಸಿ ಹೇಳಿದ ನಂತರ ಎಲ್ಲರೂ ಸೇರಿ ರಾಜಧಾನಿಯೆಡೆಗೆ ನಡೆದರು.

ಪ್ರತಾಪನು ನಿರೀಕ್ಷಿಸಿದ್ದಂತೆಯೆ ಒಮ್ಮೆ ಮಹಾನಗರವಾಗಿದ್ದ ಅವನ ರಾಜಧಾನಿಯ ಅವಶೇಷ ಕೂಡ ಆ ಸ್ಥಳದಲ್ಲಿ ಉಳಿದಿರಲಿಲ್ಲ. ಮೊಟ್ಟಮೊದಲು ಅವನು ಕಂಡಿದ್ದಂತೆ ಅದು ಹಾಳು ಮರುಭೂಮಿ ಮಾತ್ರವಾಗುಳಿದಿತ್ತು. ಆ ಮರುಭೂಮಿಯಲ್ಲಿಯೆ ಓಯಾಸಿಸಿನಂತಿದ್ದ ಹಸಿರು ತುಂಡೊಂದರ ಮೇಲೆ ಪ್ರತಾಪನ ವೃದ್ಧ ತಾಯಿ ತಂದೆಯರು ನರಳುತ್ತ ಕುಳಿತಿದ್ದರು. ಅವರ ಮಟ್ಟಿಗೆ ಅದು ಇನ್ನೂ ಹೆಚ್ಚಿನ ದುಃಖಪ್ರಸಂಗವಾಗಿತ್ತು. ಏಕೆಂದರೆ, ಒಮ್ಮೆ ಕಳೆದುಹೋಗಿದ್ದ ರಾಜಗೌರವಗಳು ಮತ್ತೆ ಪ್ರಾಪ್ತವಾದ ಹೊಸದರಲ್ಲಿಯೆ- ಅದೂ ಈ ಇಳಿವಯಸ್ಸಿನಲ್ಲಿ ಕಳೆದುಹೋದುದು ಅವರಿಗೆ ಚೇತರಿಸಿಕೊಳ್ಳಲು ಅಸಾಧ್ಯವಾದ ಪೆಟ್ಟಾಗಿತ್ತು.

"ಅಮ್ಮಾ ನಾನಿತ್ತ ಅಂಗವಸ್ತ್ರಗಳನ್ನು ಇಂದ್ರಕುಮಾರಿಗೇಕಿತ್ತೆ?" ಪ್ರತಾಪ ತಡೆಯಲಾಗದೆ ಕೇಳಿದ.

"ಅಯ್ಯೋ ಕಂದಾ, ಅದರಿಂದ ನಮಗೆಲ್ಲ ಈ ಅವಸ್ಥೆಯುಂಟಾಗುವುದೆಂದು ನನಗೆ ಎಳ್ಳಷ್ಟೂ ಅನಿಸಲಿಲ್ಲ. ನೀನು ಬೇಟೆಗೆಂದು ಹೋದನಂತರ ನೀನದನ್ನು ನನ್ನ ಹತ್ತಿರವೇ ಬಿಟ್ಟುಹೋಗಿರಬೇಕೆಂದು ಅವಳು ತರ್ಕಿಸಿ ನನ್ನನ್ನು ವಿಪರೀತ ಹೊಗಳಲಾರಂಭಿಸಿದಳು. ಅರೆಕ್ಷಣ ಮಾತ್ರ ತೊಟ್ಟು ಮರಳಿ ಕೊಡುವುದಾಗಿ ಆಕೆ ಹೇಳಿದಾಗ ನಾನು ಕೊಡದಿರುವುದೆಂತು? ಆದರೆ ಆಕೆ ಅದನ್ನು ಧರಿಸಿದ ಕ್ಷಣವೇ ಆ ನಾಲ್ವರೂ ಮಾಯವಾಗಿಬಿಟ್ಟರು. ಅವರೊಂದಿಗೇ ನಮ್ಮದೆಂದು ನಾನು ಬಗೆ

ದಿದ್ದ ಅರಸೊತ್ತಿಗೆ, ಸಿರಿ-ಸಂಪತ್ತೆಲ್ಲ ಗಾಳಿಯಲ್ಲಿ ತೇಲಿಕೊಂಡು ಹೋದಂತೆ ಕಣ್ಮರೆಯಾದುವು! ಓ! ನೀನು ಆ ಮಾಟಗಾತಿಯರನ್ನು ಮದುವೆಯಾದರೂ ಯಾಕಾದ?" ತಾಯಿ ಕಣ್ಣೀರಿಡುತ್ತದುಃಖಿಸಲಾರಂಭಿಸಿದಳು.

ಆಗ ಪ್ರತಾಪ ಅವಳನ್ನು ಸಮಾಧಾನಪಡಿಸಿ ತನ್ನ ದೈವಕ್ಕಾಗಿ ಯಾರನ್ನೂ ಹಳಿಯುವಂತಿಲ್ಲವೆಂದೂ, ಈ ಮೊದಲು ತಾನು ತನ್ನ ಕೈಕೆಳಗಿನ ಅಧಿಕಾರಿಯೊಬ್ಬನನ್ನು ಅರಸನನ್ನಾಗಿಸಿ ಬಿಟ್ಟುಕೊಟ್ಟು ಬಂದಿದ್ದ ರಾಜ್ಯಕ್ಕೆ ತಂದೆ ತಾಯಿಗಳನ್ನೂ ಸೋದರರನ್ನೂ ಕರೆದುಕೊಂಡು ನಡೆದ.

ನಗರವನ್ನು ತಲುಪಿದ ನಂತರ ಅರಮನೆಗೇ ಎಲ್ಲರೂ ನೇರವಾಗಿ ತೆರಳಿದರು. ಆಗ



ಪ್ರತಾಪ ಹೆಬ್ಬಾಗಿಲಲ್ಲಿಯೆ ಎಲ್ಲರೊಡನೆ ನಿಂತು ಕಾವಲುಗಾರ ದೂತನೊಡನೆಯೆ ಅರಸನಿಗೆ ಸಂದೇಶವೊಂದನ್ನು ಕಳಿಸಿ, "ನಿಮಗೆ ಈ ರಾಜ್ಯವನ್ನಿತ್ತ ಪ್ರತಾಪನು ಬಂದು ಬಾಗಿಲಲ್ಲಿ ತನ್ನ ಕುಟುಂಬದೊಂದಿಗೆ ಕಾದಿದ್ದಾನೆ," ಎಂದು ತಿಳಿಸಿದ.

ದೂತನು ಕೂಡಲೆ ಅರಸನಿಗೆ ಈ ಸಂದೇಶವನ್ನು ಸಾದರಪಡಿಸಲಾಗಿ ಅವನು, "ಪ್ರತಾಪನು ವಾಹನದಲ್ಲಿ ಬಂದಿರುವನೋ ನಡೆಯುತ್ತಲೋ ?"ಎಂದು ವಿಚಾರಿಸಿದ.

"ನಡೆಯುತ್ತ ಬಂದಿದ್ದಾರೆ ಮಹಾಸ್ವಾಮಿ !"ದೂತ ಉತ್ತರಿಸಿದ.

"ಹಾಗಿದ್ದರೆ ನಾನೀಗ ಕಾರ್ಯ ಮುಗ್ನನಾಗಿರುವುದಾಗಿಯೂ ಸದ್ಯ ಅವನನ್ನು ಕಾಣುವುದು ಸಾಧ್ಯವಿಲ್ಲವೆಂದೂ ತಿಳಿಸು. ಅವನು ತಾನಾಗಿಯೇ ತೊಲಗದಿದ್ದರೆ ಅವನನ್ನು ಒತ್ತಾಯದಿಂದ ನಗರದಿಂದ ಹೊರಗಟ್ಟು," ಎಂದು ಅರಸ ಅಜ್ಞಾಪಿಸಿದ.

ದೂತ ಹೊರಗೆ ಬಂದು ಪ್ರತಾಪನನ್ನು ಕುರಿತು, "ಸ್ವಾಮಿ, ನಮ್ಮ ಮಹಾರಾಜರು ಈಗ ಮಹತ್ವದ ರಾಜಕಾರ್ಯದಲ್ಲಿ ತೊಡಗಿದ್ದಾರೆ. ನಿಮ್ಮನ್ನು ಕಾಣಲು ಅವರಿಗೆ ಸಾಧ್ಯವಾಗಲಿಕ್ಕಿಲ್ಲ. ನೀವೆಲ್ಲ ಹೊರಟು ಹೋಗುವುದೇ ಲೇಸೆಂದೆನಿಸುತ್ತದೆ." ಎಂದು ತಿಳಿಸಿದಾಗ ಪ್ರತಾಪ ಒಣನಗೆ ನಕ್ಕು, "ಈ ಮನುಷ್ಯ ಅತ್ಯಂತ ವಿಶ್ವಾಸದಿಂದ ನನ್ನ ಸೇವೆ ಮಾಡಿದ್ದರಿಂದಲೇ ನಾನೀ ರಾಜ್ಯದ ಅರಸೊತ್ತಿಗೆಯನ್ನು ಅವನಿಗೆ ಕೊಟ್ಟೆ. ಈಗ ಅಧಿಕಾರದ ರುಚಿಯನ್ನವನು ಕಂಡಿರುವಾಗ ನನಗೆ ಈ ರೀತಿ ಹೇಳುವುದು ಸ್ವಾಭಾವಿಕವೇ ಇದೆ. ಅದೂ ನಾನು ಬಲಹೀನನಾಗಿರುವಾಗ ಇನ್ನೂ ಹೆಚ್ಚು ಸ್ವಾಭಾವಿಕವೆನಿಸುವಂತಿದೆ !" ಎಂದು ತನ್ನವರಿಗೆ ಹೇಳುತ್ತ ಅವರೆಲ್ಲರನ್ನೂ ನಗರದ ಹೊರಗಡೆ ಕರೆದುಕೊಂಡು ನಡೆದ.

ಅಲ್ಲಿಂದ ಅವರೆಲ್ಲ ನೆರೆಯ ಗ್ರಾಮವೊಂದಕ್ಕೆ ತೆರಳಿದರು. ಪ್ರತಾಪನು ಅಲ್ಲಿಯ ಮುಖ್ಯಾಧಿಕಾರಿಯನ್ನು ಕಂಡು ತಾವೆಲ್ಲ ರಾಜಮನೆತನಕ್ಕೆ ಸೇರಿದವರೆಂದೂ ಏನೋ ದುರ್ದೈವದಿಂದಾಗಿ ಇಂಥ ಪರಿಸ್ಥಿತಿ ತಮಗೊದಗಿದೆಂದೂ ಹೇಳಿದುದಲ್ಲದೆ, "ನೀವು ನನಗೊಂದು ಉಪಕಾರ ಮಾಡಬೇಕು. ಮಹತ್ವದ ಕಾರ್ಯವೊಂದಕ್ಕಾಗಿ ನಾನು ಬೇರೂರಿಗೆ ಹೋಗಬೇಕಿದೆ. ಕೆಲ ದಿನಗಳಲ್ಲಿಯೇ ಹಿಂತಿರುಗುವೆ. ಅದುವರೆಗೆ ನನ್ನ ತಾಯ್ತಂದೆಗಳನ್ನೂ ಸೋದರರನ್ನೂ ನಿಮ್ಮಲ್ಲಿಟ್ಟುಕೊಳ್ಳಲು ನಿಮಗೆ ಸಾಧ್ಯವಾಗಬಹುದೆ ?" ಎಂದು ಕೇಳಿದ.

ಅಧಿಕಾರಿಯು ನಸುನಗುತ್ತ, "ಕೆಲವೊಂದು ಸಮಯದಲ್ಲಿ ಒಣಗಿದ ಸಣ್ಣ ಎಲೆಗಳೂ ಉಪಯೋಗ ಬೀಳುತ್ತವೆಂಬುದು ನಿಮಗೆ ಗೊತ್ತಿಲ್ಲವೆ ? ನೀವು ಯಾವ ಚಿಂತೆಯನ್ನೂ ಮಾಡಕೂಡದು; ಅವರನ್ನು ಇಟ್ಟುಕೊಂಡು ಕಾಪಾಡುವ ಹೊಣೆ ನನ್ನದು. ಆದರೆ ಮೊಟ್ಟಮೊದಲು ನೀವೆಲ್ಲ ಸ್ನಾನ ಮುಗಿಸಿ ಊಟ ಮಾಡಿರಿ"ಎಂದು ನುಡಿದ.

"ನಿಮ್ಮ ಉಪಕಾರವನ್ನು ನಾನೆಂದಿಗೂ ಮರೆಯುವದಿಲ್ಲ. ಕಳೆದುಹೋದ ನನ್ನ ವೈಭವವನ್ನು ಮರಳಿ ಸಂಪಾದಿಸದೆ ನಾನು ಊಟ ಮಾಡುವುದಿಲ್ಲವೆಂದು ಪ್ರತಿಜ್ಞೆಗೈದಿದ್ದೇನೆ. ಉಳಿದವರಿಗೆ ಮಾತ್ರ ಉಪಚಾರವಾದರೆ ಸಾಕು,"ಎಂದು ಪ್ರತಾಪ ಉತ್ತರಿಸಿದ.

"ನಿಮಗೆ ತಿಳಿದಂತೆಯೆ ಮಾಡಿರಿ. ನಿಮ್ಮ ಯತ್ನದಲ್ಲಿ ನಿಮಗೆ ಕಲ್ಯಾಣವಾಗಲಿ."

ಎಲ್ಲರನ್ನೂ ಬೀಳ್ಕೊಂಡು ಪ್ರತಾಪ ತನ್ನೆಲ್ಲ ಉನ್ನತಿಗೂ ಕಾರಣಳಾಗಿದ್ದ ಮುದುಕಿಯ ಕಡೆಗೆ ನಡೆದ.

ಪ್ರತಾಪ ಹೊರಟಿದ್ದಂತೆಯೆ ಅರಣ್ಯದಲ್ಲಿ ಹಳ್ಳವೊಂದನ್ನು ದಾಟಬೇಕಾಯಿತು. ಕೆಳಗೆ ಮುಖಮಾಡಿ ನೀರಲ್ಲಿ ನೋಡಿದಾಗ ಇರುವೆಗಳ ಗುಂಪೊಂದು ತೇಲಿ ಹೋಗುತ್ತಿದ್ದುದು

ಕಂಡಿತು. ಅದರಿಂದ ಅವನ ಹೃದಯ ಕರಗಿ ನೀರಾಯಿತು. ಹತ್ತಿರದ ಒಂದು ಎಲೆಯನ್ನು ಎತ್ತಿ ನೀರಲ್ಲಿ ಚೆಲ್ಲಿದ. ಇಡೀ ಇರುವೆಯ ಗುಂಪು ಎಲೆಯ ಮೇಲೆ ಬಂದಾಗ ಅದನ್ನೆತ್ತಿ ನೆಲದ ಮೇಲಿರಿಸಿದ. ಆಗ ಆ ಇರುವೆಗಳ ಮುಖ್ಯಸ್ಥ ಕೃತಜ್ಞತೆಯಿಂದ ಬಾಗಿ ಪ್ರತಾಪನಿಗೆ ತನ್ನದೇ ಆದ ಭಾಷೆಯಲ್ಲಿ ಇಂದಿನ ಉಪಕಾರಕ್ಕೆ ಸೂಕ್ತ ಸಮಯದಲ್ಲಿ ಪ್ರತ್ಯುಪಕಾರ ಮಾಡುವುದಾಗಿ ವಚನವಿತ್ತ.

ಮುಂದಡಿಯಿಡುವುದರೊಳಗಾಗಿಯೆ ದೊಡ್ಡದೊಂದು ಹದ್ದು ಬಂದು ದಂಡೆಯ ಮೇಲಿದ್ದ ಏಡಿಯನ್ನು ಅಪಹರಿಸಿ ಕೊಂಡೊಯ್ಯಲು ಹವಣಿಸುತ್ತಿತ್ತು. ಬೆದರಿದ ಏಡಿ ಸಹಾಯಕ್ಕಾಗಿ ಚೀರುತ್ತಿತ್ತು. ಅದನ್ನು ನೋಡಿದ ಪ್ರತಾಪ ಹದ್ದನ್ನು ಹೊಡೆದೋಡಿಸಿ ಸ್ವಪ್ರಾಣರಕ್ಷಣೆಗಾಗಿ ಹಾತೊರೆಯುತ್ತಿದ್ದ ಏಡಿಯನ್ನು ಎತ್ತಿ ನೀರಲ್ಲಿ ಹಾಕಿದ. ತುಂಬಿಬಂದ ಹೃದಯದಿಂದ ಏಡಿ ಯೋಗ್ಯ ಸಮಯದಲ್ಲಿ ಪ್ರತ್ಯುಪಕಾರಮಾಡುವುದಾಗಿ ವಚನವಿತ್ತು ನೀರಲ್ಲಿ ಮುಳುಗಿತು.

ಮುಂದೊಂದೆಡೆ ಪ್ರತಾಪ ನೀರಿಲ್ಲದೆ ಸಾಯಲಾಗಿದ್ದ ಕೀಟವೊಂದನ್ನು ನೀರಲ್ಲಿರಿಸಿ ಅದರ ಜೀವನವನ್ನುಳಿಸಿದ.

ಪ್ರತಾಪ ಮುದುಕಿಯ ಗುಡಿಸಲನ್ನು ತಲುಪಿದಾಗ ಅವನು ಹಸಿವೆ, ನೀರಡಿಕೆಗಳಿಂದ ದಣಿದು ಅದೆಷ್ಟು ಕಂಗೆಟ್ಟು ಹೋಗಿದ್ದನೆಂದರೆ ಹೊಸ್ತಿಲಲ್ಲಿಯೇ ಎಚ್ಚರದಪ್ಪಿ ಬಿದ್ದುಬಿಟ್ಟ. ಆದರೆ ಆಗ ಆ ಮುದುಕಿ ಎಲ್ಲಿಯೋ ಹೊರಗೆ ಹೋಗಿದ್ದಳು. ಅಂತೆಯೆ ಜೀವನ್ಮರಣಗಳ ನಡುವೆ ಓಲಾಡುತ್ತ ಅವನು ಅಲ್ಲಿಯೆ ಬಿದ್ದಿದ್ದ.

ಮುದುಕಿ ಮರಳಿ ಬಂದಾಗ ಪ್ರತಾಪನ ಸ್ಥಿತಿಯನ್ನು ಕಂಡು ಗಾಬರಿಗೊಂಡಳು. ಪರೀಕ್ಷಿಸಿ ನೋಡಿದಾಗ ಅವನ ಉಸಿರು ಇನ್ನೂ ಆಡುತ್ತಿತ್ತು. ನಾಡಿ ಮಂದವಾಗಿತ್ತು ಎಂದು ತಿಳಿಯಿತು. ಒಡನೆಯೆ ಆಕೆ ಅವನಿಗೆ



ಯಾವುದೋ ಒಂದು ಕಷಾಯ ಕುಡಿಸಿ ನಂತರ ಹಾಲನ್ನು ಹಾಕಿದಳು. ಅವಳ ಉಪಚಾರದಿಂದಾಗಿ ಪ್ರತಾಪ ಮತ್ತೆ ಸಂಪೂರ್ಣ ಚೇತರಿಸಿಕೊಂಡ. ತನ್ನ ದೇಹಸ್ಥಿತಿ ಸರಿಗೊಂಡಿದೆಯೆಂದು ಅವನಿಗೆ ವಿಶ್ವಾಸವುಂಟಾದ ನಂತರ ಪ್ರತಾಪ ತನ್ನ ಕತೆಯನ್ನೆಲ್ಲ ಪೂರ್ಣ ವಿವರಿಸಿ ಹೇಳಿದನು. ಕೊನೆಗೆ, "ಅಮ್ಮಾ, ಕಳೆದುಹೋದ ನನ್ನ ವೈಭವವನ್ನೆಲ್ಲ ಮರಳಿ ಪಡೆದೇತೀರುವೆನೆಂಬ ಪ್ರತಿಜ್ಞೆಗೈದು ನಾನು ಇಲ್ಲಿಗೆ ಬಂದಿರುವೆ. ಅದಕ್ಕಾಗಿ ನೀನಲ್ಲದೆ ಇನ್ನಾರು ನನಗೆ ದಾರಿ ತೋರಬಲ್ಲರು?" ಎಂಬ ಪ್ರಶ್ನೆಯೊಂದಿಗೆ ಮುಗಿಸಿದ.

"ಕಂದಾ, ಆ ನಾಲ್ವರೂ ಕನ್ಯೆಯರನ್ನು ಮರಳಿ ನಾನು ನಿನಗೆ ದೊರಕಿಸಿಕೊಡಬಲ್ಲೆ. ಆದರೆ ಅದರಿಂದಾಗಿ ಅವರು ನಿನಗೆ ಶಾಪವೀಯಬಹುದಾಗಿದೆ. ಹಾಂ...ತಡೆ. ಅದರ ನಿವಾರಣೆಗೆ ಒಂದು ಮಾರ್ಗವಿದೆ. ಅದೋ, ಅಲ್ಲಿ ನೋಡು. ಅಲ್ಲಿ ಪವಿತ್ರ ಅಶ್ವತ್ಥ ವೃಕ್ಷವೊಂದಿದೆ. ಅದರ ಬದಿಯ ಸರೋವರಕ್ಕೇ ಅವರು ನಾಲ್ವರು ವಿಹಾರಕ್ಕಾಗಿ ನಿತ್ಯವೂ ಬರುತ್ತಲಿದ್ದಾರೆ. ಆ ವೃಕ್ಷದಡಿಯಲ್ಲಿ ಕುಳಿತು ಅವರನ್ನು ಕುರಿತು ನೀನು ತದೇಕ ಚಿತ್ತದಿಂದ ಧ್ಯಾನ ಮಾಡಿದರೆ ನಿನ್ನ ಆಸೆ ಕೈಗೂಡುವುದೆಂದು ನನಗನಿಸುವುದು. ದೇವರು ನಿನಗೆ ಕಲ್ಯಾಣ ಮಾಡುವನು, ಹೋಗಿ ಬಾ!" ಎಂದು ವೃದ್ಧೆ ಆಶೀರ್ವದಿಸಿದಳು.

ಅದರಂತೆಯೆ ಪ್ರತಾಪ ಆ ಪವಿತ್ರ ಅಶ್ವತ್ಥ ವೃಕ್ಷದ ಬಳಿ ಹೋಗಿ ಅದರಡಿಯಲ್ಲಿ ಹಾಯಾಗಿ ಕುಳಿತುಕೊಂಡು ಆ ನಾಲ್ವರನ್ನೂ ಕುರಿತು ಏಕಾಗ್ರಚಿತ್ತದಿಂದ ಅನ್ನ, ನೀರುಗಳಿಲ್ಲದೆ ತಪಸ್ಸು ಪ್ರಾರಂಭಿಸಿದ.

ಸರೋವರಕ್ಕೆ ಬಂದ ಯಾರ ಕಣ್ಣಿಗೂ ಬೀಳಲೇಬೇಕಾದಂತಿತ್ತು ಪ್ರತಾಪನು ಕುಳಿತಿದ್ದ ಸ್ಥಳ. ಆದರೆ ನಿತ್ಯವೂ ಅಲ್ಲಿಗೆ ಬರುತ್ತಿದ್ದ ಆ ನಾಲ್ವರು ದೇವಕನ್ನಿಕೆಯರು ಮಾತ್ರ ಒಮ್ಮೆ ತಮ್ಮ ಪತಿಯಾಗಿದ್ದ ಅವನನ್ನು ಕಂಡೂ ಕಾಣದವರಂತಿದ್ದರು.

ನಲವತ್ತು ದಿನಗಳು ಹೀಗೆಯೆ ಕಳೆದ ನಂತರವೂ ಏನೂ ಫಲವಿಲ್ಲದ್ದನ್ನು ಕಂಡುಕೊಂಡ ಪ್ರತಾಪನು ತನ್ನ ಜೀವನವು ವ್ಯರ್ಥವೆಂದು ಬಗೆದು ಅದನ್ನು ಕೊನೆಗಾಣಿಸಿ ಬಿಡಬೇಕೆಂದು ನಿರ್ಧರಿಸಿದ. ಅದಕ್ಕೂ ಮೊದಲು ಶ್ರೀಹರಿಯ ನಾಮೋಚ್ಚಾರವನ್ನಾದರೂ ಮಾಡಬೇಕೆಂದು ಮನಸ್ಸಿಗನಿಸಿದ್ದರಿಂದ ಪ್ರತಾಪ ನಾರಾಯಣನನ್ನು ನೆನೆಸಹತ್ತಿದ.

"ಗೋವಿಂದ, ಅಚ್ಯುತ, ಪದ್ಮನಾಭ....." ಎಂದು ಪ್ರತಾಪ ದೇವನಾಮೋಚ್ಚಾರವನ್ನು ಪ್ರಾರಂಭಿಸಿದೊಡನೆಯೆ ಒಮ್ಮೆ ಅವನ ಹೆಂಡತಿಯರಾಗಿದ್ದ ಆ ನಾಲ್ವರೂ ದೇವಕನ್ನಿಕೆಯರು ಒಮ್ಮೆಲೆ ಒಬ್ಬರ ಮುಖವನ್ನೊಬ್ಬರು ನೋಡತೊಡಗಿದರು. ಪ್ರತಾಪನ ಇಚ್ಛೆಯೇನೆಂಬುದು ಅವರಿಗೆಲ್ಲ ಎಂದೋ ಅರ್ಥವಾಗಿತ್ತಾದರೂ ಉಳಿದವರು ಅಣಕಿಸಬಹುದೆಂಬ ಭಯದಿಂದ ಪ್ರತಿಯೊಬ್ಬರೂ ಅದುವರೆಗೆ ಬಹಿರಂಗವಾಗಿ ಮಾತಾಡಿರಲಿಲ್ಲ. ಆದರೆ ಈಗ ತಮ್ಮ ಮನಸ್ಸಿನಲ್ಲಿದ್ದುದನ್ನು ಪರಸ್ಪರ ಎಲ್ಲರೂ ಹೊರಗೆಡವಿ ಪ್ರತಾಪನನ್ನು ಹಾಗೆಯೆ ಬಿಟ್ಟರೆ ಅವನು ಮರಣಹೊಂದಬಹುದೆಂದೂ ಅದರಿಂದ ತಾವು ಪಾಪಕ್ಕೆ ಗುರಿಯಾಗಬಹುದೆಂದೂ ಅವರು ಬೆದರಿದರು.

ಅಂತೆಯೆ ನಾಲ್ವರೂ ಧಾವಿಸಿಬಂದು ಮೂರ್ಛೆ ಹೋಗುವುದರಲ್ಲಿದ್ದ ಪ್ರತಾಪನನ್ನು ಹಿಡಿದರು. ಒಬ್ಬಳು ಅವನ ತಲೆಯನ್ನು ತನ್ನ ತೊಡೆಯ ಮೇಲಿರಿಸಿಕೊಂಡರೆ ಇನ್ನೊಬ್ಬಳು ಸರೋವರದಿಂದ ನೀರು ತಂದು ಮುಖಕ್ಕೆ ಸಿಂಪಡಿಸತೊಡಗಿದಳು. ಮೂರನೆಯವಳು ಸೀರೆಯ ಸೆರಗಿನಿಂದ ಗಾಳಿ ಹಾಕುತ್ತ ನಿಂತರೆ ಕೊನೆಯವಳು ಅಸಹಾಯಕಳಂತೆ ನೋಡುತ್ತ ನಿಂತಿದ್ದಳು.

ಪ್ರತಾಪನಿಗೆ ಪೂರ್ಣ ಪ್ರಜ್ಞೆ ಬಂದಾಗ ತನ್ನ

ಸುತ್ತಲೂ ಇದ್ದ ದೇವಕನ್ಯೆಯರನ್ನು ಕಂಡಾಗ ಅವನ ಮುಖದ ಮೇಲೆ ಗೆಲುವಿನ ನಸುನಗು ಮೂಡಿತು. ಅವರ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ತನ್ನ ಹೃದಯವನ್ನೇ ಅವರೆದುರು ಬಿಚ್ಚಿಟ್ಟ.

ಅವನ ಮಾತು ಕೇಳಿದಾಗ ಅವರ ಹೃದಯವೂ ಕರಗಿತು. ಅವರೆಲ್ಲ ಒಮ್ಮೆಲೇ "ನಾವು ಅಷ್ಟೇನೂ ಕಲ್ಲೆದೆಯವರೆಂದು ಭಾವಿಸಬೇಡಿ. ಮೊದಮೊದಲು ನಮಗೂ ದುಃಖವಾದರೂ ನಮ್ಮ ದೈವವನ್ನು ನೆನೆದು ನಾವು ಸಮಾಧಾನ ಹಚ್ಚಿಕೊಳ್ಳಬೇಕಾಯಿತು. ನಾವು ಅಮರರೆಂಬುದನ್ನೂ ಅದಕ್ಕಾಗಿ ನಮ್ಮ ಜೀವನದ ರೀತಿಯೇ ಬೇರೆ ಎಂಬುದನ್ನೂ ನೀವು ಮರೆಯದಿರಿ. ಅಂತೆಯೇ ನಾವೆಲ್ಲ ಹಿಂದಿನದನ್ನು ಮರೆತುಬಿಟ್ಟು ನಮ್ಮಷ್ಟಕ್ಕೆ ನಾವು ಸುಖದಿಂದಿರುವುದೇ ಸರಿಯಲ್ಲವೆ?" ಒಂದು ಒಕ್ಕೊರಲಿನಿಂದ ನುಡಿದರು.

"ನಿಮ್ಮಿಂದ ಇಂಥ ಮಾತು ಕೇಳಲಿಕ್ಕೆಂದೇ ನಾನು ಇಷ್ಟೆಲ್ಲ ಕಷ್ಟ ಪರಂಪರೆಯನ್ನು ಸಹಿಸಿದೆನೆ? ಇದು ಮನುಷ್ಯನನ್ನು ಪುನರುಜ್ಜೀವಿಸಿ ಮತ್ತೆ ಕೊಂದಂತೆ. ಈಗಲೇ ಇಲ್ಲಿಯೆ ನನ್ನನ್ನು ನಿಮ್ಮ ಕೈಗಳಿಂದಲೇ ಕೊಂದು ನಿಮ್ಮ ಪಾಡಿಗೆ ನೀವು ಹೋಗಿಬಿಡಿ," ಎಂದು ತನ್ನ ಹಿಡಿತವನ್ನು ಪ್ರತಾಪ ಇನ್ನೂ ಬಿಗಿಗೊಳಿಸಿದ.

ಅದರಿಂದ ಅವರೆಲ್ಲರೂ ಭಯಚಕಿತರಾದರು. ಕೊನೆಗೆ ಇಂದ್ರಕುಮಾರಿಯೇ ಮುಂದಾಗಿ, "ರಾಜಕುಮಾರ, ಸತ್ಯ ಸಂಗತಿಗಳನ್ನು ಹೇಳಿದರೆ ನೀವು ಒಪ್ಪುವುದಿಲ್ಲ. ಈಗ ಒಂದು ಕಾರ್ಯ ಮಾಡೋಣ. ನಾವು ನಿಮ್ಮನ್ನು ದೇವೇಂದ್ರನ ಸನ್ನಿಧಿಗೆ ಕರೆದೊಯ್ಯುತ್ತೇವೆ. ದೇವತೆಗಳ ಒಡೆಯನಾದ ಅವನ ಮನವೊಲಿಸಲು ನೀವು ಶಕ್ತರಾದರೆ ನಿಮ್ಮ ಮನಸ್ಸಿನಲ್ಲಿರುವಂತೆಯೇ ಆಗಲಿ. ಇಷ್ಟು ಮಾತ್ರ ನಮ್ಮಿಂದ ಸಾಧ್ಯ" ಎಂದು ಹೇಳಿದಳು.

ಅದಕ್ಕೆ ಪ್ರತಾಪನೊಪ್ಪಿದನಂತರ ಅವನನ್ನು ಒಂದು ಏಡಿಯಾಗಿ ಪರಿವರ್ತಿಸಿ ತನ್ನೊಂದಿಗೆ ತಂದಿದ್ದ ಚಿಕ್ಕ ಪೆಟ್ಟಿಗೆಯೊಂದರಲ್ಲಿರಿಸಿಕೊಂಡು ಸ್ವರ್ಗಕ್ಕೆ ಎಲ್ಲರೊಂದಿಗೆ ಕರೆದೊಯ್ದಳು.

ಅಲ್ಲಿಗೆ ತಲುಪಿದ ನಂತರ ಅವನನ್ನು ಅವನ ಮೂಲ ರೂಪಕ್ಕೆ ಪರಿವರ್ತಿಸಿ ಅವನಿಗೆ ಶ್ರೇಷ್ಠ ಪಕ್ವಾನ್ನಗಳಿಂದ ಭೋಜನ ಮಾಡಿಸಿ ಅತ್ಯುತ್ಕೃಷ್ಟ ಉಡುಪುಗಳನ್ನು ತೊಡಿಸಿ ಮಾಂತ್ರಿಕ ಖಡ್ಗವೊಂದನ್ನಿತ್ತು ದೇವೇಂದ್ರನ ಆಸ್ಥಾನಕ್ಕೆ ಕಳಿಸಿಕೊಟ್ಟರು.

(ಮುಂದುವರೆಯುವುದು)

## ವಿಮರ್ಶೆ

**ಡಾ.** ಸಾಮ್ಯುಯಲ್ ಜಾನ್ಸನ್ನರಿಗೆ ಇತರರ ಮಾತುಗಳನ್ನು ತಮ್ಮದೇ ಎಂಬಂತೆ ಬಳಸುವವರನ್ನು ಕಂಡರೆ ಆಗುತ್ತಿರಲಿಲ್ಲ. ಒಮ್ಮೆ ಲೇಖಕನೊಬ್ಬ ಉಲ್ಲೇಖಗಳಿಂದ ತುಂಬಿಹೋಗಿದ್ದ ತನ್ನ ಪುಸ್ತಕವೊಂದನ್ನು ಜಾನ್ಸನ್ನರಿಗೆ ಕೊಟ್ಟು ಅನಿಸಿಕೆ ತಿಳಿಸಲು ಕೋರಿದ. ಪುಸ್ತಕದ ಪುಟಗಳ ಮೇಲೆ ಕಣ್ಣಾಡಿಸಿದ ಜಾನ್ಸನ್, "ನಾನು ಈ ಪುಸ್ತಕವನ್ನು ನೋಡಿದ್ದೇನೆ. ಅದರ ಕೆಲಭಾಗ ಚೆನ್ನಾಗಿದೆ. ಇನ್ನು ಕೆಲ ಭಾಗದಲ್ಲಿ ಸ್ವಂತಿಕೆ ಕಂಡು ಬರುತ್ತದೆ" ಎಂದಾಗ ಲೇಖಕ ಖುಷಿಯಾಗಿಬಿಟ್ಟ. ಆದರೆ ಅಷ್ಟರಲ್ಲಿ ಜಾನ್ಸನ್, "ದುರದೃಷ್ಟವಶಾತ್ ಅದರ ಚೆನ್ನಾಗಿರುವ ಭಾಗ ಸ್ವಂತದ್ದಲ್ಲವೆಂದೂ ಸ್ವಂತಿಕೆ ಇರುವ ಭಾಗ ಚೆನ್ನಾಗಿಲ್ಲವೆಂದೂ ಕಂಡು ಬಂತು" ಎಂದಾಗ ಲೇಖಕ ಗಾಳಿ ಹೋದ ಬೆಲೂನಿನಂತಾದ.

ಕೆ. ವೆಂಕಣ್ಣಾಚಾರ್

# ಜ್ಯೋತಿಶ್ಶಾಸ್ತ್ರ:

## ವಾದ-ವಿವಾದ-ವಿನೋದ

ಜ್ಯೋತಿಶ್ಶಾಸ್ತ್ರ ವೈಜ್ಞಾನಿಕ; ಅದು ವಾಸ್ತವದ ನೆಲೆಗಟ್ಟಿನ ಮೇಲೆ ನಿಂತಿದೆ ಎಂದು ಅದರ ಪ್ರತಿಪಾದಕರ ವಾದ. ಅದೊಂದು ಅಂಧಶ್ರದ್ಧೆಯ, ಮುಗ್ಧ ಜನರನ್ನು ಮರುಳು ಮಾಡುವ ಅವೈಜ್ಞಾನಿಕವಾದ ಒಂದು ಬೂಟಾಟಿಕೆ ಎಂದು ಅದರ ವಿರೋಧಿಗಳ ಪ್ರತಿವಾದ. ಜ್ಯೋತಿಶ್ಶಾಸ್ತ್ರ ಮತ್ತು ಖಗೋಲಶಾಸ್ತ್ರದ ಅವಿನಾಭಾವ ಸಂಬಂಧದ ಬಗೆಗಾಗಲಿ, ಜ್ಯೋತಿಶ್ಶಾಸ್ತ್ರವು ಬ್ರಹ್ಮಾಂಡದಲ್ಲಿ ತೇಲುತ್ತಿರುವ ಗ್ರಹಗಳ ಗತಿಯೊಂದಿಗೆ ತನ್ನನ್ನು ಹೆಣೆದುಕೊಂಡಿರುವ ಯಥಾರ್ಥತೆಯ ಬಗೆಗಾಗಲಿ ಇರುವ ವಾದ, ವಿವಾದಗಳ ನಡುವೆ ವಿನೋದವೂ, ಕಾಕತಾಳೀಯವಾದ ಘಟನೆಗಳೂ ತೂರಿ ಬಂದಿರುವುದಂತೂ ನಿರ್ವಿವಾದ.

೧೮ನೇ ಮತ್ತು ೧೯ನೇ ಶತಮಾನಗಳಲ್ಲಿ ಯುರೋಪಿನ ಆಸ್ಥಾನಗಳಲ್ಲಿ ಜ್ಯೋತಿಷಿಗಳು ತುಂಬಾ ಪ್ರಭಾವಶಾಲಿಗಳಾಗಿದ್ದರು. ಭಾರತದಲ್ಲಂತೂ ಹಲವಾರು ಪ್ರಸಿದ್ಧ ವ್ಯಕ್ತಿಗಳು ಜ್ಯೋತಿಷಿಗಳ ಅಭಿಪ್ರಾಯಗಳ ಮೇಲೆಯೇ ತಮ್ಮ ರಾಜಕೀಯ ಗಾಳಿಪಟವನ್ನು ಹಾರಿಬಿಡುತ್ತಾರೆ. ಇಲ್ಲವೇ ರಾಜಕೀಯ ದಾಳಗಳನ್ನು ಉರುಳಿಸುತ್ತಾರೆ ಎಂಬುದು ಈಗ ಎಲ್ಲರಿಗೂ ಗೊತ್ತು.

* * * *

ಫ್ರಾನ್ಸಿನ ೧೪ನೇ ಲೂಯಿ ದೊರೆಗೊಬ್ಬ ಜ್ಯೋತಿಷಿ ಇದ್ದ.

ಆತ ಮಹಾ ಆಸೆಬುರುಕ. ಹಣದ ಸಂಪಾದನೆಯ ದಾರಿಯಲ್ಲಿ ಹಲವಾರು ಅಪರಾಧಗಳನ್ನೆಸಗಿದ್ದ. ದೊರೆಯ ಮೇಲೆ ಆತನ ಪ್ರಭಾವ ತುಂಬ. ದೊರೆಯಿಂದ ಆ ಜ್ಯೋತಿಷಿಯನ್ನು ದೂರವಿರುವ ಸದುದ್ದೇಶದಿಂದ ಆತನ ಎಲ್ಲ ಕಾರಸ್ಥಾನಗಳ ಬಗ್ಗೆ ಕಾರ್ಡಿನಲ್ ರಿಶಲೂ ಒಂದು ಕಡತವನ್ನು ದೊರೆಯಲ್ಲಿಗೆ ಕಳಿಸಿ, ಆತನ ಮರಣ ದಂಡನೆಗೆ ಶಿಫಾರಸ್ಸು ಮಾಡಿದ.

ದೊರೆ ಆ ಜ್ಯೋತಿಷಿಯನ್ನು ಕರೆಯಿಸಿ, "ನೀನು ಬಹಳ ವಿಷಯಗಳ ಬಗ್ಗೆ ಭವಿಷ್ಯ ಹೇಳಿರುವೆ. ಅವುಗಳಲ್ಲಿ ಬಹುತೇಕ ನಿಜವಾಗಿವೆ. ಆದರೆ, ನೀನು ನಿನ್ನ ಮರಣದ ಬಗ್ಗೆ ಜ್ಯೋತಿಷ್ಯ ಹೇಳಿಯೇ ಇಲ್ಲವಲ್ಲ" ಅಂದ. ಜ್ಯೋತಿಷಿ ಗಲಿಬಿಲಿಗೊಂಡ.

ಆತ ಕ್ಷಣಕಾಲ ಯೋಚಿಸಿ, "ಮಹಾಸ್ವಾಮಿ, ನನ್ನ ಮರಣದ ಭವಿಷ್ಯ ನನಗೆ ಗೊತ್ತು. ಆದರೆ, ಆ ಬಗ್ಗೆ ಯಾರಿಗೂ ಹೇಳದಿರುವುದೇ ಸೂಕ್ತ ಎಂದು ಭಾವಿಸಿದ್ದೇನೆ"ಅಂದ.

"ಅದೇಕೆ ಹಾಗೆ ?"ದೊರೆ ಕೇಳಿದ.

"ಮಹಾಸ್ವಾಮಿ, ನನ್ನ ಮರಣ ನೀವು ಸಾಯುವ ಒಂದು ವಾರಕ್ಕೆ ಮುಂಚೆ ಸಂಭವಿಸುತ್ತದೆ" ಎಂದು ಆ ಜ್ಯೋತಿಷಿ ಹೇಳಿದಾಗ, ರಾಜ ದೀರ್ಘಾಲೋಚನೆಯಲ್ಲಿ ಮುಳುಗಿದ. ನಂತರ,

* ಬಿ. ದತ್ತಾತ್ರೇಯ

ಸಾವರಿಸಿಕೊಂಡು, "ನನ್ನ ಹತ್ತಿರ ಸರಕಾರದಿಂದ ನಿನ್ನ ಹೇಯ ಅಪರಾಧ ಮತ್ತು ಅನುಚಿತ ಕಾರ್ಯಗಳ ಬಗ್ಗೆ ಹಾಗೂ ಅವುಗಳನ್ನು ಎಸಗಿದ್ದಕ್ಕಾಗಿ ನಿನಗೆ ಮರಣ ದಂಡನೆ ವಿಧಿಸಲು ಶಿಫಾರಸು ಮಾಡಿ ಒಂದು ಕಡತ ಬಂದಿದೆ. ನಿನಗೊಂದು ಕೊನೆಯ ಅವಕಾಶ ಕೊಟ್ಟದ್ದೇನೆ. ಇನ್ನೊಮ್ಮೆ ಇಂತಹ ಕೃತ್ಯಗಳನ್ನು ಎಸಗಿದೆಯಾದರೆ ನಿನಗೆ ಜೀವಾವಧಿ ಶಿಕ್ಷೆ ವಿಧಿಸುತ್ತೇನೆ" ಎಂದು ಹೇಳಿದ ರಾಜ.

ಆ ಜ್ಯೋತಿಷಿಗೆ ಕೊನೆಯ ಎಚ್ಚರಿಕೆ ಕೊಟ್ಟರುವುದಾಗಿ ಹೇಳಿದ ದೊರೆ, ಕಡತವನ್ನು ಕಾರ್ಡಿನಲ್ ರಿಶಲೂಗೆ ಹಿಂತಿರುಗಿಸಿ, ತನ್ನ ಅರಮನೆಯ ಉಸ್ತುವಾರಿಯನ್ನು ನೋಡುವವರನ್ನು ಕರೆಯಿಸಿ, ಆ ಜ್ಯೋತಿಷಿಯ ಇಷ್ಟಾನಿಷ್ಟಗಳನ್ನು ಅತಿ ಮುತುವರ್ಜಿಯಿಂದ ನೋಡಿಕೊಳ್ಳುವಂತೆ ತಾಕೀತು ಮಾಡಿದ. ಅಂದಿನಿಂದ ದೊರೆಯ ಭೋಜನದ ಮೇಜಿನಿಂದಲೇ ಮದಿರೆ ಮತ್ತು ಆಹಾರ ಆ ಜ್ಯೋತಿಷಿಗೆ ಸರಬರಾಜಾಗತೊಡಗಿತು.

* * * *

ಜ್ಯೋತಿಷ್ಯದಲ್ಲಿ ಇಂದಿರಾಗಾಂಧಿಯವರಿಗೆ ತುಂಬಾ ನಂಬಿಕೆ. ಐವತ್ತರ ದಶಕದ ಮಧ್ಯದಲ್ಲಿ ಒಂದು ಸಂಜೆ. ನೆಹರೂಜಿ, ತಮ್ಮ ವಿಶೇಷ ಕಾರ್ಯದರ್ಶಿ ಎಮ್.ಒ.ಮಥಾಯಿಯವರೊಡನೆ ಆಫೀಸನ್ನು ಸ್ವಲ್ಪ ಮುಂಚೆಯೇ ಬಿಟ್ಟು, ನೇರವಾಗಿ ಮೌಲಾನಾ ಆಜಾದ್‌ರ ಮನೆಗೆ ಹೋದರು. ಸಮಯ ಹಾಳು ಮಾಡುವುದನ್ನು ನೆಹರೂ ಎಂದೂ ಸಹಿಸುತ್ತಿರಲಿಲ್ಲ. ತಮ್ಮ ಮತ್ತು ಆಜಾದ್‌ರ ಮಾತು ಮುಗಿಯುವವರೆಗೂ ಮಥಾಯಿವರೇಕೆ ಅವರಿಗಾಗಿ ಕಾಯುತ್ತ ಕುಳಿತುಕೊಳ್ಳಬೇಕೆಂದೆಣಿಸಿ, ನೆಹರೂ ಮಥಾಯಿಯವರಿಗೆ ಕಾರಿನಲ್ಲಿ ಮನೆಗೆ ಹೋಗಿ ಅರ್ಧ ಗಂಟೆಯ ನಂತರ ಕಾರನ್ನು ಹಿಂತಿರುಗಿಸುವಂತೆ ಹೇಳಿದರು.

ಮಥಾಯಿಯವರು ಪ್ರಧಾನಮಂತ್ರಿಗಳ ನಿವಾಸಕ್ಕೆ ಬಂದಾಗ, ಇಂದಿರಾಜಿ ಕೆಳ ಅಂತಸ್ತಿನಲ್ಲೇ ಇದ್ದರು. ಅವರೊಬ್ಬರೇ ಬಂದಿದ್ದನ್ನು ಗಮನಿಸಿದ ಇಂದಿರಾಜಿ ಕಾರನ್ನು ತಡೆದರು. ತುಂಬಾ ಮಾನಸಿಕ ತುಮುಲದಲ್ಲಿರುವಂತೆ ಕಾಣಿಸಿದ ಇಂದಿರಾ, ಮಥಾಯಿಯವರಿಗೆ, "ಇಡೀ ದಿನವೆಲ್ಲಾ ನಾನು ಪಪ್ಪಾನ ಬಗ್ಗೆಯೇ ಕಳವಳಗೊಂಡಿದ್ದೆ. ಜಾತಕದ ಪ್ರಕಾರ ಅವರು ಕಾರಿನ ಒಂದು ಸಣ್ಣ ಅಪಘಾತದಲ್ಲಿ ಸಿಕ್ಕಿಹಾಕಿಕೊಳ್ಳುವ ಸಾಧ್ಯತೆಯಿದ್ದುದರಿಂದ ನಾನು ಆ ಬಗ್ಗೆ ಬಹಳ ವಿಚಲಿತಳಾಗಿದ್ದೇನೆ. ನೀವು ಅವರೊಂದಿಗೇ ಇದ್ದರೆ ನನಗೊಂದು ಸಮಾಧಾನ. ಆದ್ದರಿಂದ ನೀವು ಕೂಡಲೇ ಹಿಂದಿರುಗಿ ಹೋಗುವುದು ಒಳ್ಳೆಯದು" ಎಂದವರು ಹೇಳಿದರು.

ಮರುಮಾತಿಲ್ಲದೆ ಮಥಾಯಿಯವರು ಮತ್ತೆ ಮೌಲಾನಾ ಮನೆಗೆ ಹೋಗಿ, ನೆಹರೂ ಅವರಿಗಾಗಿ ಕಾಯುತ್ತ ಕುಳಿತರು. ಮಥಾಯಿ ಹಾಗೆ ಕುಳಿತು ಸಮಯ ಹಾಳುಮಾಡಿದ್ದು ನೆಹರೂಜಿ ಅವರಿಗೆ ಸರಿಬರಲಿಲ್ಲ. ಇದನ್ನು ಗ್ರಹಿಸಿದ ಮಥಾಯಿಯವರು ಕಾರಿನಲ್ಲಿ ಮನೆಗೆ ಬರುತ್ತಿದ್ದಾಗ ತಾವು ಹಿಂತಿರುಗಿ ಬಂದುದರ ಕಾರಣವನ್ನು ತಿಳಿಸಬೇಕಾಯಿತು.

"ನಕ್ಕು ಬಿಟ್ಟು ಸುಮ್ಮನಿರದೇ, ನೀನೇಕೆ ಆಕೆಯ ಮಾತನ್ನು ಕೇಳಿದೆ?" ಎಂದು ನೆಹರೂಜಿ ಕೇಳಿದರು.

ಕಾಕತಾಳೀಯವಾಗಿ ಭವಿಷ್ಯ ನಿಜವಾಯಿತು. ನೆಹರೂಜಿಯ ಒಂದು ಕಾಲು ಊನವಾಯಿತು. ಮತ್ತೊಂದು ಕಾಲನ್ನು ಅವರು ಎಳೆಯುತ್ತಿದ್ದರು. ಆದರೆ ಅದು ಅಪಘಾತದಿಂದಾಗಿ ಅಲ್ಲ; ಲಕ್ವಾ ಹೊಡೆದುದರಿಂದ.

* * * * * * * * * * * * * * * *

೧೯೬೩ ರಲ್ಲಿ ತಮಿಳು ಕ್ರಿಶ್ಚಿಯನ್ ಹಸ್ತಸಾಮುದ್ರಿಕ ಜ್ಯೋತಿಷಿಯೊಬ್ಬ ಇಂದಿರಾಜಿಯನ್ನು ಭೇಟಿ ಮಾಡಿದ. ಈತ ಈ ಮುಂಚೆ ಶ್ರೀಲಂಕಾದಲ್ಲಿದ್ದ ಅಲ್ಲಿಯ ಪ್ರಧಾನಮಂತ್ರಿ ಎಸ್.ಡಬ್ಲ್ಯೂ ಆರ್.ಡಿ.ಬಂಡಾರನಾಯಕೆ ಅವರ ಕೊಲೆಯ ಬಗ್ಗೆ ನಿಖರವಾದ ಭವಿಷ್ಯವನ್ನಾತ ನುಡಿದಿದ್ದ. ಕೊಲೆಯ ನಂತರ, ಜೀವಭಯದಿಂದ

ಶ್ರೀಲಂಕಾ ಬಿಟ್ಟು ಭಾರತಕ್ಕೆ ಬಂದು ತನ್ನ ವೃತ್ತಿಯ ದೃಷ್ಟಿಯಿಂದ ಹಿಂದೂಧರ್ಮವನ್ನು ಸ್ವೀಕರಿಸಿದ್ದ. ಇಂದಿರಾರವರು ಇನ್ನು ಮೂರು ವರ್ಷಗಳಲ್ಲಿ ಭಾರತದ ಪ್ರಧಾನಿಯಾಗುತ್ತಾರೆಂದು ಆತ ಭವಿಷ್ಯ ನುಡಿದಿದ್ದ. ಅದು ನಿಜವಾಯಿತು.

೧೯೭೦ರಲ್ಲಿ ಇಂದಿರಾಜಿ ರಾಜಕೀಯದಲ್ಲಿ ಬಹಳ ಕಷ್ಟದ ದಿನಗಳನ್ನು ಅನುಭವಿಸುತ್ತಾರೆಂದು ಹಲವಾರು ಜ್ಯೋತಿಷಿಗಳು ಹೇಳಿದ್ದರು. ಎಲ್.ಎನ್.ಮಿಶ್ರಾ ಮತ್ತು ದಿನೇಶ್‌ಸಿಂಗ್‌ರ ಪ್ರೇರಣೆಯಿಂದಾಗಿ ಇಂದಿರಾಜಿ ಈ ಮದರಾಸಿನ ಜ್ಯೋತಿಷಿಯನ್ನು ಕರೆಸಿಕೊಂಡರು. ಈತ ತನ್ನೆಲ್ಲಾ ಕಡತಗಳನ್ನು ಪರಿಶೀಲಿಸಿ, ಇಂದಿರಾಜಿ ೧೯೭೭ರವರೆಗೆ ತಮ್ಮ ಅಧಿಕಾರದಲ್ಲಿ ಭದ್ರವಾಗಿರುತ್ತಾರೆಂದು ಹೇಳಿದ. ಈ ಭವಿಷ್ಯವನ್ನು ದೇಶದ ಎಲ್ಲಾ ಪತ್ರಿಕೆಗಳಲ್ಲಿ ಪ್ರಮುಖವಾಗಿ ಪ್ರಕಟಿಸಲಾಯಿತು.

ಈ ಜ್ಯೋತಿಷಿಯ ಗಳಿಕೆ ಊಹೆಗೂ ಮೀರಿಹೋಯಿತು. ಮದರಾಸಿನಲ್ಲಿ ಒಂದು ಮನೆಯನ್ನು ಕಟ್ಟಿ ತನ್ನ ಮಗನಿಗೊಂದು ಮುದ್ರಣಾಲಯವನ್ನು ತೆರೆಯಲು ತಡವೇನೂ ಆಗಲಿಲ್ಲ. ಅದು ಈತನಿಗೆ ತಕ್ಕುದೇ ಆಗಿತ್ತು. ಇಂದಿರಾಜಿ ವಿಷಯದಲ್ಲಿ ಆತ ನುಡಿದಿದ್ದ ಭವಿಷ್ಯಗಳೆಲ್ಲ ನಿಜವಾಗಿದ್ದವು.

ಎಲ್.ಎನ್.ಮಿಶ್ರಾ ತೀರಿಕೊಂಡ ಮೇಲೆ ಈತನ ಗ್ರಹಗತಿಗಳು ಇಳಿಮುಖವಾದವು. ಇಂದಿರಾಜಿಯ ಜೊತೆಗೆ ಮತ್ತೆ ಈತನ ಭೇಟಿಯಾದದ್ದು ಏಪ್ರಿಲ್ ೧೯೭೭ರಲ್ಲಿ- ಚುನಾವಣೆಯಲ್ಲಿ ಇಂದಿರಾಜಿ ಸೋತ ನಂತರ!

ತನ್ನನ್ನು ಇಷ್ಟು ಕಾಲ ಭೇಟಿಯಾಗದಿದ್ದುದ್ದಕ್ಕೆ ಇಂದಿರಾಜಿ ಆಕ್ಷೇಪಿಸಿದರು. ಅವರನ್ನು ಭೇಟಿಮಾಡುವ ತನ್ನೆಲ್ಲ ಪ್ರಯತ್ನಗಳನ್ನೂ ಪ್ರಧಾನಿಗಳ ಸಿಬ್ಬಂದಿವರ್ಗದವರು ವಿಫಲಗೊಳಿಸಿದ್ದಾಗಿ ಆ ಜ್ಯೋತಿಷಿ ಹೇಳಿ ಈ ಹಿಂದೆ ನುಡಿದಿದ್ದ ತನ್ನ ಭವಿಷ್ಯವಾಣಿಯನ್ನು ಇಂದಿರಾರವರಿಗೆ ನೆನಪಿಸಿದ. ತನ್ನನ್ನು ಕಡೆಗಣಿಸಿ, ಶಾಸ್ತ್ರಿ ಎನ್ನುವ ಜ್ಯೋತಿಷಿಯನ್ನು ನೆಚ್ಚಿಕೊಂಡು ಚುನಾವಣೆಯನ್ನು ಘೋಷಿಸಿದ್ದನ್ನು ಆಕ್ಷೇಪಿಸಿದ.

'ವಿನಾಶ ಕಾಲೇ ವಿಪರೀತ ಬುದ್ಧಿ' ಮತ್ತು 'ದೇವರು ಹೆಣ್ಣನ್ನು ಹಾಳುಮಾಡಲು ನಿರ್ಧರಿಸಿದಾಗ, ಮೊದಲು ಆತ ಆಕೆಯನ್ನು ಮತಿಗೇಡಿಯನ್ನಾಗಿ ಮಾಡುತ್ತಾನೆ' ಎಂಬ ಎರಡು ಮಾತುಗಳನ್ನು ಆತ ನಂತರ ಯಾವಾಗಲೂ ಹೇಳುತ್ತಿದ್ದ.

* * * * *

ಪೂಜೆಪುನಸ್ಕಾರ ಮತ್ತು ಹವನಗಳಲ್ಲಿ ನಂಬಿಕೆ ಇಟ್ಟಿದ್ದ ಗುಲ್ಜಾರಿಲಾಲ್ ನಂದಾ ಭಾರತದ ಪ್ರಧಾನಿಯಾಗುವುದಾಗಿ ಅವರಿಗೆ ಜ್ಯೋತಿಷಿಗಳು ಹೇಳಿದ್ದರು. ಒಂದು ರೀತಿಯಲ್ಲಿ ಆ ಭವಿಷ್ಯ ನಿಜವಾಯಿತೆನ್ನಬೇಕು! ನೆಹರೂ ಮತ್ತು ಲಾಲ್‌ಬಹದ್ದೂರರು ತೀರಿಕೊಂಡಾಗ ಅವರು ಪ್ರತಿಸಲವೂ ಎರಡು ಬಾರಿ ಭಾರತದ

## ಅಂತರ

ಅಜ್ಜನ ತಲೆಯಲ್ಲಿ
ಮಿನುಗುವ ನಕ್ಷತ್ರ
ಅಪ್ಪನ ಮನದಲ್ಲಿ
ಉರಿಯುವ ಸೂರ್ಯ
ಮೊಮ್ಮಗನ ಮಿದುಳಲ್ಲಿ
ಧುಮುಕುವ ಧೂಮಕೇತು!

—— ✱ ಗಣೇಶ ಪಿ. ನಾಡೋರ

ಪ್ರಧಾನಿಗಳಾಗಿದ್ದರು.

* * * * * * * *

ಈ ಶತಮಾನದ ಆದಿಯಲ್ಲಿ ಸ್ವಿಟ್ಜರ್ಲೆಂಡಿನಲ್ಲಿ ಒಬ್ಬ ತುಂಬ ವಿಕ್ಷಿಪ್ತನಾದ ಜ್ಯೋತಿಷಿ ಇದ್ದ. ಒಂದು ದಿನ ಬಹಳ ತೊಂದರೆಯಲ್ಲಿದ್ದ ಮಧ್ಯವಯಸ್ಕನೊಬ್ಬ ಆ ಜ್ಯೋತಿಷಿಯಲ್ಲಿಗೆ ಬಂದ. ಆ ಜ್ಯೋತಿಷಿ ಆತನ ಕುಂಡಲಿ ಮತ್ತು ಅಂಗೈಯನ್ನು ನೋಡಿ, ಅವರು ತುಂಬಾ ಹಣಕಾಸಿನ ಮುಗ್ಗಟ್ಟನ್ನು ಅನುಭವಿಸುತ್ತಿದ್ದಾರೆಂದೂ ಆತನ ಆರೋಗ್ಯ ಸರಿಯಿಲ್ಲವೆಂದೂ ಮತ್ತು ಅವನಿಗೆ ಕೌಟುಂಬಿಕ ತೊಂದರೆಗಳು ಬಹಳವಾಗಿರುದಾಗಿಯೂ ಈ ಎಲ್ಲ ತೊಂದರೆಗಳೂ ಆತನ ೫೦ನೇ ವಯಸ್ಸಿನವರೆಗೆ ಮುಂದುವರೆಯುವುದೆಂದೂ ಹೇಳಿದ. ಆ ವ್ಯಕ್ತಿಯ ವಯಸ್ಸು ಆಗ ನಲವತ್ತೊಂಭತ್ತರ ಸಮೀಪ ಇತ್ತು. ಇನ್ನು ಒಂದು ವರ್ಷಕಾಲ ಆ ತೊಂದರೆಗಳನ್ನು ಭರಿಸಲು ಸಿದ್ಧನಿದ್ದ.

"ಆಮೇಲೆ ?" ಆತ ಜ್ಯೋತಿಷಿಯನ್ನು ಅತ್ಯಂತ ಆಶೆಯಿಂದ ಕೇಳಿದ.

"ಆಮೇಲೆ, ನೀನು ಈ ತೊಂದರೆಗಳಿಗೆಲ್ಲ ಒಗ್ಗಿಕೊಂಡು ಬಿಡುತ್ತೀ" ಎಂದು ಆ ಜ್ಯೋತಿಷಿ ಶಾಂತಚಿತ್ತದಿಂದ ಮಾರ್ನುಡಿದ!

ಅಮೇರಿಕದಲ್ಲಿ ಜ್ಯೋತಿಶ್ಶಾಸ್ತ್ರದ ಬಗ್ಗೆ ೨೧-೩-೬೯ ರ 'ಟೈಮ್ಸ್' ಪತ್ರಿಕೆ ಒಂದು ಲೇಖನವನ್ನು ಪ್ರಕಟಿಸಿತು. ಆ ಪ್ರಕಾರ ಅಮೆರಿಕದಲ್ಲಿ ೧೦,೦೦೦ ಜನ ಜೀವನೋಪಾಯಕ್ಕಾಗಿ ಜ್ಯೋತಿಶ್ಶಾಸ್ತ್ರವನ್ನೇ ಅವಲಂಬಿಸಿಕೊಂಡಿದ್ದರೆ ೧,೭೦,೦೦೦ ಮಂದಿ ಅಂಶಕಾಲಿಕ (ಪಾರ್ಟ್ ಟೈಮ್) ಜ್ಯೋತಿಷಿಗಳಿದ್ದರು! ಉಳಿದೆಲ್ಲದರಂತೆ ಜ್ಯೋತಿಶ್ಶಾಸ್ತ್ರವನ್ನು ಅಲ್ಲಿ 'ಕಂಪ್ಯೂಟರೈಸ್' ಮಾಡಲಾಗಿದೆ. ಒಂದು ಸಂಸ್ಥೆಯಂತೂ *(Time pattern Institute Inc)* ಎರಡು ನಿಮಿಷಗಳಲ್ಲಿ ೧೦,೦೦೦ ಪದಗಳುಳ್ಳ ಜಾತಕದ ಪರಿಶೀಲನೆ ಮಾಡುವ ಕಂಪ್ಯೂಟರೊಂದನ್ನು ಯೋಜಿಸಿತ್ತು. ಒಂದು ದಿನಕ್ಕೆ ಇಂತಹ ೧೦,೦೦೦ ಪರಿಶೀಲನೆಗಳನ್ನು ಮಾಡುವುದು ಅದರ ಹಂಚಿಕೆ. 'ಟೈಮ್ಸ್' ಪತ್ರಿಕೆ ೧೯೬೯ರಲ್ಲಿ ಬರೆದಂದಿನಿಂದ ಈಗ ಕಾಲು ಶತಮಾನ ಗತಿಸಿ ಹೋಗಿರುವುದರಿಂದ, ಜ್ಯೋತಿಶ್ಶಾಸ್ತ್ರದಲ್ಲಿ ಅಮೆರಿಕ ಇನ್ನೂಹೆಚ್ಚಿನ ಪ್ರಗತಿಯನ್ನು ಸಾಧಿಸರಲೇ ಬೇಕು!

(ಆಧಾರ: ಎಂ.ಓ.ಮಥಾಯಿ ಅವರ `My days with nehru')



## ಚಲಿಸುವ ಮನೆ

ಅಮೆರಿಕದ ಐವತ್ತು ವರ್ಷದ ಬುಚ್ ಫೆಲಿಬಾಮ್ ಎಂಬ ಟ್ರಕ್ ಚಾಲಕ ವರ್ಷದ ೩೬೫ ದಿನಗಳ ಪೈಕಿ ೩೪೦ ದಿನಗಳ ಕಾಲ ರಸ್ತೆಯ ಮೇಲೆಯೆ ಇರುತ್ತಾನೆ. ಈ ಅವಧಿಯಲ್ಲಿ ತನ್ನ ಕುಟುಂಬದ ಸದಸ್ಯರೊಡನೆ ಟ್ರಕ್ಕಿನೊಳಗಡೆಯೆ ಸಂಸಾರ ನಡೆಸುತ್ತಾ ಸಂಪಾದಿಸುತ್ತಾನೆ. ಟ್ರಕ್ಕಿಗೆ ಹೊಂದಿಯೆ ಟ್ರೇಲರ್ ಇದೆ. ಅದರಲ್ಲಿ ಬಾತ್‌ರೂಮ್, ಅಡುಗೆಮನೆ, ಟಿ.ವಿ. ಸೆಟ್, ಸ್ಟೀರಿಯೋ, ಡೈನಿಂಗ್ ಟೇಬಲ್ ಮುಂತಾದ ಎಲ್ಲ ಸೌಲಭ್ಯಗಳೂ ಇವೆ. ಹದಿಮೂರು ವರ್ಷದ ಅವನ ಮಗಳು ಶಿಲಾ ಅಂಚೆ ತರಗತಿಯ ಮೂಲಕ ಶಿಕ್ಷಣ ಪಡೆಯುತ್ತಿದ್ದಾಳೆ. ೪೫ ವರ್ಷದ ಅವನ ಹೆಂಡತಿ ಬ್ರೆಂಡಾಳಿಗೆ ಈ ಹೊಸ ಮನೆಯೆ ಇಷ್ಟವಂತೆ. ಇಡಿ ಅಮೆರಿಕವನ್ನು ಮನೆಯಿಂದಲೆ ನೋಡುವ ಈ ಕುಟುಂಬದವರಿಗೆ ಅಕ್ಕಪಕ್ಕದವರ ತೊಂದರೆಯಿರುವ ಸಂದರ್ಭವೇ ಇಲ್ಲ.

★ಮಾಸ್ತಿ ಕೆ. ಆರ್. ಕೃಷ್ಣಪ್ಪ

ಈ ಲೇಖನದ ಲೇಖಕರಾದ ಡಾ. ಆರ್.ಎಸ್. ಚಿಕ್ಕೇರೂರರು ಮೂಲತಃ ಅಲೋಪಥಿ ತಜ್ಞರು. ಅಲೋಪಥಿಯಲ್ಲಿ ಸ್ನಾತಕೋತ್ತರ ಪದವೀಧರರಾದ ಅವರು ಮೂರು ವರ್ಷ ಬೆಳಗಾವಿಯ ಮೆಡಿಕಲ್ ಕಾಲೇಜಿನಲ್ಲಿ ಶಿಕ್ಷಕವೃತ್ತಿಯನ್ನು ಕೈಗೊಂಡು ಅನಂತರ ಇಪ್ಪತ್ತುವರ್ಷ ಸರಕಾರಿ ಆಸ್ಪತ್ರೆಗಳಲ್ಲಿ ವೈದ್ಯರಾಗಿ ಸೇವೆ ಸಲ್ಲಿಸಿದರು. ಹೋಮಿಯೋಪಥಿಯನ್ನು ಹವ್ಯಾಸವಾಗಿ ಅಭ್ಯಸಿಸಿರುವ ಅವರು ಸದ್ಯ ಸತ್ತೂರಿನಲ್ಲಿರುವ ದಂತವೈದ್ಯಕೀಯ ಮಹಾವಿದ್ಯಾಲಯದಲ್ಲಿ ಅರಿವಳಿಕೆ ತಜ್ಞರಾಗಿಯೂ ಧಾರವಾಡದ ಮೌಲಾನಾ ಆಜಾದ್ ಹೋಮಿಯೋಪಥಿ ಕಾಲೇಜಿನಲ್ಲಿ ಶಿಕ್ಷಕರಾಗಿಯೂ ಕೆಲಸಮಾಡುತ್ತಿದ್ದಾರೆ.



# ಬದುಕುಳಿದವರು

೧೯೬೫-೬೬ರಲ್ಲಿ ನಾನು ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ಕಾಲೇಜಿನ ಕೊನೆಯ ವರ್ಷದ ವಿದ್ಯಾರ್ಥಿಯಾಗಿದ್ದಾಗ ನಡೆದ ಘಟನೆ.

ಸಾಯಂಕಾಲದ ಸಮಯ. ಎಂದಿನಂತೆ ಗರಿಗರಿಯಾದ ಉಡುಪುತೊಟ್ಟು ದುರ್ಗದಬೈಲಿನವರೆಗೆ ಹೋಗಿಬರಬೇಕೆಂದು ಹಾಸ್ಟೆಲಿನಿಂದ ಹೊರಬಿದ್ದೆನೋ ಇಲ್ಲವೋ, ಕಲಘಟಗಿಯ ಬಳಿ ಗುಡ್ಡದಲ್ಲಿ ಎರಡು ಟ್ರಕ್ಕುಗಳು ಒಂದಕ್ಕೊಂದು ಹಾಯ್ದು ಅಪಘಾತಕ್ಕೀಡಾಗಿ ಗಾಯಾಳುಗಳನ್ನು ತುರ್ತು ಚಿಕಿತ್ಸೆಗಾಗಿ ತಂದಿದ್ದಾರೆ, ನೂರಾರು ಜನ ಅಸು ನೀಗಿದ್ದಾರೆ ಎಂಬ ಸುದ್ದಿ ಕಿವಿಗಪ್ಪಳಿಸಿತು. ಕೂಡಲೆ ವೈದ್ಯರೊಂದಿಗೆ, ಮಿತ್ರರೊಂದಿಗೆ ಆಸ್ಪತ್ರೆಯತ್ತ ಓಡಿದೆ.

ತುರ್ತು ಚಿಕಿತ್ಸಾ ಘಟಕದ ಎದುರು ನೂರಾರು ಜನರು ಸೇರಿದ್ದರು. ನಾನೂ ಆ ನೂಕುನುಗ್ಗಲಿನಲ್ಲಿ ದಾರಿ ಮಾಡಿಕೊಂಡು ಒಳಗೆಹೋದೆ. ಬಹಳಷ್ಟು ವೈದ್ಯರು ಕಾರ್ಯಮಗ್ನರಾಗಿದ್ದರು. ಹೌಸ್ ಸರ್ಜನ್‌ರ ಹಿಂಡೇ ಅಲ್ಲಿತ್ತು.

• ಚಿರಾಶಿ

ಅನಂತರ ಗಾಯಾಳುಗಳನ್ನು ಹೊತ್ತು ತಂದ ಟ್ರಕ್ಕಿನ ಹಿಂಭಾಗಕ್ಕೆ ತಲುಪ ಬೇಕಾದರೆ ಸಾಕು ಬೇಕಾಯಿತು. ಗದ್ದಲವೋ ಗದ್ದಲ. ಯಾರ ಮಾತೂ ಯಾರಿಗೂ ಕೇಳಿಸುತ್ತಿರಲಿಲ್ಲ. ಆದರೂ, ಒಳಗಿದ್ದವರನ್ನು ಕೆಳಗಿಳಿಸುವುದು, ಕೆಳಗಿಳಿಸಿದವರನ್ನು ಹೊತ್ತುಕೊಂಡೋ ಇಲ್ಲವೆ ರೋಗಿವಾಹಕ ಚಾಪೆಯಲ್ಲೋ ಸಾಗಿಸುವ ಕೆಲಸ ಭರದಿಂದ ಸಾಗಿತ್ತು. ನಾನೂ ಕೈ ಚಾಚಿದೆ. ಕಾಲೊಂದು ಕೈಯಲ್ಲಿ ಬಂತು. ಇನ್ನೊಂದು ಕಾಲು ಹಿಡಿಯಲು ಕೈ ಚಾಚಿದೆ ಎಲ್ಲಿದೆ ? ಒಂಟಿ ಕಾಲನ್ನೇ ಹಿಡಿದು ಮುಗ್ಗರಿಸಿದೆ. ಆಗ ಗೊತ್ತಾಯಿತು. ಇದು ಯಾರದೋ ಅಂಗದಿಂದ ಭಂಗವಾದ ಕಾಲು ಮಾತ್ರ ಎಂದು. ಸಾವರಿಸಿಕೊಂಡು ಎದ್ದು ಅದನ್ನೇ ಹೊತ್ತು ಸಾಗಿದೆ. ಮೂಲೆ ಸೇರಿಸಿ ಮತ್ತೆ ಧಾವಿಸಿದೆ. ರಕ್ತ ಸಿಕ್ತ ಬಟ್ಟೆಗಳ ಪರಿವೆ ನನಗಿರಲಿಲ್ಲ. ನರಳುವ ಮುದುಕಿಯನ್ನು ಹೊತ್ತೊಯ್ದು ಮೂಲೆಗೆ ಆನಿಸಿದೆ. ಆ ಮುದುಕಿ ಅಲ್ಲೇ ಕೊನೆ ಉಸಿರೂ ಎಳೆದಳು ಎಂದು ಕಾಣುತ್ತದೆ. ಈ ಎಲ್ಲ ಗೊಂದಲದಲ್ಲಿ ಕತ್ತಲಾದದ್ದೂ ಅರಿವಿಗೆ ಬರಲಿಲ್ಲ.

ಒಂದು ಕಾಲು ಪೂರ್ತಿ ಮುರಿದುಕೊಂಡವಳ ಆರ್ತನಾದ ಎಲ್ಲರ ಗಮನ ಸೆಳೆಯಿತು.ಅವಳ ನಾಳಗಳಲ್ಲಿ ಪೆಥೆಡಿನ್ ಕೊಟ್ಟರೂ ನರಳುವದು ಕಡಿಮೆಯಾಗಲಿಲ್ಲ.

"ನಿನಗೇನಾದರೂ ಬೇಕಾ ? ನೋವು ತಡೆದುಕೊ ಇಂಜೆಕ್ಷನ್ ಕೆಲಸ ಮಾಡುತ್ತದೆ. ನೋವು ಕಡಿಮೆಯಾದಾಗ ಪಟ್ಟಿ ಕಟ್ಟುವೆವು. ಇನ್ನೇನಾದರೂ ಬೇಕಾ ?" ಎಂದು ಕೇಳಿದೆ. ಆಕೆ ಅಳುನಿಲ್ಲಿಸಿ, "ನನಗೆ ನನ್ನ ಮಗು ಬೇಕು. ಅಷ್ಟೇ ಸಾಕು" ಎಂದು ಮತ್ತೆ ಅಳಲು ಶುರು ಮಾಡಿದಳು.

"ಮಗುವಿನ ಹೆಸರೇನಮ್ಮಾ ?" ಎಂದು ಕೇಳಿದೆ.

"ದಾನಮ್ಮ. ಹುಟ್ಟಿ ಒಂದೂವರೆ ತಿಂಗಳಾಗಿದೆ. ಹಾಲು ಕುಡಿಸುತ್ತ ಕಣ್ಣು ಮುಚ್ಚಿ ಕೂತಿದ್ದೆ. ಧಡ್! ಎಂದು ಕಿವಿಗೆ ಅಪ್ಪಳಿಸಿದ ಸದ್ದಿನಿಂದ ಎಚ್ಚತ್ತು ನಾನು ಮತ್ತೆ ಮೂರ್ಛೆ ಹೋದೆ. ಎಚ್ಚರ ಬಂದಾಗ ಮಗು ಇರಲಿಲ್ಲ. ನನ್ನ ಮಗುವಿಗೆ ಏನಾಯಿತೋ" ಎಂದು ಮತ್ತೆ ಅಳತೊಡಗಿದಳು.

ನಾನು ಆಕೆಯನ್ನು ಸಮಾಧಾನಪಡಿಸಿ ಸುತ್ತಲೂ ಕಣ್ಣೋಡಿಸಿದೆ. ಎಲ್ಲಿಯೂ ಮಗು ಕಾಣಲಿಲ್ಲ. ದಾಪುಗಾಲಿನಿಂದ ವಾರ್ಡುಗಳನ್ನೆಲ್ಲಾ ಸುತ್ತಿ ಬಂದೆ. ಎಲ್ಲೂ ಸಿಕ್ಕಲಿಲ್ಲ ಎಂದು ಆ ತಾಯಿಗೆ ತಿಳಿಸಬೇಕೆಂದರೆ ಅವಳಾಗಲೇ ವಾರ್ಡು ಸೇರಿದ್ದಳು.

ಕೆಲಸದ ಮೇಲಿದ್ದ ವೈದ್ಯರ ಪುಸ್ತಕವನ್ನು ಪರಿಶೀಲಿಸಿದೆ. ಪ್ರಯೋಜನವಾಗಲಿಲ್ಲ. ಅವರಿವರನ್ನು ಪ್ರಶ್ನಿಸುತ್ತಲೇ ಸಾಗಿದೆ. ಅಪಘಾತಕ್ಕೀಡಾದ ಟ್ರಕ್ಕಿನ ಚಾಲಕನಿಂದ ಒಂದು ವಿಷಯ ತಿಳಿಯಿತು. ಅವನ ಟ್ರಕ್ಕು ಗ್ರಾನೈಟ್ ತುಂಬಿದ್ದು ಎದುರಿಗೆ ಕೂಲಿ ಆಳುಗಳನ್ನು ಹೊತ್ತು ತರುತ್ತಿದ್ದ ಟ್ರಕ್ಕಿಗೆ ಅಪ್ಪಳಿಸಿದಾಗ ಏನೋ ಒಂದು ವಸ್ತು ಮೇಲೆ ಹಾರಿದಂತಾಯಿತು ಎಂದಾತ ನೆನಪಿಸಿಕೊಂಡ. ಹಾರಿದ್ದು ಮಗುವೇ ಯಾಕಿರಬಾರದು ? ಎಂಬ ಸಂಶಯ ಸುಳಿದುಹೋಯಿತು.

ಪೊಲೀಸರನ್ನು ವಿಚಾರಿಸಿದರೆ ಯಾರೂ ನನ್ನ ಮಾತಿಗೆ ಗಮನ ಹರಿಸಲಿಲ್ಲ. ಭರಮಣ್ಣ ಒಬ್ಬ ಸಾಮಾನ್ಯ ಪೇದೆ, ಎಂದೋ ಅವನಿಗೊಂದು ಉಪಕಾರ ಮಾಡಿದ್ದೆನಂತೆ. ಅವನೇ ನನ್ನನ್ನು ಗುರುತಿಸಿ, "ಏನಾಗಬೇಕಿತ್ತು ಸಾರ್ ?" ಎಂದು ಕೇಳಿದಾಗ ನಡೆದದ್ದನ್ನು

ತಿಳಿಸಿದೆ. ಬೆಳಗಾಗುವ ಮುಂಚೆ ಅಪಘಾತದ ಸ್ಥಳಕ್ಕೆ ಪರಿಶೀಲನೆ ಮಾಡಿ ಅಲ್ಲೇನಾದರೂ ಸಿಕ್ಕುವದೋ ನೋಡಿ ಬರುತ್ತೇನೆ ಎಂದ. ಹಸಿದ ಹೊಟ್ಟೆಯಲ್ಲೂ ದಣಿದ ದೇಹ ನಿದ್ರೆ ಬಯಸುತ್ತಿತ್ತು. ಕೋಣೆಗೆ ಬಂದು ಮಲಗಿದೆ.

ಬೆಳಗಿನ ಹತ್ತುಗಂಟೆ. ಬಾಗಿಲು ತಟ್ಟಿದ ಸದ್ದಾದಾಗ ಎದ್ದು ಬಾಗಿಲುತೆರೆದೆ. ಭರಮಣ್ಣ ಭಯದಿಂದ ಕಾಲು ಹಿಂದೆ ಇಟ್ಟ. ಅವನ ಕೈಯಲ್ಲಿ ಮಗು ಇತ್ತು.

ಹಸಿದಿದ್ದ ಮಗು ಬಹುಶಃ ನನ್ನ ಅವತಾರ ಕಂಡು ಹೆದರಿ ಅಳತೊಡಗಿದಾಗಲೇ ನನ್ನ ಬಟ್ಟೆಗಳು ರಕ್ತ ಸಿಕ್ತವಾದದ್ದು ಗಮನಕ್ಕೆ ಬಂತು. ಬಟ್ಟೆ ಬದಲಿಸಿ ಭರಮಣ್ಣನ ಜತೆ ಒಂದೇ ನೆಗೆತಕ್ಕೆ ವಾರ್ಡಿಗೆ ಓಡಿದೆ.

ವಾರ್ಡಿನಲ್ಲಿ ಹುಡುಕುವಾಗಲೇ ದಾಸಮ್ಮನ ತಾಯಿಯೆ ಮಗುವನ್ನು ಗುರುತಿಸಿ ಕೂಗಿ ಕರೆದಳು. ಮಗುವನ್ನು ಅವಳ ಕೈಗಿತ್ತೆ. ಬೆನ್ನಿನ ಮೇಲೆರಡು ತರಚಿದ ಗಾಯಗಳನ್ನು ಬಿಟ್ಟರೆ ಏನೂ ಆಗಿರಲಿಲ್ಲ. ಆ ತಾಯಿ ಮಗುವಿಗೆ ಲೊಚಲೊಚ ಮುತ್ತಿಟ್ಟು ಅಪ್ಪಿಕೊಂಡ ದೃಶ್ಯ ಇಂದಿಗೂ ನನ್ನ ಕಣ್ಣೆದುರು ಕಟ್ಟಿದಂತಿದೆ.

ಅಂದು ಅಪಘಾತದಲ್ಲಿ ಸತ್ತವರ ಸಂಖ್ಯೆ ಇಪ್ಪತ್ತಕ್ಕೂ ಹೆಚ್ಚಿತ್ತು. ಆದರೂ ಈ ಮಗು ಮೇಲೆ ಹಾರಿ ಕೊರಕಲಿನಲ್ಲಿ ಬಿದ್ದರೂ ಏನೂ ಆಗದೆ ಬದುಕಿ ಉಳಿದದ್ದು ಇನ್ನೂ ಒಗಟಾಗಿಯೆ ಉಳಿದಿದೆ.

** ** **

ಅಂದು ನನ್ನ ಮದುವೆಯ ಬೆಳ್ಳಿಹಬ್ಬ. ೨೫ ವರ್ಷ ವೈದ್ಯಕೀಯ ಕ್ಷೇತ್ರದಲ್ಲಿ ದುಡಿದ ನನಗೆ ಸಾವಿರಾರು ಜನ ಸ್ನೇಹಿತರಾದರು. ರೋಗಿಗಳು ಗುಣಮುಖರಾಗಿ ಗೌರವದಿಂದ ಕಾಣುವಾಗ ಎಲ್ಲಿಲ್ಲದ ಹರ್ಷ. ಮದುವೆಯ ಬೆಳ್ಳಿ ಹಬ್ಬಕ್ಕೆ ಸಂಗೀತ ಕಾರ್ಯಕ್ರಮ ಏರ್ಪಡಿಸಬೇಕೆಂಬ ಸಲಹೆ ಹೆಂಡತಿಯಿಂದ ಬಂದಾಗ ಇಲ್ಲ ಎನ್ನಲಾದೀತೆ ?

ರಾತ್ರಿ ಸಂಗೀತ ಸಭೆ ನಡೆದಿದೆ. ಶಿರಹಟ್ಟಿಯಿಂದ ಬಂದ ಮಿತ್ರನ ಮುಖ ಮಾತ್ರ ಬಾಡಿ ಬೆಂಡಾಗಿತ್ತು. ಅದನ್ನು ಕಂಡು ನಾನೇ ಮಾತನಾಡಿಸಲು ಹೋದೆ. ಆಗ ಆತ ಹೊರಗೆ ಬರಲು ತಿಳಿಸಿದ್ದರಿಂದ ದೂರಹೋಗಿ ನಿಂತೆವು.

"ಏನು ಸ್ವಾಮಿ, ಸಪ್ಪಗಿದ್ದೀಯಲ್ಲ, ಏನು ಸಮಾಚಾರ ?" ಎಂದೆ.

"ಏನು ಹೇಳಲಿ ? ಹೇಗೆ ಹೇಳಲಿ ಡಾಕ್ಟರ್ ?"

"ಆದದ್ದಾದರೂ ಏನು ?" ಎಂದಾಗ,

"ನನ್ನ ತಂಗಿ ದಾಕ್ಷಾಯಣಿಗೆ ೬ ತಿಂಗಳಿನಿಂದ ಕ್ಯಾನ್ಸರ್. ಈಗದು ಉಲ್ಬಣಿಸಿದೆ. ಆಕೆ ಮೊದಮೊದಲು ತಿಳಿಸಲೇ ಇಲ್ಲ. ಗದಗಿನ ಆಸ್ಪತ್ರೆಯೊಂದರಲ್ಲಿ ಅವಳನ್ನು ಸೇರಿಸಿದಾಗ ಡಾಕ್ಟರರು ಕೂಡಲೇ ಆಪರೇಶನ್ ಮಾಡಿಸಬೇಕೆಂದರು. ಉಪಾಯಗಾಣದೇ ಒಪ್ಪಿದೆವು. ಆಪರೇಶನ್ ಮಾಡಿದರು. ಆದರೆ ಕ್ಯಾನ್ಸರ್ ಎಲ್ಲಕಡೆ ಹಬ್ಬಿದ್ದರಿಂದ ತಕ್ಷಣ ಕ್ಯಾನ್ಸರ್ ಆಸ್ಪತ್ರೆಗೆ ಸಾಗಿಸಲೇಬೇಕು ಅಂದರು. ತಿಂಗಳ ಹಿಂದೆ ಇಲ್ಲಿ ತಂದು ಹಾಕಿದ್ದೇವೆ.

"ನನಗೇಕೆ ತೋರಿಸಲಿಲ್ಲ ?"

"ಅವಳ ಗಂಡ ಗದಗಿಗೆ ಕರೆದುಕೊಂಡು ಹೋದರೆ ನಾನೇನು ಮಾಡಲಿ ?"

"ಕ್ಯಾನ್ಸರ್ ಆಸ್ಪತ್ರೆಯವರ ಅಭಿಪ್ರಾಯವೇನು ?" ನಾನೆಂದೆ.

"ಇಲ್ಲಿಗೆ ಬಂದಾಗ ಕರೆಂಟ್ ಶುರು ಮಾಡಿದರಂತೆ. ಅದರ ಜೊತೆ ಇಂಜೆಕ್ಷನ್, ಗುಳಿಗೆಯನ್ನೂ ಶುರು ಮಾಡಿದರು. ಹಳದೀ ಕಾಮಣಿ ಸೇರಿಕೊಂಡದ್ದಕ್ಕೆ ಎಲ್ಲಾ ಚಿಕಿತ್ಸೆ ನಿಲ್ಲಿಸಿದ್ದಾರೆ. ಒಂದು ವಾರದಿಂದ. ನಿನ್ನೆಯೆ ಮನೆಗೆ ಕರೆದುಕೊಂಡು ಹೋಗಿ, ಉಳಿಯುವ ಭರವಸೆ ಇಲ್ಲ ಅಂದಾಗ ಅವಳ ಗಂಡ ನನ್ನನ್ನು

ಕರೆಸಿದ. ಕೂಡಲೆ ಬಂದೆ. ನನ್ನ ಗುರುತು ಕೂಡ ಹಿಡಿಯದ ಸ್ಥಿತಿಯಲ್ಲಿದ್ದಾಳೆ. ಏನು ಮಾಡಬೇಕೆಂಬುದೇ ತಿಳಿಯದಾಗಿದೆ. ಹಾಗೆಂದೇ ನಿನ್ನನ್ನು ಕರೆದುಕೊಂಡು ಹೋಗಲು ಬಂದರೆ ಇಲ್ಲಿಯ ಸಂಭ್ರಮ ನೋಡಿ ಸುಮ್ಮನೆ ಕುಳಿತೆ."

"ಹಾಗಾದರೆ ನಾಳೆಯೆ ಕರೆದುಕೊಂಡು ಹೋದರಾಯಿತು ನನ್ನ ಕಾರಿನಲ್ಲಿ."

"ನೀನು ಹೇಳುವುದು ಸರಿ. ಆದರೆ ಹಾಗೆ ಮಾಡುವುದು ಅಷ್ಟು ಸರಳವಲ್ಲ. ಅವಳು ಮಗ್ಗುಲಾಗುವಂತಿಲ್ಲ. ಮಗ್ಗುಲಾದರೆ ಸಾಕು, ವಿಪರೀತ ರಕ್ತಸ್ರಾವವಾಗುತ್ತದೆ. ಅಲ್ಲದೆ ಕಾಮಣಿ ತೀರ ಉಲ್ಬಣಿಸಿದೆ. ಅವಳ ಹಾಸಿಗೆ ಕೂಡ ಹಳದೀ ಬಣ್ಣಕ್ಕೆ ತಿರುಗಿದೆ. ಇಂತಹುದರಲ್ಲಿ ಹೇಗೆ ಸಾಗಿಸುವದು? ಹೇಗೋ ಇಂದೋ ನಾಳೆಯೋ ಸಾಯುತ್ತಾಳೆ. ಆಮೇಲೆ ಈ ರಕ್ತಸ್ರಾವದ ಸಂಕಟವಿರದು. ಅದಕ್ಕೇ ನೀನು ಆಸ್ಪತ್ರೆಗೆ ಬಂದು, ಅವಳು ಸಾಯುವ ವರೆಗಾದರೂ ಅಲ್ಲೇ ಇರಲಿ ಅಂತ ಡಾಕ್ಟರರಿಗೆ ತಿಳಿಸಿ ಬಂದುಬಿಡು. ಸತ್ತ ನಂತರ ಶಿರಹಟ್ಟಿಯಲ್ಲೇ ಮಣ್ಣು ಮಾಡುತ್ತೇವೆ," ಎಂದಾಗ ಅವನಿಗಾದ ಸಂಕಟದ ಅರಿವಾಯಿತು.

"ನೀನು ಈಗ ಹೊರಡು. ರಾತ್ರಿ ಬಹಳವಾಯಿತು. ನಾಳೆ ಹತ್ತು ಗಂಟೆಯ ಸುಮಾರಿಗೆ ಬಂದು ಡಾಕ್ಟರರಿಗೆ ಹೇಳಿ ಬರುತ್ತೇನೆ" ಎಂದು ಅವನನ್ನು ಕಳಿಸಿದೆ.

ಮರುದಿನ ರವಿವಾರ ೯-೧೨-೯೦. ಹನ್ನೊಂದಕ್ಕೆ ಆಸ್ಪತ್ರೆಗೆ ಹೋದಾಗ ಒಬ್ಬ ಡಾಕ್ಟರರೂ ಸಿಗಲಿಲ್ಲ. ಮುಖ್ಯ ಡಾಕ್ಟರರೂ ಊರಲ್ಲಿರಲಿಲ್ಲ. ರೋಗಿಯನ್ನು ನೋಡಲು ವಾರ್ಡಿಗೆ ಹೋದೆ.

ಜೀವಂತ ಹೆಣ. ಉಸಿರಿದೆ; ಎಚ್ಚರವಿಲ್ಲ. ಕೈಕಾಲು ಆಡಿಸದೇ ಅಂಗಾತಾಗಿ ಮಲಗಿದ್ದಾಳೆ. ಕೈಗೊಂದು ಡೆಕ್ಸ್ರೋಸ್ ಬಾಟಲಿ ಬೇರೆ ಹಚ್ಚಿದ್ದಾರೆ. ಬೆಡ್‌ಶೀಟೆಲ್ಲ ಹಳದಿ. ತುಸು ಅಲುಗಾಡಿಸಿ ಕಿವಿಯಲ್ಲಿ "ದಾಕ್ಷಾಯಣೀ" ಎಂದೆ. ಉತ್ತರವಿಲ್ಲ. ಅಲುಗಾಡಿಸಿದ್ದಕ್ಕೆ ರಕ್ತಸ್ರಾವ. ಸಿಸ್ಟರ ಬಂದು ಗದರಿಸಬೇಕೆಂದಿರಬೇಕು ನನ್ನ ಪರಿಚಯ ಸಿಕ್ಕದ್ದರಿಂದ ಸುಮ್ಮನಾದಳು. ನನಗೂ ನನ್ನ ಮಿತ್ರನಂತೆ ಮತಿಭ್ರಮಣೆಯಾಯಿತು. ಅವನ ಸಂಕಟದ ಅರ್ಥವಾಯಿತು. ಪರಿಚಯದ ನೌಕರರಿಗೆ ಪತ್ರ ಬರೆದು ಸಿಸ್ಟರ್ ಕೈಯಲ್ಲಿ ಕೊಟ್ಟು ನಾಳೆ ಅವರಿಗೆ ಮುಟ್ಟಿಸಲು ತಿಳಿಸಿದೆ.

ಅನಂತರ ನಾವಿಬ್ಬರೂ ಚಹಾಪಾನಕ್ಕೆ ಹೊರಬಂದಾಗ ಆಗಲೇ ಹನ್ನೆರಡೂವರೆಯಾಗಿತ್ತು.

"ಡಾಕ್ಟರೆ, ಇವಳಿಗೆ ನಿನ್ನ ಹೋಮಿಯೋ ಚಿಕಿತ್ಸೆ ನೀಡಿದರೆ ಹೇಗೆ?" ಎಂದು ಮಾತು ಶುರು ಮಾಡಿದ ಸ್ವಾಮಿ.

"ಎರಡು ಕಾರಣದಿಂದ ಕೊಡಲಾರೆ, ಮೊದಲನೆಯದಾಗಿ, ಅವಳು ಈಗಾಗಲೆ ಬೇರೆಯವರ ಆಸ್ಪತ್ರೆಯಲ್ಲಿ ಇರುವಾಗ ಹೊರಗಿನಿಂದ ಬಂದ ನಾನು ಚಿಕಿತ್ಸೆ

## ಕೆನ್ನೆಗೆ



ಒಂಟಿಯಾಗಿ ಸಿಕ್ಕಿದ
ಹೆಣ್ಣನ್ನು
ಮಾತನಾಡಿಸಲು
ಹೋದಾಗ
'ಬಾ ನಲ್ಲ, ಕೆನ್ನೆಗೆ ಕೊಡುತ್ತೇನೆ'
ಎಂದು ಹತ್ತಿರ ಕರೆದು
ಕೊನೆಗೆ
ಕೊಟ್ಟಿದ್ದಾದರೂ ಏನು?!!

★ಶುಭಾ, ಮರವಂತೆ

ನೀಡುವದು ಸರಿಯಲ್ಲ. ಎರಡನೆಯದಾಗಿ ಈಗಲೋ ಆಗಲೋ ಸಾಯುವವಳಿಗೆ ಚಿಕಿತ್ಸೆ ಕೊಟ್ಟರೂ ಫಲವೇನು ?''

"ಏನೇ ಆಗಲಿ, ನೀನು ಮಾತ್ರ ನನಗಾಗಿ ಈ ಉಪಕಾರ ಮಾಡಲೇಬೇಕು. ಇಲ್ಲ ಅನ್ನಬೇಡ'' ಎಂದಾತ ಕಟ್ಟುಬಿದ್ದಾಗ ಬಲವಂತಕ್ಕೆ ಮಣಿದು ನಾವಿಬ್ಬರೂ ನನ್ನ ದವಾಖಾನೆಗೆ ತೆರಳಿದೆವು.

ಅಲ್ಲಿ ಎಲ್ಲ ಪುಸ್ತಕಗಳನ್ನೂ ಜಾಲಾಡಿ ಔಷಧಿಗಳ ಪಟ್ಟಿ ಮಾಡಿದೆ. ಮೊದಲು ಪ್ರತಿ ಹತ್ತು ನಿಮಿಷಕ್ಕೆ ರೆಸ್ಕ್ಯೂ ರೆಮಡಿ ಕೊಡುವಂತೆ ಹೇಳಲು ಮರೆಯಲಿಲ್ಲ. ಇಪೆಕಾ, ಫಾಸ್ಪರಸ್ ಔಷಧಿ ಕೊಡಲು ಹೇಳಿದೆ. ಆತ ಔಷಧಿ ಪಡೆದು ಹೊರಟುಹೋದ.

ಸೋಮವಾರ ಕಳೆಯಿತು. ಆಗಾಗ ಸ್ವಾಮಿಯ ತಂಗಿಯ ಯೋಚನೆ ಬರುತ್ತಿದ್ದರೂ ಅಲ್ಲಿಗೆ ಹೋಗಲು ಅವಕಾಶವಾಗಲಿಲ್ಲ.

ಏನೇ ಆಗಲಿ ಬುಧವಾರ ಹೋಗಲೇಬೇಕು ಅಂದುಕೊಂಡೆ. ಆದರೆ, ಒಂದು ದೂರವಾಣಿ ಮಾಡುವಷ್ಟು ಸೌಜನ್ಯ ಬೇಡವೆ ? ಎಂದು ಸ್ವಾಮಿಯ ಮೇಲೆ ಕೋಪಬಂದು ಆ ದಿನ ಹೋಗಲಿಲ್ಲ.

ಗುರುವಾರ ಕಾರಿನಲ್ಲಿ ಹುಬ್ಬಳ್ಳಿಗೆ ಹೋಗುವಾಗ ಮನಸ್ಸು ಬದಲಾಯಿಸಿದೆ. ವಾರ್ಡಿಗೆ ಬಂದಾಗ ಎರಡು ಗಂಟೆಯಾಗಿತ್ತು. ನರ್ಸ್ ನನ್ನನ್ನು ಕಂಡೊಡನೆ ಎದ್ದು ಬಂದಳು.

"ಏನಮ್ಮಾ ಈ ಕೊನೆ ಹಾಸಿಗೆ ಪೇಶಂಟ್ ಶಿರಹಟ್ಟಿಯಿಂದ ಬಂದಿದ್ದಳಲ್ಲ, ಅವಳೆಲ್ಲಿ ?'' ಎಂದು ಕೇಳಿದೆ.

"ಕೆಳಗೆ ಹಣ್ಣು ತರಲು ಹೋಗಿದ್ದಾಳೆ. ಬಹಳ ಹೊತ್ತಾಯಿತು ಬರಬಹುದು, ಕುಳಿತುಕೊಳ್ಳಿ.''

"ಅದಲ್ಲಮ್ಮಾ ನಾನು ಕೇಳಿದ್ದು, ಶಿರಹಟ್ಟಿ ಪೇಶಂಟ್ ಎಂದು ಸತ್ತಳು ಯಾವಾಗ ಕರೆದುಕೊಂಡು ಹೋದರು ಎನ್ನುವುದನ್ನು ಸ್ವಲ್ಪ ನಿನ್ನ ರಿಜಿಸ್ಟರ್ ನೋಡಿ ಹೇಳಮ್ಮ.''

"ಅವಳೆಲ್ಲಿ ಸತ್ತಿದ್ದಾಳೆ ಡಾಕ್ಟರೇ, ಹಣ್ಣು ತರಲಿಕ್ಕೆ ಹೋಗಿದ್ದಾಳೆ. ನಾಳೆ ಅವಳು ಮನೆಗೆ ಹೋಗುತ್ತಾಳಂತೆ.''

ಗಿರ್ರನೆ ತಿರುಗಿತು ತಲೆ. ಈ ಮಲೆಯಾಳಿಗೆ ಕನ್ನಡ ಅರ್ಥವಾಗ್ತಾ ಇಲ್ಲ ಅಂದುಕೊಂಡೆ. ನನ್ನ ರಕ್ತದೊತ್ತಡ ಏರುತ್ತಾ ಇತ್ತು.

"ಸರ್ ಅಲ್ಲೇ ಬಂದಳು ನೋಡಿ ನಿಮ್ಮ ಪೇಶಂಟ್,'' ಅಂದಳಾಕೆ.

ದಾಕ್ಷಾಯಿಣಿ ಬಂದವಳೇ ನನ್ನ ಕಾಲು ಮುಟ್ಟಿ ನಮಸ್ಕರಿಸಿದಾಗ ನನ್ನ ಕಾಲು ಮಂಜುಗಟ್ಟಿದ್ದವು. ಅವಳ ಬಿಸಿ ಕೈಗಳು ನನ್ನ ಇರುವನ್ನು ಸೂಚಿಸಿದವು. ಅವಳನ್ನೆತ್ತಿ ಹಿಡಿದು ಕಣ್ತುಂಬ ಕಂಡಾಗ ಇವಳೇನಾ ಮರಣದ ಮಹಲಿನ ಹೊಸ್ತಿಲಲ್ಲಿ ಬಿದ್ದವಳು ? ಎಂದು ದಿಗ್ಭ್ರಮೆಗೊಂಡೆ.

ಮರುದಿನ ಬಂದಳು ದಾಕ್ಷಾಯಿಣಿ ಸ್ವಾಮಿಯ ಜತೆ. ಅವರಿಬ್ಬರ ಮುಖದಲ್ಲಿ ಮಂದಹಾಸ. ಅವರು ಅರ್ಪಿಸಿದ ಧನ್ಯವಾದವನ್ನು ನಾನೆಂದೂ ಮರೆಯಲಾರೆ.

ವರ್ಷವಿಡೀ ತಪ್ಪದೇ ತಿಂಗಳಿಗೊಂದು ಬಾರಿ ಬಂದ ದಾಕ್ಷಾಯಿಣಿ ಮತ್ತೆ ಮೊದಲಿನಂತಾದಳು.

** ** **

ಗಡಿಬಿಡಿಯಲ್ಲಿ ಮೆಟ್ಟಲಿಳಿದು ಬಂದು ಸ್ಕೂಟರು ಶುರು ಮಾಡುವಾಗಲೇ ತೆರೆದ ಗೇಟನಿಂದ ರಾಘವೇಂದ್ರ ಓಂಕಾರ ಸೂಟುಕೇಸ್ ಸಹಿತ ಒಳನುಗ್ಗಬೇಕೆ ?

ಹೊಯಿತಲ್ಲ ಮನೆಯಿಂದ ಪೀಡೆ ಅಂದರೆ ಬಂದೆ ಗವಾಕ್ಷಿಯಿಂದ ಅಂದಂತಾಯಿತು. ದೊಡ್ಡ ವ್ಯಕ್ತಿ. ಮಹಾರಾಷ್ಟ್ರದಿಂದ ಬಂದಿದ್ದಾರೆ. ಹಾಗೆಯೆ ಬಿಟ್ಟುಹೋಗುವಂತಿಲ್ಲ.

"ಇದೇನು ರಾಘವೇಂದ್ರರಾಯರೇ, ಸೂಟ್‌ಕೇಸು ಸಮೇತ ಬಂದಿದ್ದೀರಲ್ಲ ಏನು ಸಮಾಚಾರ ?"

"ಏನಿಲ್ಲಾ ನಿಮ್ಮ ಹತ್ತಿರ ಮಾತಾಡಬೇಕಿತ್ತು ಬಂದುಬಿಟ್ಟೆ. ಪಾಪ ನೀವು ಹೊರಟು ನಿಂತಿದ್ದೀರಿ ಅಂತ ಕಾಣುತ್ತೆ. ಹೊರಡಿ. ನಾನೂ ಮಗನ ಮನೆಗೆ ಹೋಗಿ ಸಾಯಂಕಾಲ ನಿಮ್ಮ ಕ್ಲಿನಿಕ್ಕಿಗೇ ಬರುತ್ತೇನೆ," ಎಂದು ಹೊರಹೋದರು.

ನಾನು ಜಿಲ್ಲಾ ಆಸ್ಪತ್ರೆಯ ದಾರಿ ಹಿಡಿದೆ. ನನ್ನ ತಲೆ ಹನ್ನೆರಡು ದಿನಗಳ ಹಿಂದೆ ಓಡಿತು. ೩೧-೭-೧೯೯೭ರ ರಾತ್ರಿಯನ್ನು ನಾನೆಂದೂ ಮರೆಯುವಂತಿಲ್ಲ.

ಆಸ್ಪತ್ರೆಯ ಕೆಲಸದ ಒತ್ತಡದಲ್ಲಿ ಊಟವಿಲ್ಲ, ಸಾಲದ್ದಕ್ಕೆ ಕ್ಲಬ್ಬಿನಲ್ಲಿ ಚಹಾ ನಾಲ್ಕು ಬಿಸ್ಕೀಟು ತಿನ್ನುವಾಗಲೇ ನನ್ನ ಜೇಬಿನಲ್ಲಿಯ ದುಡ್ಡು ರಮಿ ಆಟದಲ್ಲಿ ಹಾರಿಹೋಗಿತ್ತು. ಮನೆಗೆ ಬಂದೆ. ಮಹಿಳಾ ಮಂಡಳದ ಸಭೆ ಮನೆಯಲ್ಲೇ ನಡೆದಿತ್ತು. ನೀರೂ ಕುಡಿಯದೇ ಕ್ಲಿನಿಕ್ಕಿಗೆ ಬಂದರೆ ಅಲ್ಲಿ ಯಾರೂ ಇರಲಿಲ್ಲ. ಇಂತಹ ಸಮಯದಲ್ಲಿ ನನ್ನ ಪರಿಚಯದ ಮಠದರು ಒಂದು ಕಡೆ, ಮಧ್ಯದಲ್ಲಿ ಈ ರಾಘವೇಂದ್ರರಾವ್, ಪಕ್ಕದಲ್ಲಿ ಅವರ ಹೆಂಡತಿ ಇರಬೇಕು, ಬರುವದನ್ನು ಕಂಡು ಖುಷಿಯಾಗುವ ಬದಲು ಕಸಿವಿಸಿಯಾಗತೊಡಗಿತು. ಇಬ್ಬರೂ ಕೂಡಿ ರಾಘವೇಂದ್ರರಾಯರನ್ನು ತುಂಬಿದ ಚೀಲ ಎಳೆಯುವಂತೆ ಹೊತ್ತು ತರುವದನ್ನು ಕಂಡು ಯಾವುದಾದರೂ ಆಸ್ಪತ್ರೆಗೆ ಸೇರಿಸುವದನ್ನು ಬಿಟ್ಟು ಇಲ್ಲಿ ಏಕೆ ಬರುತ್ತಿದ್ದಾರೆ ? ಅನ್ನಿಸದಿರಲಿಲ್ಲ.

ಕಷ್ಟದಿಂದ ರಾಘವೇಂದ್ರರಾಯರನ್ನು ಮೂರು ಮೆಟ್ಟಲು ಹತ್ತಿಸಿದರು. ನಾನೂ ಅವರಿಗೆ ಕೈಗೂಡಿಸಿದೆ. ಒಳಗೆ ಬಂದಾಗ, ಪೂರ್ತಿ ಬೆವೆತಿದ್ದಾರೆ, ಏದುಸಿರು ಬಿಡುತ್ತಿದ್ದಾರೆ. ಮಾತೇ ಇಲ್ಲ. ಕೈಸನ್ನೆಯಿಂದ ತಾವು ಮಲಗಬೇಕೆಂದು ಸೂಚಿಸಿದರು.

ಮೂವರು ಸೇರಿ ಅವರನ್ನು ಹೊತ್ತು ಪರೀಕ್ಷೆ ಮಾಡುವ ಹಾಸಿಗೆಯ ಮೇಲೆ ಮಲಗಿಸಿದರೂ ಪೂರ್ತಿಯಾಗಿ ಮಲಗದೆ ಅರ್ಧಮಲಗಿ ಅರ್ಧ ಎದ್ದು ಕುಳಿತ ಸ್ಥಿತಿಯಲ್ಲಿ. ಕಷ್ಟದಿಂದ ಉಸಿರು ತೆಗೆದುಕೊಳ್ಳುವದರ ಜೊತೆಗೆ ಬಲಗೈಯನ್ನು ಎಡಗಡೆಯ ಎದೆಯ ಮೇಲಿಟ್ಟು ನರಳುವಾಗ ನನಗೇ ಸಂಕಟವಾಯಿತು. ಇತ್ತ ಬಂದು ಮಠದರನ್ನು ಕರೆದು ಇವರು ಯಾರು ? ಇಲ್ಲಿಗೇಕೆ ಬಂದಿರಿ ? ಎಂದು ಕೇಳಿದೆ.

"ಡಾಕ್ಟರೇ, ಇವರು ನನ್ನ ಚಿಕ್ಕಪ್ಪ ರಾಘವೇಂದ್ರ ಓಂಕಾರ ಅಂತ. ಮಹಾರಾಷ್ಟ್ರದ ಜಳಗಾಂವದಲ್ಲಿ ವಿದ್ಯುತ್ ವಿಭಾಗದ ಎಂಜಿನೀಯರ್. ಹದಿನೈದು ದಿನಗಳ ಹಿಂದೆ ಟೂರಿನಲ್ಲಿದ್ದಾಗ ಹಾರ್ಟ್ ಅಟ್ಯಾಕ್ ಆಯಿತು. ಜಳಗಾಂವದಲ್ಲಿ ಹೃದಯ ತಜ್ಞರಿಂದ ಉಪಚಾರವಾಗಿ ಅವರೇ ಮುಂಬೈನ ಟಾಟಾ ಆಸ್ಪತ್ರೆಗೆ ರವಾನಿಸಿದರು. ಅಲ್ಲಿ ಎಂಜಿಯೊ, ಎಕೋ, ಸ್ಕ್ಯಾನ್, ಕೆಥಟರ ಮಾಡಿದಾಗ ತುರ್ತಾಗಿ ಬೈಪಾಸ್ ಆಪರೇಶನ್" ಮಾಡದಿದ್ದರೆ, ಇನ್ನೆರಡು ತಿಂಗಳೂ ಉಳಿಯಲಾರರು ಎಂದಾಗ ನಾವೆಲ್ಲ ಮುಂಬೈಗೆ ಹೋಗಿ ಅಲ್ಲಿಂದ ಅವರನ್ನು ಪುಣೆಯ ರೂಬಿ ದವಾಖಾನೆಗೆ ಬೈಪಾಸ್ ಆಪರೇಶನ್ನಿಗಾಗಿ ತಂದು ದಾಖಲು ಮಾಡಿ ಐದು ದಿನಗಳಾಯಿತು.

"ಇಂಥಾ ಕೇಸನ್ನು ಇಲ್ಲಿಗೇಕೆ ಕರಕೊಂಡು ಬಂದಿರಿ ? ಎಂದಿದೆ ಆಪರೇಶನ್ ?"

"ಇದೇ ೮-೮-೧೯೯೭ ರಂದು. ನಮ್ಮದು ಎರಡನೇ ನಂಬರ ಕೇಸು"

"ಅಂದರೆ ಇಂದಿಗೆ ಎಂಟು ದಿವಸದಲ್ಲಿ,

ಹಾಗಿದ್ದರೆ ಇಲ್ಲಿಗೇಕೆ ಬರಬೇಕಾಗಿತ್ತು ?

"ನಿಮಗೆ ತೋರಿಸಿಕೊಂಡು ಹೋಗಲು ಎಂದಾಗ,

"ಬರುವಾಗ ದಾರಿ ಮಧ್ಯೆ ಸತ್ತಿದ್ದರೆ ಗತಿ ಏನಾಗುತ್ತಿತ್ತು ? ಇಂಥಾ ಕೇಸು ತೆಗೆದುಕೊಂಡು ನಾನೇನು ಮಾಡಬೇಕು ? ಸ್ವಲ್ಪವಾದರೂ ವಿವೇಚನಾ ಬುದ್ಧಿ ಬೇಡವೇ ?" ಎಂದೆ.

"ನಮ್ಮ ಚಿಕ್ಕಪ್ಪ ನಿಮ್ಮನ್ನು ಕೇಳಿಯೇ ಬರೋಣ ಅಂತ ಹಠ ಹಿಡಿದರು. ಬರಬೇಕಾಯಿತು."

ಈಸಿಜಿ, ಎಂಜಿಯೊ, ಎಕೊಗ್ರಾಫ್ ಎಲ್ಲವನ್ನೂ ನೋಡಿದೆ. ನನಗೇ ಹಾರ್ಟ್ ಅಟ್ಯಾಕ್ ಆಗಲಿಲ್ಲ ಪುಣ್ಯಕ್ಕೆ. ಮೂರೂ ಕೊರೊನರಿ ನಾಳಗಳು ತುಂಬಿಕೊಂಡಿವೆ. ಒಂದರಲ್ಲಿ ನೂರಕ್ಕೆ ನೂರು ಭಾಗ, ಇನ್ನೊಂದು ೬೦ ಭಾಗ, ಮೂರನೇಯದು ೩೦ ಭಾಗ.

"ಸ್ವಾಮಿ, ನನ್ನಿಂದಾಗದು. ನೀವಿಬ್ಬರೂ ತಪ್ಪು ಮಾಡಿದ್ದೀರಿ. ಆದರೂ ಕಾಲ ಮಿಂಚಿಲ್ಲ. ಇನ್ನೆಂಟು ದಿನಗಳಲ್ಲಿ ಆಪರೇಶನ್ ಮಾಡಿಸಿಕೊಳ್ಳಿರಿ, ಇಂದೇ ರೈಲಿನಿಂದ ಹೊರಡಿ. ಕಾರಿನಲ್ಲಿ ಹೋದರೆ ತೊಂದರೆಗೊಳಗಾಗುವಿರಿ ಎಂದು ಸಲಹೆ ನೀಡಿದೆ."

ಅಂದು ರಾತ್ರಿ ಎದೆ, ಎಡಕಂಕುಳಲ್ಲಿ ಕೆಂಡದ ಉರಿಯನ್ನು ಅನುಭವಿಸಿ ಮಲಗಿದ್ದ ರಾಘವೇಂದ್ರರಾಯರು ಮರುದಿನ ಬೆಳಿಗ್ಗೆ ನನ್ನಲ್ಲಿಗೆ ಬಂದಾಗ ಎಲ್ಲಿಲ್ಲದ ಸಿಟ್ಟು ಬಂತು. ಆದರೆ ಸಾಯುತ್ತಿರುವವನಿಗೆ ಸಮಾಧಾನದ ಮಾತುಗಳನ್ನು ಹೇಳದೇ ಕೋಪ ತೋರಿಸಲು ಕಲಿತಿದ್ದೇನೆಯೇ ಶಿಕ್ಷಣ ? ಎಂದು ಸಮಾಧಾನ ತಂದುಕೊಂಡು,

"ಯಾಕೆ ? ಹೋಗಲಿಲ್ಲವೆ ನಿನ್ನೆ ರಾತ್ರಿ ?" ಎಂದು ಕೇಳಿದೆ.

"ಇಲ್ಲ ಡಾಕ್ಟರರೇ, ರಾತ್ರಿಯಿಡಿ ಎದೆನೋವು, ಎಡಕಂಕುಳದ ವರೆಗೂ ವಿಪರೀತ ಉರಿ ಶುರುವಾಯಿತು. ನನ್ನ ಅಣ್ಣನ ಮಗನ ಮಾತು ಕೇಳಿದ ಮೇಲೆ ನಿಮ್ಮ ಬಗ್ಗೆ ಅತೀವ ವಿಶ್ವಾಸ ಮೂಡಿದೆ. ನೀವು ಕೈಯಿಂದ ಹಿಡಿಮಣ್ಣು ಕೊಟ್ಟರೂ ಸರಿಯೆ, ಔಷಧಿ ಎಂದು ಭಾವಿಸಿ ಸೇವಿಸುತ್ತೇನೆ. ನೀವು ಏನಾದರೂ ಕೊಡದೇ ಹೋದರೆ ನಿಮ್ಮ ಪಾದ ಬಿಟ್ಟು ಏಳಲಾರೆ," ಅಂದಾಗ ಮೂಕವಿಸ್ಮಿತನಾದೆ. ಅಂದೇ ಎರಡು ಗಂಟೆಗಳ ಕಾಲ ಅವರ ರೋಗದ ಬಗ್ಗೆ ವಿಚಾರಿಸಿ, ಕ್ರ್ಯಾಕ್ಟಸ್ ಗ್ಲಾಂಡಿಫ್ಲೋರಸ್ ಹಾಗೂ ಅಕೋನೈಟಗಳಲ್ಲದೇ ಬೆಕ್‌ಫ್ಲವರ ರೆಮೆಡಿಯಲ್ಲಿ ವಾಲ್‌ನಟ್ ಇಂಪೇಶನ್ಸ ಕೊಟ್ಟು ಅದನ್ನು ತೆಗೆದುಕೊಳ್ಳಲು ತಿಳಿಸಿದೆ. ಒಂದೆರಡು ವಾರಗಳ ನಂತರ, ಸಾಧ್ಯವಾದಷ್ಟು ಬೇಗ ಆಪರೇಶನ್ ಮಾಡಿಸಿಕೊಳ್ಳುವಂತೆ ಹೇಳಿ ಕಳಿಸಿ ಇಂದಿಗೆ ಹನ್ನೊಂದೇ ದಿನಗಳಾದವು. ಮತ್ತೆ ಅದೇ ವ್ಯಕ್ತಿ ಕೈಯಲ್ಲಿ ಸೂಟ್‌ಕೇಸ್ ಹಿಡಿದು ಒಳಬಂದಿದ್ದಾರೆ. ಅವರ ಅಕ್ಕಪಕ್ಕದ ವ್ಯಕ್ತಿಗಳ ಪತ್ತೆಯೇ ಇಲ್ಲ.

ರಾತ್ರಿ ೯ಕ್ಕೆ ಅಣ್ಣನ ಮಗ ಹಾಗೂ ಸೊಸೆ ಜತೆ ಬಂದರು ರಾಘವೇಂದ್ರರಾಯರು.

"ಎಂದು ಇಟ್ಟುಕೊಂಡಿದ್ದೀರಿ ನಿಮ್ಮ ಆಪರೇಶನ್ ?"

"೧೮-೦೮-೧೯೯೨ಕ್ಕೆ"

"ಮತ್ತೆ ಇಂದೇಕೆ ಬಂದಿರಿ ?"

"ಆಪರೇಶನ್ ಮಾಡಿಸಿಕೊಳ್ಳಲೋ ಬೇಡವೋ ಎಂದು ನಿಮ್ಮನ್ನು ಕೇಳಲು."

"ಏನು ಸ್ವಾಮಿ, ಜೀವ ನಿಮ್ಮದು, ನೋವು ನಿಮ್ಮದು. ನನ್ನನ್ನು ಕೇಳಿದರೆ ಆಪರೇಶನ್ ಆಗಲೇಬೇಕು. ಇದನ್ನು ಕೇಳಲು ನೀವೊಬ್ಬರೇ ಬಂದಿರಾ ಇಲ್ಲಿವರೆಗೆ ?"

"ಹೌದು ಡಾಕ್ಟರರೇ ನನ್ನ ನೋವೆಲ್ಲಾ ನಿಮ್ಮ ಗುಳಿಗೆ, ಆಶೀರ್ವಾದದ ಫಲದಿಂದ ಗುಣವಾಗಿದೆ. ಈಗ ಉಸಿರುಗಟ್ಟುತ್ತಿಲ್ಲ, ಎದೆ ನೋವಿಲ್ಲ, ನಿದ್ರೆಗೆ ತೊಂದರೆ ಇಲ್ಲ ಅಂದಬಳಿಕ ಆಪರೇಶನ್ ಯಾಕೆ? ನಾನು ಮೊದಲಿನಂತಾಗಿದ್ದೇನೆ."

"ಹಾಗಾದರೆ ಇನ್ನೊಂದು ಸಲ ಎಂಜಿಯೋಗ್ರಾಮ್ ಮಾಡಿಸಿಕೊಂಡು ಬನ್ನಿ. ಅದನ್ನು ತಜ್ಞರಿಗೂ ತೋರಿಸಿ ಎಲ್ಲರೂ ಹೇಳಿದಂತೆ ಮಾಡಿ. ಇದಕ್ಕಿಂತ ಬೇರೆ ಏನೂ ಹೇಳಬಯಸುವದಿಲ್ಲ."

ಅಂದು ರಾತ್ರಿ ಮಠದ ಅವರ ಮನೆಯಲ್ಲಿ ಊಟದ ಔತಣವಿತ್ತು ಮತ್ತು ಹಲವು ಔಷಧಗಳನ್ನು ಕೊಟ್ಟು ಬೀಳ್ಕೊಟ್ಟೆ.

೨೭-೪-೯೪ಕ್ಕೆ ತಾವು ಲಿಬಿಯಾ ದೇಶಕ್ಕೆ ಹೊರಟು ನಿಂತಾಗ ಮತ್ತೆ ಪ್ರತ್ಯಕ್ಷರಾದರು ಓಂಕಾರ ದಂಪತಿಗಳು. ಹೂವಿನ ಹಾರ ಹಾಕಿ ನನಗೆ ಕಾಣಿಕೆ ಇತ್ತರು.

"ಏನು ರಾಘವೇಂದ್ರರಾಯರೇ, ಆಪರೇಶನ್ ಆದ ಬಳಿಕ ಪ್ರಕೃತಿ ಬಹಳೇ ಸುಧಾರಿಸಿದೆಯಲ್ಲ?" ಎಂದೆ.

"ಯಾರಿಗಾಗಿದೆ ಆಪರೇಶನ್ನು? ನಾನು ಮಾಡಿಸಿಕೊಂಡೇ ಇಲ್ಲ." ಎದೆ ಝಲ್ಲೆಂದಿತು. ಈ ಪ್ರಾಣಿ ಇನ್ನೂ ಬದುಕುಳಿದಿದೆಯಲ್ಲ, ಹೇಗೆ?

ತಾವು ಲಿಬಿಯಾದಿಂದ ಬರುವವರೆಗೂ ನಿಮಗಾಗಿ ಕಾಯುತ್ತಿರುವೆ ಎಂದ ವ್ಯಕ್ತಿ ೧೯೯೫ರಲ್ಲಿ ಶ್ರವಣಬೆಳಗೊಳದ ೬೬೨ ಮೆಟ್ಟಲುಗಳನ್ನು ಒಂದೇ ಸಮನೆ ಹತ್ತಿ ಇಳಿದರಂತೆ.

೧-೫-೯೭ಕ್ಕೆ ಬಂದಾಗ ಅವರು ತಂದು ತೋರಿಸಿದ ಎಕೊಗ್ರಾಫಿ, ಸ್ಟ್ರೆಸ್ ಟೆಸ್ಟ್‌ಗಳೆಲ್ಲಾ ಸಾಮಾನ್ಯವಿದ್ದುದನ್ನು ಕಂಡು ಹೀಗೂ ಆಗಲು ಸಾಧ್ಯವೆ? ಅನ್ನಿಸದಿರಲಿಲ್ಲ.




ಹುಟ್ಟು ಮೂಕಿ, ಕಿವುಡಿಯಾದ ಉಮಾ ನರಗುಂದಳ ಬವಣೆಯನ್ನು ಕಂಡರೆ ಸಂಕಟವಾಗುತ್ತದೆ. ತಂದೆ ಬ್ಯಾಂಕಿನ ನೌಕರ. ಸಾಕಷ್ಟು ಸ್ಥಿತಿವಂತರು. ಉಮಾಳ ಅಜ್ಜನೂ ಡಾಕ್ಟರರೆ. ಆಗಿನ ಕಾಲದಲ್ಲಿ ಪ್ರಸಿದ್ಧ ಶಸ್ತ್ರ ಚಿಕಿತ್ಸಕರು. ಆಕೆ ಇನ್ನೂ ೬-೭ ವರ್ಷಗಳ ಬಾಲಕಿಯಾಗಿದ್ದಾಗ ತಂದೆತಾಯಿಗಳು ಆಕೆಯನ್ನು ಮೈಸೂರಿನ ಮೂಕರ ಶಾಲೆಯಲ್ಲಿ[illegible] [illegible]ಸಿದರು. ೬-೭ ವರ್ಷ [illegible]ಲ್ಲಿ ಕಳೆದ ಬಾಲಕಿ ತನ್ನ ಹೆಸರು ಉಮಾ ಎಂದು ಉದ್ಘವಾಗಿ ಹೇಳಿದಾಗ ಅದನ್ನೇ ಕೇಳಿ ಸಂತೋಷಪಡ[illegible]ಯಿತು. ಇದ್ದ ಬಿದ್ದ ಹಣವನ್ನೆಲ್ಲಾ [illegible]ದಾಗ ಸಂದಿದ್ದು ಕೇವಲ ಆವಳ ಹೆಸರು ಹೇಳುವ ಸಾಮರ್ಥ್ಯ ಹಾಗೂ ಕಿವಿಗೊಂದು [illegible]ರಿಂಗ ಏಡ್ ಮಾತ್ರ.

ಕಿವಿಯಲ್ಲಿ[illegible] ತಾಳಿಕೊಳ್ಳಲಾರದ

ಕಿವಿನೋವು, ಕಿವಿ ಸೋರುವುದು, ಜೊತೆಗೆ ಆಗಾಗ ಜ್ವರದ ಬಾಧೆ. ಅವಳಿಗಾಗಿ ತಿರುಗಿದ್ದೇ ತಿರುಗಿದ್ದು. ಇದು ಹೀಗಾಗಿರಬಹುದು, ಹಾಗಾಗಿರಬಹುದು, ಈ ಮದ್ದು ಉತ್ತಮ, ಇದು ಫಲದಾಯಕ ಮುಂತಾದ ಭರವಸೆಗಳ ಮೂಟೆಗಳೇ ಭಾರವಾದವು. ಜೇಬಿನ ಚೀಲ ಹಗುರವಾಯಿತು. ಸಮಾಧಾನವೆಂಬುದು ಕನಸಿನ ಗಂಟಾಯಿತು ಇಡೀ ಸಂಸಾರಕ್ಕೆ.

ವರುಷಗಳು ಉರುಳಿದವು. ತಂದೆತಾಯಿಗಳಿಗೆ ಸದಾ ಅವಳದೇ ಚಿಂತೆ. ಪಿಂಚಣಿಯ ಘೋಷಣೆಯಾದಾಗ ತಂದೆ ಕಾರ್ಯತತ್ಪರರಾದರು. ಎಲ್ಲ ಕಾಗದಗಳ ಮೂಟೆ ಹೊತ್ತು ವೈದ್ಯರ ಶಿಫಾರಸಿಗಾಗಿ ಅಲೆದಾಡಿದರು. ಅಂಗವಿಕಲತೆಯ ಲಾಭ ಅವಳಿಗೊಂದು ಊರುಗೋಲಾಗಿ ನಿಲ್ಲಲಿ, ಮುಗುಚಿ ಬೀಳುವ ಬೆಳೆಗೊಂದು ಕಟ್ಟಿಗೆಯ ಕಟ್ಟು ಆಸರೆಯಾದೀತು. ಬೆಳೆ ಬೆಳೆಯಬಹುದು, ಕಮರದು ಎಂಬ ಕನಸು ಹೊತ್ತು ತಿರುಗುತ್ತಿದ್ದರು ಉಮಾಳ ತಂದೆ ರಾಧಾಕೃಷ್ಣ ನರಗುಂದ. ಅವರು ನನಗೆ ಹಳೆಯ ಪರಿಚಯ. ಚಿಕ್ಕವನಿದ್ದಾಗ ನನ್ನೊಂದಿಗೆ ಆಡಿದ ನೆನಪು. ಅವರ ತಂದೆಯವರೂ ನನ್ನ ತಂದೆಯವರೂ ಸ್ನೇಹಿತರಿದ್ದುದು ನೆನಪು. ಅವನ ಚಿಕ್ಕ ತಂಗಿ ಸಾವಿತ್ರಿಯನ್ನು ಎತ್ತಿ ಆಡಿಸಿದ ನೆನಪುಗಳು ನನ್ನನ್ನು ತೀರಾ ಹಿಂದಕ್ಕೆ ಸೆಳೆದವು. ನಾವಿಬ್ಬರೂ ತೀರಾ ಸನಿಹಕ್ಕೆ ಬಂದೆವು.

"ರಾಧಾಕೃಷ್ಣ, ನಿನಗೆ ಭರವಸೆಯನ್ನು ಕೊಡದಿದ್ದರೂ ಭಾರವಾಗದಂತೆ ನಿನ್ನ ಮಗಳಿಗೆ ಹೋಮಿಯೋಪತಿ ಮದ್ದು ಕೊಟ್ಟು ಪರೀಕ್ಷಿಸಲು ಬಯಸುವೆ. ಇದಕ್ಕೆ ನಿನ್ನ ಅಭ್ಯಂತರವೇನೂ ಇಲ್ಲದಿದ್ದರೆ ನಾನು ಉಮಳ ಬಗ್ಗೆ ಪ್ರಯೋಗಾತ್ಮಕವಾಗಿ ಔಷಧಿ ಬಳಸುವೆ. ನಾವಿಬ್ಬರೂ ದೇವರ ಮೇಲೆ ಭರವಸೆ ಇಟ್ಟು ಪ್ರಯತ್ನಿಸೋಣ" ಅಂದೆ.

"ನನ್ನ ಮಗಳು ನಿಮ್ಮ ಮಗಳೂ ಅಲ್ಲವೇ ಡಾಕ್ಟರೆ ? ನಿಮ್ಮ ಕಳಕಳಿಯ ಮಾತುಗಳನ್ನು ಕೇಳಿ ನಾನೇ ಮೂಕನಾಗಿದ್ದೇನೆ. ಹಿಂದಿನ ಬಾಲ್ಯದ ದಿನಗಳನ್ನು ನೆನಸಿಕೊಂಡು ಮುಂದೆಬಂದು ಕೇಳಿದಾಗ ನಾನು ಇಲ್ಲವೆಂದು ಹೇಗೆ ಹೇಳಲಿ ? ನೀವು ತಿಳಿಸಿದಂತೆ ಅವಳಿಗೆ ಔಷಧಿ ಕೊಡುವೆ. ನನ್ನ ಸಂಪೂರ್ಣ ಸಹಕಾರವಿದೆ. ಪ್ರಯೋಗ ನಡೆಯಲಿ ಎಂದ."

ಅಂದೇ ಉಮಾಳನ್ನು ಪರೀಕ್ಷಿಸಿದೆ. ಕಿವಿಗಳೆರಡರಲ್ಲೂ ಶಿಲೀಂಧ್ರ ಬೆಳೆದಿದೆ. ಕಿವಿ ಪರದೆಗಳೆರಡರಲ್ಲೂ ದೊಡ್ಡ ತೂತುಗಳು. ಒಳಕಿವಿ ಕೆಂಪಾದದ್ದನ್ನು ಹೊರಗೆ ತೋರಿಸುತ್ತಿವೆ. ಕಿವಿಯಲ್ಲಿ ಅಲ್ಲಲ್ಲಿ ಶ್ರವಣಯಂತ್ರದ ಒತ್ತಡದಿಂದ ಗಾಯಗಳಾಗಿವೆ. ಜಿಡ್ಡುಗಟ್ಟಿದ ಜಲ ಸೋರುತ್ತಿದೆ. ಕಿವಿ ಮುಟ್ಟಿದರೆ ನರಳುತ್ತಾಳೆ. ಅದನ್ನೆಲ್ಲ ಕಂಡು ಕರುಳು ಕಿವಿಚಿದಂತಾಯಿತು.

೧೯೯೩ರಿಂದ ಅವಳಿಗೆ ಬ್ರಯೋನಿಯಾ ದಿಂದ ಹಿಡಿದು ಒಂದೊಂದಾಗಿ ಬದಲಿಸುತ್ತ ಮೆರ್ಕ್ಯೂರಿನಮ್ ತನಕ ಪ್ರಯೋಗಿಸಿದೆ. ಕೆಲವೇ ಕೆಲವು ದಿನಗಳಲ್ಲಿ ಅವಳ ಕಿವಿ ಸೋರುವುದು ನಿಂತು ಬೆಳೆದು ನಿಂತ ಶಿಲೀಂಧ್ರ ಮಾಯವಾದಾಗ ಅವಳು ಶ್ರವಣಯಂತ್ರ ತಗಲಿಸಿಕೊಳ್ಳಲು ಸಹಕರಿಸಹತ್ತಿದಳು. ಅವಳ ತುಟಿಯ ಚಲನೆ ಮುಖದ ಭಾವಗಳನ್ನು ತಿಳಿದು ನಾನು ತಿಳಿಸಿದಂತೆ ಸಹಕರಿಸ ತೊಡಗಿದಳು. ಮೆರ್ಕ್ಯೂರಿನಮ್‌ದಿಂದ ಉತ್ತಮ ಫಲದೊರೆತಾಗ ನನಗಾದ ಆನಂದ ಅಷ್ಟಿಷ್ಟಲ್ಲ. ದೂರದಿಂದ ಬರುವ ರೈಲಿನ ಶಬ್ದ, ಬಟ್ಟೆ ಒಗೆಯುವಾಗ ಆಗುವ ಶಬ್ದಗಳಿಂದ ಬೇಸರಿಸಿಕೊಳ್ಳುತ್ತಿದ್ದಳು. ಇಂದು ಮನೆಯಲ್ಲಿಯ ಫೋನಿನ ಗಂಟೆ, ಗಡಿಯಾರದ ಗಂಟೆ ಕೇಳಿ ತಾಯಿಗೆ ತಿಳಿಸುವಳು. ದೂರದರ್ಶನ

ಸದಾ ನೋಡುತ್ತ ನಲಿಯುತ್ತಾಳೆ. ಹಿಂದಿ ಶಬ್ದಗಳನ್ನು ಉಚ್ಚರಿಸುತ್ತಾಳೆ. ಇನ್ನೂ ಬಹಳಷ್ಟು ಸುಧಾರಣೆಯಾದರೆ ಅದ್ಭುತ ವಾದುದನ್ನು ಸಾಧಿಸಿದಂತಾಗುವುದು.

*** **** ***

ಗಂಟೆ ಹೊಡೆಯುವ ಡಬಾಲಿ ಹೈಸ್ಕೂಲಿನ ಸೇವಕ ದಾಸರ್ ಕೇವಲ ೨೪ರ ಹರೆಯದ ಹುಡುಗ, ತಾಯಿ ಇಲ್ಲದ ತಬ್ಬಲಿ. ಮುದಿ ತಂದೆಯೊಬ್ಬನೇ ಮನೆಯಲ್ಲಿ. ಊರ ಹೊರಬದಿಯಲ್ಲಿ ಚಿಕ್ಕ ಮನೆಯೊಂದರಲ್ಲಿ ವಾಸಿಸುತ್ತಿದ್ದ. ಶಾಲೆಯ ಸಂಬಳದಲ್ಲಿ ಇಬ್ಬರ ಉದರ ನಿರ್ವಹಣೆ ಹೇಗುಹೇಗೊ ಸಾಗಿತ್ತು.

೧೯೮೮ರ ಆಗಸ್ಟನಲ್ಲಿ ಶಿವಮೊಗ್ಗೆಯಿಂದ ವರ್ಗಾವಣೆಗೊಂಡು ಶಿರಹಟ್ಟಿಗೆ ಬಂದಿದ್ದ. ೧೯೮೫ರಿಂದಲೇ ಹೊಮಿಯೋಪಥಿ ಹುಚ್ಚು ತಲೆಯಲ್ಲಿ ಗೂಡು ಕಟ್ಟಿತ್ತು. ಶಿರಹಟ್ಟಿಯಲ್ಲಿ ಕೆಲಸದ ಒತ್ತಡ ಕಡಿಮೆಯಾದದ್ದರಿಂದ ಬಹಳಷ್ಟು ಪುಸ್ತಕಗಳನ್ನು ಓದುವ ಅವಕಾಶ ಸಿಕ್ಕಿದ್ದಲ್ಲದೆ ಹೋಮಿಯೋಪಥಿ ಪುಸ್ತಕಗಳ ಭಂಡಾರವೇ ಅಲ್ಲಿದ್ದ ಡಾ. ಮಹಿಷಿ, ಡಾ. ಫಾಯದೆಯವರಿಂದ ದೊರೆತದ್ದು ನನ್ನ ಸುದೈವವೆಂದೇ ಹೇಳಬೇಕು. ಓದುತ್ತಾ ಹೋದಂತೆ ಜಿಜ್ಞಾಸೆ ಬೆಳೆಯಿತು. ೧೯೭೬ರಿಂದ ಕಾಲಿನಲ್ಲಿಯ ಇಸಬು ಸದಾ ಕಾಡುತ್ತಿತ್ತು. ನನ್ನನ್ನೇ ಪರೀಕ್ಷೆಗೆ ಒಳಪಡಿಸಿಕೊಂಡೆ. ಇಸಬಿಗೆ ಔಷಧಿ ಹುಡುಕುತ್ತ ಹೊರಟೆ. ಸಲ್ಫರ್ ಆರ್ಸೆನಿಕ್, ಪೆಟ್ರೋಲಿಯಂ ಗ್ರಾಫಾಯಿಟ್‌ಗಳನ್ನು ಬಳಸುತ್ತ ಬಂದಂತೆ ಇಸಬಿನ ತೀವ್ರತೆ ಕಡಿಮೆಯಾಯಿತು. ಹಾಗಾದರೆ ಇದನ್ನು ಉಳಿದವರ ಮೇಲೆ ಪ್ರಯೋಗಿಸಬಾರದೇಕೆ? ಎಂಬ ವಿಚಾರ ಬಂತು.

ಈ ಸಮಯದಲ್ಲೆ ಈ ೨೪ರ ಧಡಿಯ ಸಿಕ್ಕ. ಹೈಸ್ಕೂಲಿನಿಂದ ಹೊರಹಾಕುವ ವಿಚಾರದಲ್ಲಿದ್ದ ಆಡಳಿತವರ್ಗದವರು ಹಾಗೆ ಮಾಡುವ ಮೊದಲೇ ಶಿಕ್ಷಕರೊಬ್ಬರು ಬಂದು ಅವನ ಕಥೆ ಹೇಳಿದಾಗ ಇದೇ ಸರಿಯಾದ ಸಮಯ ಎಂದು ನಿರ್ಧರಿಸಿದೆ. ಅದಕ್ಕೂ ಮೊದಲು ಡಬಾಲಿಯವರೇ ಪರಿಚಿತರಿದ್ದುದರಿಂದ ಅವನ ಬದಲು ಅವನ ಮುದಿ ತಂದೆಗೆ ಆ ಕೆಲಸ ಮಾಡಲು ಅವಕಾಶ ಕಲ್ಪಿಸಿ ಮಗನಿಗೇ ಸಂಬಳ ಕೊಡುವಂತೆ ಕೇಳಿಕೊಂಡೆ. "ಆಗಲಿ, ಒಂದಾರು ತಿಂಗಳು ನೋಡೋಣ" ಎಂದಾಗ ನನ್ನ ಓದನ್ನು ಚುರುಕುಗೊಳಿಸಿದ್ದಲ್ಲದೇ ಪುಸ್ತಕಗಳನ್ನಿತ್ತ ಡಾಕ್ಟರರನ್ನು ನನ್ನ ಪ್ರಯೋಗದಲ್ಲಿ ಪಾಲ್ಗೊಳ್ಳಲು ವಿನಂತಿಸಿಕೊಂಡೆ.

೧೯೮೯ರ ಫೆಬ್ರುವರಿಯಲ್ಲಿ ದಾಸರ್‌ನಿಗೆ ಜ್ವರ ಕಾಣಿಸಿಕೊಂಡು ಶಿರಹಟ್ಟಿಯಲ್ಲಿ ಚಿಕಿತ್ಸೆಪಡೆದರೂ ಕಡಿಮೆಯಾಗಲಿಲ್ಲ. ಗದುಗಿಗೆ ಹೋಗಿ ದೊಡ್ಡ ಡಾಕ್ಟರರನ್ನು ಕಂಡ. ಟೈಫಾಯ್ಡ್ ಇದೆಯೆಂದು ಡಾಕ್ಟರರು ಕೊಟ್ಟ ಅಲೋಪಥಿ ಗುಳಿಗೆಗಳನ್ನು ಎರಡು ವಾರ ನುಂಗಿದ. ಜ್ವರ ಕಡಿಮೆಯಾಗಲಿಲ್ಲ. ಜತೆಗೆ ಕಾಲುಗಳು ನಿಶ್ಯಕ್ತಗೊಳ್ಳತೊಡಗಿದವು. ಅನಂತರ ಆತ ಇನ್ನೊಬ್ಬನಿಗೆ ತೋರಿಸಿದಾಗ ಇದು ಟೈಫಾಯ್ಡ್ ಅಲ್ಲ, ಮಿದುಳಿನ ಜ್ವರ ಎಂದು ಹೆಸರಿಟ್ಟು ಬೆನ್ನು ಹುರಿಯಿಂದ ನೀರು ತೆಗೆದು ಪರೀಕ್ಷಿಸಿದರು. ಮಿದುಳಿಗೆ ಕ್ಷಯ ತಗುಲಿದೆಯೆಂದು ಚಿಕಿತ್ಸೆ ಶುರು ಮಾಡಿದರು. ಒಂದೇ ತಿಂಗಳಿನಲ್ಲಿ ಕಾಲುಗಳನ್ನೇ ಕಳೆದುಕೊಂಡ. ಪಾರ್ಶ್ವವಾಯುವೆಂದು ಹೆಸರಿಸಿದಾಗ ನಾಟೀ ಚಿಕಿತ್ಸೆ ಪಡೆದ. ಪ್ರಯೋಜನವಾಗಲಿಲ್ಲ. ಆದರೆ ಹಸಿವು ಮಾತ್ರ ಅತಿರೇಕಕ್ಕೆ ಇಟ್ಟುಕೊಂಡಿತು. ಇದ್ದುದನ್ನೆಲ್ಲಾ ತಿಂದರೂ ಇನ್ನೂ ಬೇಕೆಂದು ತಂದೆಯನ್ನು ಕಾಡುತ್ತಿದ್ದ.

ಮಲಮೂತ್ರಗಳನ್ನು ಮಲಗಿದ್ದಲ್ಲೇ ಮಾಡುತ್ತಿದ್ದುದು ತಂದೆಯ ತಲೆ ತಿನ್ನಹತ್ತಿತು.

ತಂದೆಯೆ ಮಲಮೂತ್ರ ಬಳಿದು ಹಸಿಬಿಸಿಯಾದರೂ ರೊಟ್ಟಿಪಲ್ಲೆ ಬೇಯಿಸಿ ಉಣಬಡಿಸತೊಡಗಿದ. ಬಡಸಂಸಾರದಲ್ಲಿ ಬಕಾಸುರನಾದ ಮಗನಿಗೆ ವ್ಯಾಧಿಯ ಭೂತ ಬಡಿದುಕೊಂಡಿದ್ದು ನುಂಗಲಾರದ ತುತ್ತಾಯಿತು ತಂದೆಗೆ. ಸಂಜೆಯ ಕಳ್ಳು ಮರೆತು ಕರುಳಿನ ಕುಡಿಗಾಗಿ ಹಗಲು ಶಾಲೆಯಲ್ಲಿ ಬಿಡುವಿದ್ದಾಗಲೆಲ್ಲಾ ಮಗನ ಸೇವೆಯಲ್ಲಿ ಕಾಲ ಕಳೆಯುವುದನ್ನು ಕೇಳಿದಾಗ ನನ್ನ ಮನಸ್ಸು ಕರಗಿತು.

ನಾವು ಮೂವರೂ ಸೇರಿ ಮೂರು ಔಷಧಿಗಳನ್ನು ಹುಡುಕಿ ತೆಗೆದು ಮೊದಲು ನಕ್ಸವೊಮಿಕಾದಿಂದ ಶುರುಮಾಡಿ ಜೆಲ್ಸಮಿಯಂ ಹಾಗೂ ಕ್ಯುಪ್ರಮ್‌ವರೆಗೂ ಕೊಡುತ್ತಾ ಬಂದೆವು. ನಾವೆಲ್ಲಾ ಚರ್ಚಿಸಿ ಆಗಾಗ ಔಷಧಿಗಳ ಬದಲಾವಣೆ ಮಾಡುತ್ತ ಬಂದೆವು.

ತಿಂಗಳೊಪ್ಪತ್ತಿನಲ್ಲಿ ಬಕಾಸುರನ ಹಸಿವು ಕಡಿಮೆಯಾಯಿತು. ಮೂತ್ರ ತಾನಾಗಿ ಸುರಿಯುವುದು ನಿಂತಿತು. ಆವನು ಸುಧಾರಿಸುತ್ತಿದ್ದಂತೆ ತಂದೆಗೆ ಖುಷಿಯಾಯಿತು. ಆಗಾಗ ಕಳ್ಳು ಕುಡಿದು ಕುಣಿದಾಡಿ ಕುಪ್ಪಳಿಸಿದ.

ಮೂರನೇ ತಿಂಗಳು ಕಳೆದಾಗ ಎದ್ದು ನಿಂತ ದಾಸರ ಐದನೇ ತಿಂಗಳಲ್ಲಿ ನಡೆದಾಡಹತ್ತಿದಾಗ ನಡುಗುವ ಕಾಲುಗಳಲ್ಲಿ ಬಲ ತುಂಬಹತ್ತಿತು. ಆರು ತಿಂಗಳಿಗಾಗಲೇ ಕೆಲಸಕ್ಕೆ ಹಾಜರಾದ. ನನ್ನ ಮೊದಲ ರೋಗಿ ಗುಣವಾಗಿದ್ದ. ಅಂದಿನಿಂದ ಹೋಮಿಯೋಪಥಿಯೇ ನನ್ನುಸಿರಾಯಿತು. ದಾಸರನ ಕಾಲಿನ ಸ್ಥಿರತೆ ನನ್ನ ದೃಢತೆಯನ್ನು ಹೆಚ್ಚಿಸಿತು.

ಡಾಕ್ಟರ್ ಪುರಾಣಿಕರು ಜಿಲ್ಲಾ ಆಸ್ಪತ್ರೆಯಲ್ಲಿ ಶಸ್ತ್ರಚಿಕಿತ್ಸಕರಾಗಿ ಬಂದ ಕೆಲದಿನಗಳಲ್ಲೇ ಒಳ್ಳೇ ಸ್ನೇಹಿತರಾಗಲು ಎರಡು ಕಾರಣಗಳಿದ್ದವು. ನನ್ನ ಸರಿದೂಗುವ ದೇಹದಾರ್ಢ್ಯ, ಜೊತೆಗೆ ಸದಾ ನಗುವ ಮುಖ. ದುಂಡುದುಂಡಾಗಿದ್ದ ಅವರು ತೂಗಾಡುತ್ತ ನಡೆಯುವ ಶೈಲಿ. ಒಂದು ಕ್ಷಣ ಇಲ್ಲಿದ್ದರೆ ಇನ್ನೊಂದು ಕ್ಷಣದಲ್ಲಿ ಇನ್ನೊಂದು ಕಡೆ. ನಾವೆಲ್ಲ ಪ್ರೀತಿಯಿಂದ ಅವರನ್ನು ಪುರಾಣಿಕ ಬುವಾ ಎಂದೇ ಕರೆಯುತ್ತಿದ್ದೆವು.

ಅವರನ್ನು ಬಹಳ ದಿನ ಕಾಣದ್ದಕ್ಕೆ ಮನಸ್ಸು ಚಡಪಡಿಸುತ್ತಿತ್ತು. ಅಂದು ರಾತ್ರಿ ಹತ್ತುಗಂಟೆಗೆ ತಾವಾಗಿಯೆ ಮನೆಗೆ ಬಂದಾಗ ಮನೆಮಂದಿಗೆಲ್ಲ ಎಲ್ಲಿಲ್ಲದ ಆಶ್ಚರ್ಯ. ಅಂದಿನ ಅವರ ಮುಖದ ದೈನ್ಯತೆ ಇನ್ನೂ ಕಣ್ಣಿಗೆ ಕಟ್ಟಿದಂತಿದೆ.

"ಏನು ಬುವಾ, ನಿಮ್ಮ ನಗುಮುಖ ಬತ್ತಿದೆಯಲ್ಲ ? ಏನು ಸಮಾಚಾರ ? ಎಂದೂ ಮನೆಗೆ ಬಾರದವರು ಇಂದು ಬಂದೀರಲ್ಲ ?" ಅಂದೆ.

"ಪ್ರಸಂಗವೇ ಹಾಗಿದೆ ಡಾಕ್ಟರರೇ, ನನ್ನ ಅಕ್ಕನ ಗಂಡನನ್ನು ಮನೆಗೆ ಕರೆತಂದು ಬಿಟ್ಟು ಇಲ್ಲಿಗೇ ಬರಬೇಕಾಯಿತು."

"ನನಗಂತೂ ಏನೂ ಅರ್ಥವಾಗದು. ಬಿಡಿಸಿ ಹೇಳಿ."

"ಒಂದು ತಿಂಗಳ ಹಿಂದೆ ನನ್ನ ಅಕ್ಕನ ಗಂಡನನ್ನು ಕ್ಯಾನ್ಸರ್ ಇಸೋಫ್ಯಾಗಸ್ (ಅನ್ನನಾಳದ ಅರ್ಬುದರೋಗ) ಸಲುವಾಗಿ ಇಟ್ಟಿದ್ದು ಅವರಿಗೆ ಕೆಮೊಥೆರಪಿ, ರೆಡೀಯೊ ಥೆರಪಿ ಕೊಡಿಸಿದಾಗಲೂ ಪ್ರಯೋಜನವಾಗದೇ ಒಂದು ಹನಿ ನೀರೂ ಕುಡಿಯದಂತಾದರು. ಈಗ ಅವರನ್ನು ಮನೆಗೆ ಕರೆದುಕೊಂಡು ಹೋಗಿ ಅಂತ ಕಳಿಸಿದರು. ಬದುಕುವ ಭರವಸೆ ಇಲ್ಲ ಎಂದು

ಹೇಳಿದ್ದರಿಂದ ರಾತ್ರಿಯೇ ಅವರನ್ನು ಬಾಗಲುಕೋಟೆಯಲ್ಲಿನ ಅವರ ಮನೆಗೆ ಕಳಿಸುವ ತರಾತುರಿಯಲ್ಲಿ ನಿಮ್ಮ ನೆನಪಾಯಿತು. ಓಡಿ ಬಂದೆ".

"ನಾನೇನು ಮಾಡಲು ಬಯಸುವಿರಿ. ನಿಮ್ಮ ಜತೆ ಬರಬೇಕೆ ?"

"ಹಾಗೇನಿಲ್ಲ. ನೀವು ನನ್ನ ಹೆಂಡತಿಗೆ ಹೋಮಿಯೋಪಥಿ ಕೊಟ್ಟು ಗುಣಪಡಿಸಿದಿರಿ. ಈಗವಳಿಗೆ ಮುಟ್ಟಿನ ತೊಂದರೆಯೇ ಇಲ್ಲ. ಹಾಗೆಯೇ ಇವರಿಗೂ ಏನಾದರೂ ಕೊಡಬಹುದೆ ? ಅಂತ ಆಶಿಸಿ ಬಂದೆ."

"ಹಾಗಿದ್ದರೆ ಬಾಗಲುಕೋಟೆಗೆ ಕಳಿಸುವ ಬದಲು ನಿಮ್ಮಲ್ಲೇ ಇರಲಿ. ಅಲ್ಲೇ ಬಂದು ಔಷಧಿ ಕೊಟ್ಟು ಹೋಗಬಹುದು ಅಲ್ಲದೆ ಪರಿಣಾಮ ನೋಡಬಹುದು."

"ಆದರೆ, ನಮ್ಮಕ್ಕ ಒಂದೇ ಸವನೆ ಗೋಳಿಡುತ್ತಿದ್ದಾಳೆ. ತಾವು ಕಟ್ಟಿಸಿದ ಮನೆಯಲ್ಲೇ ಅವರ ಅವಸಾನವಾಗಲಿ ಅಂತ ಅವಳ ಆಶೆ. ಆದರೆ ಒಂದು ರೊಟ್ಟಿ ತಿನ್ನುವ ಹಾಗೆ ಮಾಡಿರಿ, ತಿಂದಾದ ಬಳಿಕ ಸಾಯಲು ಹೆದರುವದಿಲ್ಲ ಅಂತ ಮಾವನ ಹಠ. ಏನು ಮಾಡಲೂ ತೋಚದಾಗಿದೆ"

"ಹೀಗಿದೆಯೋ ಸಮಾಚಾರ, ಅದಕ್ಕೇ ಬಹಳ ದಿನ ನಿಮ್ಮನ್ನು ಕಾಣಲಿಲ್ಲ. ಏನೇ ಆಗಲಿ, ಅವರನ್ನೊಂದು ಸಲ ನೋಡಿ ನಂತರ ಔಷಧಿ ಕೊಟ್ಟು ಕಳಿಸುತ್ತೇನೆ. ಸ್ವತಃ ನೀವೇ ನಿಂತು ಉಪಚರಿಸಿರಿ. ನೋಡೋಣ. ದೇವರ ಇಚ್ಛೆ ಹೇಗಿದೆಯೊ ಹಾಗೆ ಆಗಲಿ."

ಅಂದೇ ರಾತ್ರಿ ನನ್ನಿಂದ ರೆಸ್ಕ್ಯೂರೆಮೆಡಿ, ಬ್ಯಾಪ್ಟಿಸಿಯಾ, ಆರ್ಸೆನಿಕಂ ಇತ್ಯಾದಿ ಔಷಧಿಗಳನ್ನು ತೆಗೆದುಕೊಂಡು ನಾನು ಹೇಗೆ ಹೇಗೆ ಅವುಗಳನ್ನು ಕೊಡಬೇಕು ಎಂದು ತಿಳಿಸಿದ್ದನ್ನು ಬರೆದುಕೊಂಡು ಹೋದರು.

ನಾಲ್ಕೈದು ದಿನ ಕಳೆದಿರಬಹುದು ಪುರಾಣಿಕ



ಬುವಾ ನನ್ನನ್ನೂ ನನ್ನ ಹೆಂಡತಿಯನ್ನೂ ರಾತ್ರಿ ಊಟಕ್ಕೆ ಆಹ್ವಾನಿಸಿದಾಗ ತುಸು ಗಲಿಬಿಲಿಗೊಂಡೆ. ಯಾವ ಕಾರಣಕ್ಕಿರಬಹುದು ? ನಮ್ಮಲ್ಲಾದರೆ ಹದಿಮೂರನೇ ದಿನಕ್ಕೆ ಸಿಹಿ ಮುಟ್ಟುವ ಪದ್ಧತಿ. ಅದೂ ಬೆಳಗಿನ ಊಟ. ಸಾಯಂಕಾಲ ಊಟದ ಪದ್ಧತಿ ಇವರಲ್ಲಿದೆಯೆ ? ಎಂಬ ಯೋಚನೆ ಸುಳಿದಾಗ ದುಗುಡ ಇನ್ನಷ್ಟು ಹೆಚ್ಚಾಯಿತು. ನಾವಿಬ್ಬರೂ ರಾತ್ರಿ ಅವರ ಮನೆ ಮುಟ್ಟಿದಾಗ ತುಂಬಾ ಹೊತ್ತಾಗಿತ್ತು.

ನಾವಿಬ್ಬರೇ ಅತಿಥಿಗಳೆಂದು ತಿಳಿದಾಗ

ವೃಥಾ ಅವರನ್ನು ಕಾಯಿಸಿದೆವು ಎಂಬ ಅಪರಾಧೀಭಾವ ಉಂಟಾಯಿತು.

ಊಟಕ್ಕೆ ಮುಂಚೆ, ಖುಷಿಯಿಂದ ಹೇಳಿದರು. ಮಾವ ಬಾಗಲುಕೋಟೆ ಮುಟ್ಟಿದ ಮರುದಿನದಿಂದಲೇ ಶುರುವಾಗಿ ನಿನ್ನೆಯೇ ರೊಟ್ಟಿಯನ್ನು ಕೂಡ ತಿಂದರು. ನನಗಾದ ಆನಂದ ನಿಮ್ಮನೆಗೆ ಬಂದು ಹೇಳಬೇಕೆಂದೆ. ಆದರೆ ನನ್ನ ಹೆಂಡತಿ ಊಟಕ್ಕೆ ಕರೆದರಾಯಿತು ನನ್ನನ್ನೂ ಗುಣಮುಖ ಮಾಡಿದ್ದಾರೆ. ಈಗ ನಿಮ್ಮ ಮಾವನನ್ನೂ ಗುಣಮಾಡಿ ರೊಟ್ಟಿ ತಿನ್ನುವಷ್ಟರ ಮಟ್ಟಿಗೆ ಮಾಡಿದ್ದಾರಲ್ಲ; ಅದಕ್ಕಾಗಿ ಒಟ್ಟಾಗಿ ಧನ್ಯವಾದ ಅರ್ಪಿಸಿದಂತಾಗುತ್ತದೆ ಅಂತ ನಿಮ್ಮನ್ನು ಕರೆದಿದ್ದೇವೆ. ಕಾರಣ ತಿಳಿಸದ್ದಕ್ಕೆ ಕ್ಷಮಿಸಿರಿ" ಎಂದರು. ನನಗಾದ ಆನಂದಕ್ಕೆ ಮಿತಿಯೇ ಇರಲಿಲ್ಲ.

ಅವರಿಗೆ ಗುಣವಾಗಲಿಲ್ಲ ನಿಜ. ಆದರೆ ೩೦ ದಿನಗಳ ವರೆಗೆ ತಿಂದುಂಡು ತಮ್ಮಾಸೆ ತೀರಿಸಿಕೊಂಡರು ಎನ್ನುವುದೇ ಸಮಾಧಾನದ ವಿಷಯ.

** ** **

೧೯೯೧-೯೨ರಲ್ಲಿ ಆಸ್ಪತ್ರೆಯ ಬಾಗಿಲು ಮುಚ್ಚುವ ಸಮಯಕ್ಕೆ ಬನ್ನಿಗೋಳರು ರಾಧಾಕೃಷ್ಣ ನರಗುಂದರವರ ಜೊತೆಗೆ ಬಂದರು. ರಾಧಾಕೃಷ್ಣರ ಮಗಳೂ ಬನ್ನಿಗೋಳರ ಮಗಳೂ ನನ್ನಲ್ಲಿ ಚಿಕಿತ್ಸೆ ಪಡೆಯುತ್ತಿದ್ದುದರಿಂದ ಆಸ್ಪತ್ರೆ ಮುಚ್ಚುವ ವೇಳೆಗೆ ಹೋದರೆ ನಿಧಾನವಾಗಿ ಮಾತನಾಡಬಹುದು ಎಂದು ಅವರು ಬಂದಾಗ ಒಂಭತ್ತಾಗಿದ್ದರೂ ನಾನು ಕೊನೆಯ ಕೇಸು ನೋಡಿದ ನಂತರವೆ ಒಳಗೆ ಬಂದರು. ಕೆಲವೇ ದಿನಗಳ ಹಿಂದೆ ಔಷಧಿ ತೆಗೆದುಕೊಂಡವರು ಮತ್ತೇಕೆ ಬಂದರು? ಎಂಬ ವಿಚಾರ ಬಂದು ನಾನು, "ಹೇಗಿದ್ದಾರೆ ಮಕ್ಕಳು? ಏನು ಸಮಾಚಾರ?" ಎಂದು ಕೇಳಿದೆ.

"ಅವರು ಗುಣಮುಖರಾಗುತ್ತಿದ್ದಾರೆ. ನೀವು ಕ್ಯಾನ್ಸರಿಗೂ ಇವೇ ಔಷಧಿಗಳನ್ನು ಕೊಡುತ್ತೀರಾ ಎಂದು ಕೇಳಿಕೊಂಡು ಹೋಗಲು ಬಂದೆವು".

"ರೋಗಕ್ಕೊಬ್ಬ ಡಾಕ್ಟರಿರುವ ಕಾಲ ಇನ್ನೂ ಮುಂದಿದೆ. ಏನಾಗಬೇಕಿತ್ತು ಹೇಳಿ."

"ಏನಿಲ್ಲ, ನನ್ನ ಅಕ್ಕನ ಗಂಡ ದೇವಿದಾಸ ಹುಬ್ಬಳ್ಳಿಯಲ್ಲಿ ಚಾರ್ಟರ್ಡ್ ಅಕೌಂಟಂಟ್ ಆಗಿದ್ದಾರೆ. ಅವರಿಗೆ ಬ್ರೇನ್ ಕ್ಯಾನ್ಸರ್ ಆಗಿದೆ. ಅವರಾಗಲೇ ಮೂರು ಆಪರೇಶನ್ ಮಾಡಿಸಿಕೊಂಡಿದ್ದಾರೆ. ಆದರೂ ಗುಣವಾಗಿಲ್ಲ. ಹಾಗೆಂದೆ ತಾವು ಒಂದು ಸಲ ಅವರನ್ನು ನೋಡುವಿರೇನು? ಅಂತ ಕೇಳಲು ಬಂದೆವು" ಬನ್ನಿಗೋಳ ಸಂಕ್ಷಿಪ್ತದಲ್ಲಿ ವಿವರಿಸಿದರು.

"ಕರೆದುಕೊಂಡು ಬನ್ನಿ ನೋಡೋಣ. ನಿಮ್ಮ ಮಕ್ಕಳನ್ನು ಎಲ್ಲ ಕಡೆ ಸುತ್ತಾಡಿಸಿಯೇ ನನ್ನ ಕಡೆ ಬಂದಿದ್ದಿರಿ ಅಂದ ಬಳಿಕ ಇವರನ್ನೂ ನೋಡಿದರಾಯಿತು" ಎಂದೆ.

"ಆದರೆ ಅವರು ಬರುವ ಸ್ಥಿತಿಯಲ್ಲಿಲ್ಲ. ಹತ್ತಾತ್ತು ನಿಮಿಷಕ್ಕೆ ಕೈಕಾಲು ಸೆಟೆಸುತ್ತಾರೆ. ಹೀಗಾಗಿ ಅವರನ್ನು ಇಲ್ಲೀವರೆಗೆ ಕರೆತರುವುದು ದುಷ್ಕರ. ಅದಕ್ಕೆಂದೆ ಈ ವರೆಗೆ ನಿಮಗೆ ತಿಳಿಸಿರಲಿಲ್ಲ. ನನ್ನ ಮಕ್ಕಳನ್ನು ನೀವು ಸುಧಾರಿಸಿದ್ದನ್ನು ಅವರಿಗೆ ತಿಳಿಸಿದಾಗ ಕೇಳಿ ಕರಕೊಂಡು ಬನ್ನಿ ಅಂದರು. ಹೀಗಾಗಿ ಬಂದೆವು."

"ಅದಕ್ಕೇನಂತೆ? ರವಿವಾರ ನಿಮ್ಮ ಜತೆ ಹುಬ್ಬಳ್ಳಿಗೆ ಬರುತ್ತೇನೆ. ನೋಡಿ ನಿರ್ಧರಿಸೋಣ" ಎಂದಾಗ ಅರ್ಧ ಕೆಲಸವಾದ ನೆಮ್ಮದಿಯ ಉಸಿರು ಬಿಟ್ಟರು.

ರವಿವಾರದಂದು ಅವರ ಮನೆಗೆ ಹೋದೆ.

ಚಹಾಪಾನದ ನಂತರ ದೇವಿದಾಸರ ಪೂರ್ವಾಪರ ಇತಿಹಾಸ ಕೇಳಿದೆ. ಕೇವಲ ನಲವತ್ತು ವಯಸ್ಸಿನಲ್ಲಿ ಮರಣದ ಬಾಗಿಲ ಬಳಿ ತಮ್ಮ ಸರದಿಗಾಗಿ ಕಾಯುತ್ತ ನಿಂತಿದ್ದಾರೆ. ಕ್ಷಕಿರಣ, ಸ್ಕ್ಯಾನಿಂಗಗಳಲ್ಲದೇ ಮೂರು ಸಲ ಮಾಡಿದ ಶಸ್ತ್ರಚಿಕಿತ್ಸೆಯ ವಿವರಗಳನ್ನು ನೋಡಿದೆ. ಗೋಲಿಯಷ್ಟಿದ್ದ ಗಡ್ಡೆ ಮೊದಲಬಾರಿ ತೆಗೆದರೆ ಎರಡನೇ ಬಾರಿಗೆ ಟೆನ್ನಿಸ್ ಬಾಲ್‌ನಷ್ಟು. ಮತ್ತಾರು ತಿಂಗಳಲ್ಲಿ ಮೂರನೇ ಬಾರಿ ಗಡ್ಡೆ ಇಡೀ ತಲೆಯನ್ನೇ ಆವರಿಸಿದ್ದರಿಂದ ಗಡ್ಡೆಗೆ ಕೈಹಚ್ಚದೇ ತಲೆಯ ಎಡಭಾಗದ ಎಲವುಗಳನ್ನೆಲ್ಲಾ ತೆಗೆದಿದ್ದರು. ಹುಟ್ಟಿದ ಮಗುವಿನ ನೆತ್ತಿಯಂತೆ ಕೇವಲ ತಲೆಗೂದಲಿನಿಂದ ಆವೃತವಾದ ಚರ್ಮದ ಹೊದಿಕೆ ಬಿಟ್ಟರೆ ಬೇರೇನೂ ಇರಲಿಲ್ಲ. ಬಹುಶಃ ಮಿದುಳಿನ ಒತ್ತಡ ಕಡಿಮೆ ಮಾಡಲು ಈ ಶಸ್ತ್ರಕ್ರಿಯೆ ಮಾಡಿ ಕೈತೊಳೆದುಕೊಂಡಂತೆ ಕಾಣುತ್ತದೆ.

ಬೆಂಗಳೂರಿನ ಪ್ರಸಿದ್ಧ ಚಿಕಿತ್ಸಾಲಯವೊಂದರಲ್ಲಿ ಚಿಕಿತ್ಸೆಯಾಗಿದ್ದನ್ನು ಗಮನಿಸಿದೆ. ದಿನಕ್ಕೆ ೧೬ ರಿಂದ ೧೮ ಟಗ್ರೆಟಾಲ್ ಗುಳಿಗೆ ನುಂಗುತ್ತಿರುವುದನ್ನು ಅರಿತೆ. ಇಷ್ಟು ಮಾತ್ರೆ ನುಂಗಿದರೂ ಆಗಾಗ ಮೈ ಕೈ ಸೆಟೆತಗಳಿಂದ ಪೀಡಿತರಾಗುತ್ತಿದ್ದರು. ತಲೆ ತುಂಬ ಗಡ್ಡೆ ಇದೆಯೆಂದರೆ ಬ್ರೇನು ಎಲ್ಲಿ ಹೋಯಿತು ? ಆದರೂ ಜೀವಂತ ವ್ಯಕ್ತಿ ನನ್ನೆದುರೇ ಕುಳಿತದ್ದು ಅಚ್ಚರಿಗೊಳಿಸಿತು.

"ಟೆಗ್ರೆಟಾಲ್ ಕಡಿಮೆ ಮಾಡುತ್ತಾ ಹೋಗಿ. ನಾನು ನಿಮಗೆ ಔಷಧಿ ಕಳಿಸುತ್ತೇನೆ" ಎಂದೆ. ಅಂದಿನಿಂದ ಅವರಿಗೆ ಫೈಟೊಲಕ್ಕಾ, ಮಿಮುಲಸ, ಜೆನ್ಸನ್ ಇತ್ಯಾದಿಗಳನ್ನು ಶುರು ಮಾಡಿ ಆಗಾಗ ಔಷಧಿ ಬದಲಿಸುತ್ತ ಬಂದೆ. ಕೆಲವು ತಿಂಗಳಲ್ಲಿ ಟೆಗ್ರೆಟಾಲ್ ಮಾತ್ರೆಗಳು ೧೬ ರಿಂದ ೩ಕ್ಕೆ ಬಂದಾಗ ಅವರಲ್ಲಿ ಎಲ್ಲಿಲ್ಲದ ಉತ್ಸಾಹ ಕಂಡು ಬಂತು. ಕಾರಿನಲ್ಲಿ ಕೆಲಸಕ್ಕೆ ಹೋಗಿ ಬರುವ ಪರಿಪಾಠ ಮುಂದುವರಿದಂತೆ ತಿಂಗಳಿಗೊಮ್ಮೆ ಅವರನ್ನು ನೋಡುವಂತಾಯಿತು.

೧೯೯೬ರ ಫೆಬ್ರುವರಿ ಏರಂದು ಅಸುನೀಗಿದ ದೇವಿದಾಸ ನನ್ನ ಮಿತ್ರನ ತಮ್ಮನೆಂದು ತಿಳಿದದ್ದು ಕೊನೆ ಕೊನೆಗೆ.

** ** **

ಸಂಗಯ್ಯ ಟ್ರಕ್ಕಿನಲ್ಲಿ ಆ ಊರು ಈ ಊರು ಸುತ್ತಿ ಧಾರವಾಡದ ಮುರಘಾಮಠದ ಬದಿಗಿರುವ ಮುರುಕು ಮನೆಯಲ್ಲಿ ನರಳುತ್ತ ಬಿದ್ದ ತಾಯಿಯ ಕೈಗೆ ಹತ್ತೊ ಇಪ್ಪತ್ತೊ ರೂಪಾಯಿ ಹಾಕಿ ಹೊರಟುಹೋಗುತ್ತಿದ್ದ. ತಾಯಿ ದಿನೇ ದಿನೇ ಸೊರಗುವುದನ್ನು ಕಂಡು ಕಳವಳಪಟ್ಟು ಜಿಲ್ಲಾ ಆಸ್ಪತ್ರೆಗೆ ಕರೆದುಕೊಂಡು ಬಂದಾಗ ಅವಳಿಗೆ ಅನ್ನನಾಳದ ಕ್ಯಾನ್ಸರ್ ಆಗಿದೆಯೆಂದು ತಿಳಿಯಿತು. ಎಲ್ಲರೂ ಅವಳನ್ನು ದವಾಖಾನೆಗೆ ಸೇರಿಸು ಎನ್ನುವವರೇ ಹೊರತು, ಅಲ್ಲಿ ಅವನು ವೆಚ್ಚವನ್ನು ನಿಭಾಯಿಸಬಲ್ಲನೇ ? ಅನ್ನುವುದನ್ನು ಯಾರೂ ಯೋಚಿಸಲಿಲ್ಲ. ಆಹಾರ ನುಂಗುವುದು ದುಷ್ಕರವಾದಂತೆ ಅರವತ್ತರ ಗಡಿದಾಟಿದ ಮುದುಕಿಗೆ ನಡೆಯುವದೂ ಕಠಿಣವಾಗತೊಡಗಿತು. ಮನೆಯಲ್ಲಿಟ್ಟರೆ ಮಾಡುವವರಾರು ? ತನಗೇ ನಿಲ್ಲಲು ಸ್ಥಳವಿಲ್ಲದ ಸಂಗಯ್ಯ ಬಾಳಸಂಗಾತಿಯ ಬಗ್ಗೆ ಯೋಚಿಸಿರಲೂ ಇಲ್ಲ. ಒಮ್ಮೆಲೆ ತಾಯಿಯ ವ್ಯಾಧಿ ಪರಿಸ್ಥಿತಿಯನ್ನು ಇನ್ನಷ್ಟು ದುರ್ಭರಗೊಳಿಸಿತು.

ಉಪಾಯಗಾಣದೆ ಆತ ಡಾ. ಕೆ.ಆರ್.ಪಾಟೀಲರ ಪಾದಕ್ಕೆರಗಿದ. ಜಿಲ್ಲಾ ಆಸ್ಪತ್ರೆಯಲ್ಲಿ ಕಿವಿ, ಮೂಗು, ಗಂಟಲಿನ ಶಸ್ತ್ರಚಿಕಿತ್ಸಕರಾದ ಅವರು ಇವನ ಬವಣೆ

ಕಂಡು, ಇವನ ತಾಯಿಯನ್ನು ತಮ್ಮ ವಾರ್ಡಿನಲ್ಲಿಟ್ಟುಕೊಂಡು ದಿನಂಪ್ರತಿ ಗ್ಲುಕೋಜ್ ಹಾಗೂ ಶಕ್ತಿವರ್ಧಕ ಇಂಜೆಕ್ಷನ್ ಕೊಡುತ್ತಾ ಬಂದರು. ಕೆಲದಿನಗಳ ಬಳಿಕ ನರಗಳಲ್ಲಿ ಬಿಡುವ, ಗ್ಲುಕೋಜ್ ಬಾಟ್ಲಿಯ ದ್ರವವೇ ಆಹಾರವಾಯಿತು.

ಅದೊಂದು ದಿನ ಅವರ ಮನೆಯಲ್ಲಿ ಕುಳಿತಾಗ ಈ ವಿಷಯ ತಿಳಿಸಿದರು. ನಾನೂ ಮಮ್ಮಲ ಮರುಗಿದೆ. "ಹೋಮಿಯೊಪಥಿ ಕೊಟ್ಟು ನೋಡೋಣ" ಎಂದೆ.

ಹೊಮಿಯೋಪಥಿ ಅಂದರೆ ಸಾಕು ಸಿಡಿದೇಳುವ ಡಾಕ್ಟರರು ಅಂದೇಕೋ ಹಾಗೆ ಮಾಡಲಿಲ್ಲ. ನಾನು ಹೋಮಿಯೋಪಥಿ ಶುರು ಮಾಡುವದು ಹಾಗೂ ಅವರು ಗ್ಲುಕೋಜ್ ಕೊಟ್ಟು ತಮ್ಮ ವಾರ್ಡಿನಲ್ಲೇ ಉಳಿಸಿಕೊಳ್ಳಬೇಕೆಂಬ ನಿರ್ಧಾರಕ್ಕೆ ಬಂದೆವು.

ಬ್ಯಾಪ್ಟಿಸಿಯಾ ಕೊಟ್ಟೆ, ಆರ್ಸೆನಿಕಂ ಒಂದು ಡೋಸ್ ಕೊಟ್ಟೆ. ವಾರ ಉರುಳಿತು. ಗಂಟಲಲ್ಲಿ ನೀರು ಇಳಿದುದನ್ನು ಕಂಡು ಆಚ್ಚರಿ ವ್ಯಕ್ತಪಡಿಸಿದರು ಡಾ. ಪಾಟೀಲರು. ಎರಡೇ ವಾರದಲ್ಲಿ ಬಾಳೆಹಣ್ಣು ನುಂಗಿ ನೀರು ಕುಡಿದಳು ಸಂಗಯ್ಯನ ತಾಯಿ. ತಿಂಗಳೊಪ್ಪತ್ತಿನಲ್ಲಿ ತನ್ನ ಮನೆಯಲ್ಲಿ ಬೇಯಿಸಿದ ಬಿಸಿರೊಟ್ಟಿ ತಿಂದು ಬದುಕುತ್ತಿರಲು ಆಗಾಗ ನನ್ನ ದವಾಖಾನೆಗೆ ಬಂದು ಔಷಧಿ ಪಡೆದು ಅಷ್ಟಿಷ್ಟು ಹಣ ಕೊಡಲು ಬಂದಾಗ ನಾನು ಸೌಮ್ಯವಾಗಿಯೇ ನಿರಾಕರಿಸುತ್ತ ಬಂದೆ.

ಒಂದು ದಿನ ಕಾರಿನಲ್ಲಿ ಸಂಗಯ್ಯ ಹಾಗೂ ಹೊಸ ಸೀರೆ ಉಟ್ಟ ಅವನ ತಾಯಿಯನ್ನು ಕಂಡಾಗ ನಾನು ಪುಳಕಿತನಾದೆ.

"ಸ್ವಾಮಿ, ಈ ಹಣ್ಣುಕಾಯಿ ಒಪ್ಪಿಸಿಕೊಳ್ಳಿ, ನಾಳೆಯೇ ಮಗಳ ಮನೆಗೆ ಹೋಗಿ ಬರಲು ಅಪ್ಪಣೆ ಕೊಡಬೇಕು" ಎಂದಾಗ ನನ್ನ ಹೃದಯ ತುಂಬಿಬಂತು. ಹಣ್ಣಿನಡಿಯಲ್ಲಿದ್ದ ಪಾಕೀಟು ನೋಡಿದೆ. ನೂರರ ಐದು ನೋಟುಗಳು.

"ಇದೇನಮ್ಮ ಇಷ್ಟೊಂದು ಹಣ"

"ಸ್ವಾಮೇರೇ, ಬಡವಿ ನಾನು. ಮಗ ಈಗ ಟ್ರಕ್ಕು ಬಿಟ್ಟು ಯಾರದೋ ಸಾಹುಕಾರರ ಕಾರು ಓಡಿಸತಾ ಇದ್ದಾನೆ. ಅವನಿತ್ತ ಹಣ ಕೂಡಿಸಿ ತಂದಿದ್ದೇನೆ. ತಾವು ಇಲ್ಲಾ ಅನ್ನಬಾರದು. ನನ್ನ ಮನಸ್ಸು ಮುರೀಬೇಡಿ. ನಿಮಗೆ ಎಷ್ಟು ಕೊಟ್ಟರೂ ಕಡಿಮೆಯೇ."

"ಆಯಿತು. ಒಂದುನೂರು ನಾನಿಟ್ಟುಕೊಳ್ಳುತ್ತೇನೆ ಉಳಿದ ನಾನೂರಲ್ಲಿ ನಿನ್ನ ಮಗಳಿಗೊಂದು ಸೀರೆ, ಮೊಮ್ಮಕ್ಕಳಿಗಷ್ಟು ಸಿಹಿ ತಿಂಡಿ ನನ್ನ ಪರವಾಗಿ ಒಯ್ಯಲೇ ಬೇಕು. ಇಲ್ಲದಿದ್ದರೆ ನನ್ನ ಮನಸ್ಸು ಮುರೀತದೆ."

ವಯಸ್ಸಾದರೂ ನನ್ನ ಕಾಲುಮುಟ್ಟಿ ನಮಸ್ಕಾರ ಮಾಡಿ ನಾನೂರನ್ನು ತೆಗೆದುಕೊಂಡು ಮಗಳಕಡೆ ಮಾಸೂರಿಗೆ ಹೋದ ಮುದುಕಿ ಏನಾದಳೊ ತಿಳಿಯದು. ಸಂಗಯ್ಯ ಸಿಕ್ಕಿಲ್ಲ. ಎಲ್ಲಿದ್ದರೂ ಸುಖವಾಗಿರಲಿ ಎಂಬುದೇ ನನ್ನ ಆಶಯ. ●

ಕರಾಟೆ ಜಪಾನೀ ಶಬ್ದವೆನ್ನುವುದು ನಿಮಗೆಲ್ಲರಿಗೂ ಗೊತ್ತು. ಆದರೆ ಮೇಲಿಂದ ಮೇಲೆ ಆಕ್ರಮಣ ಎಸಗುತ್ತಿದ್ದ ಜಪಾನೀ ಸೈನಿಕರನ್ನು ಹೊಡೆದೋಡಿಸಲೆಂದೇ ಓಕಿನಾವಾ ದ್ವೀಪದ ಜನರಿಂದ ಈ ಕಲೆ ಸೃಷ್ಟಿಸಲ್ಪಟ್ಟಿತೆಂಬುದು ಗೊತ್ತೆ? ಆಗಿನ್ನೂ ಓಕಿನಾವಾ ಜಪಾನಿಗೆ ಸೇರಿರಲಿಲ್ಲ. 'ಕರಾಟೆ' ಎಂದರೆ ಬರಿಗೈ ಎಂದರ್ಥ

# ನಕಲುದಾರ ಕಾಸಿಂ

ಕಾಸಿಂ ಅಲಿ ಅರವತ್ತು ವರ್ಷದ ಮುದುಕ. ಒಂದು ಕಣ್ಣು ಇಲ್ಲ. ಕನ್ನಡಕದ ಫ್ರೇಮಿನ ಎರಡೂ ಕಡೆಗಳಲ್ಲಿ ದಾರ ಕಟ್ಟಿಕೊಂಡಿದ್ದ. ಶರೀರದ ಮೇಲೆ ಒಂದು ಕೊಳಕು ಲುಂಗಿ, ಒಂದು ಕೊಳಕು ಬನಿಯನ್. ಕೈಲೊಂದು ಕೋಲು. ಅದಕ್ಕೆ ಅಂಟಿಕೊಂಡಂತೆ ಒಂದು ಮಸಿ ಕುಡಿಕೆ. ದೂರದಿಂದಲೇ ಅವನು ಕಾಸಿಂ ಅಲಿ ಎಂದು ತಿಳಿದುಬಿಡುತ್ತಿತ್ತು.

ಮನೆಯ ಅಂಗಳದಲ್ಲಿ ಕುಳಿತಿದ್ದೆ. ಲಾಠಿಯ ಸದ್ದು ಮಾಡುತ್ತಾ ಕಾಸಿಂ ಅಲಿ ಬಂದು ನಿಂತು, "ಸಾಹೇಬ್, ಸಲಾಂ," ಎಂದ.

ಕತ್ತೆತ್ತಿ ನೋಡಿ, "ಏನು?" ಎಂದೆ.

ಅವನು ನಕ್ಕ-"ಗೊತ್ತಾಗಲಿಲ್ಲವೇ ಹುಜೂರ್, ನಾನು ನಕಲುದಾರ ಕಾಸಿಂ" ಎಂದ.

"ಓಹೋ," ಎಂದಷ್ಟು ಉದ್ಗರಿಸಿ ಪುನಃ ನನ್ನ ಕೆಲಸದಲ್ಲಿ ಮಗ್ನನಾದೆ.

ಪಟ್ಟಣದಿಂದ ಬಹಳ ದಿನಗಳ ಮೇಲೆ ಹಳ್ಳಿಗೆ ಬಂದು ಅಲ್ಲಿಯ ಕೆಲವು ಪತ್ರಗಳನ್ನು ಪರಿಶೀಲಿಸುತ್ತಿದ್ದ ನನಗೆ ವ್ಯರ್ಥ ಮಾತುಗಳಿಗೆ ಸಮಯವಿರಲಿಲ್ಲ.

ಕಾಸಿಂ ಸ್ವಲ್ಪ ಹೊತ್ತು ಸುಮ್ಮನಿದ್ದ. "ಏನಾದರೂ ಕೆಲಸ ಕೊಡಿ ಬಾಬೂ.ಏನೂ ನಕಲು ಮಾಡುವುದು ಇಲ್ಲವೇ ಬಾಬೂಜೀ?"

ಕತ್ತು ಅಲ್ಲಾಡಿಸುತ್ತಾ, "ಏನೂ ಇಲ್ಲ. ಇನ್ನೂ ನಕಲು ಮಾಡುತ್ತೀಯೇನು? ಕಣ್ಣು ಕಾಣಿಸುತ್ತದೆಯೆ?" ಎಂದೆ.

ಅಸ್ಥಿಪಂಜರದಂತಿದ್ದ ಕಾಸಿಂ ತನ್ನ ಬೊಚ್ಚು ಬಾಯಲ್ಲೇ ನಗುತ್ತಾ, "ಕೆಲಸ ಕೊಟ್ಟು ನೋಡಿ ಬಾಬೂಜೀ, ಕೈ ಬರಹ ಹಸ್ತಾಕ್ಷರ ಏನಾದ್ರೂ ಕೊಡಿ, ಥೇಟ್ ಅದೇ ತರಹ, ನಕಲು ಮಾಡಿಕೊಡುತ್ತೇನೆ," ಅಂದ.

ನನಗೆ ಗೊತ್ತು. ಕಾಸಿಂ ಅದೇ ತರಹ ನಕಲು ಮಾಡುತ್ತಿದ್ದ. ಚಿಕ್ಕ ವಯಸ್ಸಿನಲ್ಲಿ ಅವನ ಬಗ್ಗೆ ಅನೇಕ ಕತೆಗಳನ್ನು ಕೇಳಿದ್ದೆ.

ಚಿಕ್ಕವನಾಗಿದ್ದಾಗ ಅವನು ನಕಲು ಮಾಡುತ್ತಿರಲಿಲ್ಲ, ಕವಿತೆಗಳನ್ನು ಬರೆಯುತ್ತಿದ್ದ. ಕವಿ ಸಮ್ಮೇಳನವಾದರೆ ಇವನನ್ನು ನೋಡಿ ಬಾಕಿ ಕವಿಗಳು ಹಿಂದೆ ಸರಿಯುತ್ತಿದ್ದರು. ದೂರದ ಹಳ್ಳಿಗಳಿಂದ ಬಂದವರು ಕೂಡ ಹಬ್ಬದ ಗೀತೆ, ಆರತಿ ಹಾಡು, ಮದುವೆ ಹಾಡು, ಹೀಗೆ ಇವನ ಹತ್ತಿರ ಹಾಡುಗಳನ್ನು ಬರೆಸಿಕೊಂಡು ಹೋಗುತ್ತಿದ್ದರು. ಹಿಂದೂ ದೇವತೆಗಳ ಹಾಡನ್ನೂ ಆತ ಬರೆದುಕೊಡುತ್ತಿದ್ದ. ಹಿಂದೂ ದೇವತೆಗಳ ಸ್ತೋತ್ರಗಳನ್ನೂ ರಚಿಸಿ ಕೊಡುತ್ತಿದ್ದ. ಆದರೆ ಈ ಹಿಂದುತ್ವವೇ ಅವನಿಗೆ ಮುಳುವಾಯಿತು.

(ಬಂಗಾಳಿ ಕತೆಯ ಆಧಾರ)
**ಕೆ. ಶಾಂತಾಮಣಿ**

ಮುಸಲ್ಮಾನರು, "ಕಾಸಿಂ ಕಾಫಿರ್ ಆಗಿದ್ದಾನೆ. ರಾಧಾ ಕೃಷ್ಣ, ಲಕ್ಷ್ಮಿ ನಾರಾಯಣ, ಸಾವಿತ್ರಿ-ಸತ್ಯವಾನರ ಕಥೆಗಳನ್ನೂ ಬರೆಯತೊಡಗಿದ್ದಾನೆ," ಎಂದು ಮೂದಲಿಸಿದರು. ಆದರೆ ಕಾಸಿಂ ಲೈಲಾ-ಮಜನೂರ ಪ್ರೇಮ ಗೀತೆ, ಪೀರ್ ಫಕೀರರ ಗೀತೆಗಳನ್ನೂ ರಚಿಸುತ್ತಿದ್ದ ಎಂಬುದರ ಅರಿವು ಅವರಿಗೆ ಆಗುತ್ತಿರಲಿಲ್ಲ. ಆದರೆ ಯುವಕ ಕಾಸಿಂ ಇದನ್ನೆಲ್ಲ ಲಕ್ಷ್ಯಿಸದೆ ತಾರುಣ್ಯದ ಪ್ರಭಾವದಿಂದಾಗಿ ಕಣ್ಣ ಮುಂದೆ ರಂಗುರಂಗಿನ ಸ್ವಪ್ನಗಳನ್ನು ಕಾಣುತ್ತಾ ಉತ್ಸಾಹದ ಅಮಲಿನಲ್ಲಿದ್ದ.

ಒಂದು ಮಾವಿನ ಮರದ ಕೆಳಗೆ ಕುಳಿತು ಕಾಸಿಂ ಹಾಡಲು ಪ್ರಾರಂಭಿಸುತ್ತಿದ್ದ. ಕೈಯಲ್ಲಿ ಏಕನಾದ ಹಿಡಿದು ಹಾಡುವ ಅವನ ಹಾಡಿನ ಮಾಧು



ಯರ್ಕ್ಕೆ ಮನಸೋತ. ಮುಸ್ಲಿಂ ಹೆಣ್ಣುಮಕ್ಕಳು ಆ ಹಾಡನ್ನು ಕೇಳಲು ಬಂದು ಸೇರುತ್ತಿದ್ದರು. ಅವರಲ್ಲಿ ಒಬ್ಬಾಕೆ ಮೌಲ್ವಿ ಸಾಹೇಬರ ಮಗಳು ಹಮೀದಾ ಬಾನು. ಹಮೀದಾ ಬಾನು ಬಾರದ ದಿನ ಕಾಸಿಂನಿಗೆ ಹಾಡಲು ಉತ್ಸಾಹವೇ ಇರುತ್ತಿರಲಿಲ್ಲ.

ಒಂದು ದಿನ ಧೈರ್ಯ ಮಾಡಿ ಮೌಲ್ವಿ ಸಾಹೇಬರಿಗೆ, "ನಾನು ಹಮೀದಾಳನ್ನು ಮದುವೆ ಆಗುತ್ತೇನೆ," ಎಂದು ಹೇಳಿಯೇಬಿಟ್ಟ. ಮೌಲ್ವಿ ಸಾಹೇಬರೇನೋ ಒಪ್ಪಿದರು. ಆದರೆ ಒಂದು ಕರಾರು ಹಾಕಿದರು. ಆ ಪ್ರಕಾರ ಮದುವೆಗೆ ಮೊದಲು ಆತ ಮುಂದೆಂದೂ ಹಿಂದೂ ದೇವತೆಗಳ ಗೀತೆಗಳನ್ನು ರಚಿಸಬಾರದೆಂದು ಪ್ರಮಾಣ ಮಾಡಬೇಕಾಗಿತ್ತು. ಕಾಸಿಂ ಹಮೀದಾಳ ಬಗ್ಗೆ ಹುಚ್ಚನಾಗಿದ್ದ. ಷರತ್ತಿಗೆ ಒಪ್ಪಿದ.

ಆದರೆ ಜೀವನ ಮಾಡುವುದು ಪ್ರಮಾಣ ಮಾಡುವಷ್ಟು ಸುಲಭವಾಗಿರಲಿಲ್ಲ. ಅವನ ಹಾಡಿಗೆ ಮುಸಲ್ಮಾನರೇನೂ ಒಂದು ಪೈಸೆ ಕೊಡುತ್ತಿರಲಿಲ್ಲ. ನಾಲ್ಕು ಹಿಂದೂ ಹಳ್ಳಿಗಳಿದ್ದವು. ಅವರಿಂದೇನೋ ಹಣ ಸಿಗುತ್ತಿತ್ತು. ಆದರೆ ಈಗ ಹಾಡುವಹಾಗಿರಲಿಲ್ಲ.

ಅಸಹಾಯನಾದ ಕಾಸಿಂ ಹಾಡುವುದನ್ನು ಬಿಟ್ಟು ನಕಲು ಮಾಡುವ ಕೆಲಸ ಹಿಡಿದ. ಇಷ್ಟಕ್ಕೂ ಆತ ಹಿಂದೂ ಹಾಡುಗಳನ್ನು ಹಾಡಬಾರದೆಂದು ಪ್ರಮಾಣ ಮಾಡಿದ್ದನೇ ಹೊರತು ನಕಲು ಮಾಡಬಾರದೆಂದು ಪ್ರಮಾಣ ಮಾಡಿರಲಿಲ್ಲವಲ್ಲ.

ಕಾಸಿಂ ಜಮೀನಿನ ಕಾಗದ-ಪತ್ರ, ನಕಾಶೆ, ಗ್ರಂಥ ಇತ್ಯಾದಿಗಳ ನಕಲು ಮಾಡಲು ಆರಂಭಿಸಿದ. ನಕಲು ಮಾಡುತ್ತಾ ಮಾಡುತ್ತಾ ನಕಲುದಾರ ಕಾಸಿಂ ಎಂದೇ ಹೆಸರುವಾಸಿಯಾದ.

ಕಾಸಿಂ ಹಳ್ಳಿ-ಹಳ್ಳಿ ಅಲೆದು ಯಾರ ಮನೆಯಲ್ಲಿ ಹಳೆಯ ಗ್ರಂಥಗಳಿವೆ ಎನ್ನುವುದನ್ನು ಹುಡುಕತೊಡಗಿದ. ಆದರೆ ಈ ಹಳೆಯ ಗ್ರಂಥಗಳು ಪವಿತ್ರ ಗ್ರಂಥಗಳಾಗಿರುತ್ತಿದ್ದವು-ದೇವರ ಮನೆಯಲ್ಲಿಟ್ಟು ಪೂಜಿಸುವಂಥದ್ದು. ಆದರಲ್ಲಿ ಏನು ಬರೆದಿದೆ ಎಂದು ಕೂಡ ಜನರಿಗೆ ಗೊತ್ತಿರದಿದ್ದರೂ ಅದು ಪೂರ್ವಜರದ್ದು ಎಂದು ಗೌರವದಿಂದ ಬೆಳ್ಳಿ ಪೀಠದ ಮೇಲಿಟ್ಟು ಪೂಜಿಸುತ್ತಿದ್ದರು. ಅರಿಷಿನ ಕುಂಕುಮ, ಗಂಧ-ಧೂಪ ದೀಪದಿಂದ ಅದು ಅಲಂಕೃತವಾಗಿರುತ್ತಿತ್ತು. ಅಂಥ ಗ್ರಂಥವನ್ನು ಅವರು ಮುಸಲ್ಮಾನನ ಕೈಗೆ ಕೊಡುತ್ತಾರೆಯೆ?.

ಬಹಳ ಕೇಳಿಕೊಂಡರೆ ಕೆಲವರು ಕರುಣೆ ತೋರಿಸಿ ಒಂದೆರಡು ಮಾರು ದೂರದಲ್ಲಿಡುತ್ತಿದ್ದರು. ಕಾಸಿಂ ಅಷ್ಟು ದೂರದಿಂದಲೇ ನೋಡಿ ಅದರ ನಕಲು ತೆಗೆಯುತ್ತಿದ್ದ. ಹೀಗೆ ನಕಲು ಮಾಡುತ್ತಾ ಅವನಿಗೆ ನಕಲು ಮಾಡುವ ಹುಚ್ಚೇ ಹಿಡಿಯಿತು. ಅವರು ಹಣ ಕೊಡಲಿ, ಬಿಡಲಿ ಆ ಗ್ರಂಥ ನಕಲು ಮಾಡಬೇಕು ಎನ್ನುವುದು ಅವನ ಗೀಳಾಯಿತು. ಸಿಕ್ಕ ಎಲ್ಲ ಗ್ರಂಥಗಳನ್ನೂ ನಕಲು ಮಾಡದ ಹೊರತು ಅವನಿಗೆ ಸಮಾಧಾನ ಇರುತ್ತಿರಲಿಲ್ಲ. ಇದೇ ರೀತಿಯಲ್ಲಿ ಎಷ್ಟೋ ವರ್ಷ ಕಳೆದುಹೋದವು.

ಹಿಂದುಗಳ ಮಡಿವಂತಿಕೆಯನ್ನು ನೋಡಿ ಕಾಸಿಂನಿಗೆ ನಗು ಬರುತ್ತಿತ್ತು. ಬಹಳ ಕೇಳಿಕೊಂಡ ನಂತರ ಎಷ್ಟೋ ದೂರದಲ್ಲಿ ಪುಸ್ತಕವನ್ನು ಇಡುತ್ತಿದ್ದರು ಅಥವಾ ಓದಿ ಹೇಳುತ್ತಿದ್ದರು. ಒಮ್ಮೊಮ್ಮೆ ಕಾಸಿಂನಿಗೆ, "ಈ ಗ್ರಂಥ ನನ್ನಿಂದಲೇ ಬರೆಯಲಾಗಿದೆ. ಆದರೆ ನೀವು ಅದನ್ನು ಮುಟ್ಟಲು ಬಿಡುವುದಿಲ್ಲವಲ್ಲಾ," ಎಂದು ಕೂಗಿ ಹೇಳಬೇಕೆನಿಸುತ್ತಿತ್ತು. ಚಿಕ್ಕ ವಯಸ್ಸಿನಲ್ಲಿ ಬರೆದ ಹಲವಾರು ಗ್ರಂಥಗಳು ಅನೇಕ ಜನರ ಕೈ ದಾಟಿ ಅರಷಿನ-ಕುಂಕುಮದಿಂದ ತುಂಬಿಹೋಗಿ ದೇವರ ಸಮಾನವಾಗಿ ಬಿಟ್ಟಿರುತ್ತಿದ್ದವು. ಆದರೆ ಅದನ್ನು ಬರೆದ ಕಾಸಿಂ ಅದನ್ನು ಮುಟ್ಟಿದ ಮಾತ್ರಕ್ಕೆ ಅಪವಿತ್ರವಾಗಿಬಿಡುತ್ತಿದ್ದವೆ?

"ಹಮೀದಾ, ನಾನು ಜನ್ಮಕೊಟ್ಟ ಸಂತಾನವೇ ನನಗಿಲ್ಲ ಅನ್ನುವಂತಾಗಿದೆ. ಅದನ್ನು ಸಾಕಿದವರಿಗೆ ಅದರ ಮೇಲೆ ಹಕ್ಕು. ಅವರೇ ಅದರ ಮಾಲೀಕರು. ಇದೆಂಥ ವಿಚಿತ್ರ ಪ್ರಪಂಚ!" ಎನ್ನುತ್ತಿದ್ದ.

"ನೀನು ಪುನಃ ಹಿಂದೂ ಗೀತೆಗಳನ್ನು ರಚಿಸು. ಅವರು ನಿನ್ನ ಹಾಡುಗಳನ್ನು ಗೌರವಿಸುತ್ತಾರೆ," ಎಂದು ಹಮೀದಾ ಹೇಳುತ್ತಿದ್ದಳು.

"ತೋಬಾ, ತೋಬಾ, ನಾನು ಪ್ರಮಾಣ ಮಾಡಿದ್ದೇನಲ್ಲಾ."

"ನನಗಾಗಿ ತಾನೇ ನೀನು ಪ್ರಮಾಣ ಮಾಡಿದ್ದು? ಆದರೆ ನಾನೇ ಹೇಳುತ್ತಿದ್ದೇನಲ್ಲಾ," ಅನ್ನುತ್ತಿಳು ಹಮೀದಾ. ಆದರೆ ಕಾಸಿಂ ಒಪ್ಪಲಿಲ್ಲ.

**********

ಕಾಸಿಂ ಅಲಿಯ ಈ ಕತೆ ಎಲ್ಲರಿಗೂ ತಿಳಿದ ವಿಷಯವೇ ಆಗಿತ್ತು. ಅವನ ಮೃತ್ಯುವಿನ ನಂತರ ಮನೆಯಲ್ಲಿ ರಾಶಿ ರಾಶಿ ಹಳೆಯ ಗ್ರಂಥಗಳ ನಕಲು ಇರುವವೆಂದು ಜನ ಹೇಳುತ್ತಿದ್ದರು. ಆದರೆ ನನಗೇನೂ ಆ ಗ್ರಂಥಗಳ ಅವಶ್ಯಕತೆ ಇರಲಿಲ್ಲವಾದ್ದರಿಂದ ನಾನು ಅವನನ್ನು ನನ್ನ ಎದುರಿಗೆ ಬಂದಾಗ ಬೇಗ ಗುರುತಿಸಲಾಗಲಿಲ್ಲ.

ಆ ದಿನ ನನ್ನಿಂದ ಏನೂ ಲಾಭ ಪಡೆಯದೆ ನಿರಾಶನಾಗಿ ಹಿಂತಿರುಗಿದ್ದ. ನಾನೂ ಕೂಡ ಅದನ್ನು ಮರೆತೇಬಿಟ್ಟಿದ್ದೆ.

ಅನೇಕ ವರ್ಷಗಳ ನಂತರ ಏಶಿಯಾಟಿಕ್ ಸೊಸೈಟಿಯ ಕಚೇರಿಯಲ್ಲಿ ಒಬ್ಬ ಖ್ಯಾತ ಅಧ್ಯಾಪಕರ ಸಹಾಯಕನ ರೂಪದಲ್ಲಿ ಪ್ರಾಚೀನ ಗ್ರಂಥಗಳ ಸಂಶೋಧನೆಯ ಕೆಲಸವನ್ನು ನನಗೆ ವಹಿಸ

ಲಾಯಿತು. ಆ ದಿನ ಮೊದಲು ನೆನಪಿಗೆ ಬಂದವನೆಂದರೆ ಕಾಸಿಂ ಅಲಿ.

ತಕ್ಷಣವೇ ಟ್ರೈನ್ ಹಿಡಿದು ಹಳ್ಳಿಗೆ ಹೊರಟೆ. ಹಳ್ಳಿಯವರಿಗೆಲ್ಲ ಆಶ್ಚರ್ಯ. "ಇದೇನು ಸಾಹೇಬರೆ, ನೀವಿಲ್ಲಿ ಯಾವ ಕೆಲಸದ ಮೇಲೆ ಬಂದಿರಿ?" ಎಂದು ಆಶ್ಚರ್ಯದಿಂದ ಕೇಳಿದರು. ನಾನು ಕೆಲಸದ ಮೇಲೆ ಹೋಗಿದ್ದರೂ ಅದನ್ನು ತೋರ್ಪಡಿಸದೆ, "ನಿಮ್ಮನ್ನೆಲ್ಲ ನೋಡಲೆಂದು ಬಂದೆ," ಎಂದೆ.

ಕಾಸಿಂನ ಹಳ್ಳಿ ನಮ್ಮ ಹಳ್ಳಿ ಪಕ್ಕದಲ್ಲೇ ಇತ್ತು. ಅವನ ಮನೆಯೂ ಗೊತ್ತಿತ್ತು. ಸೀದಾ ಅವನ ಮನೆಗೆ ಹೋದೆ. ಗುಡಿಸಲ ಮುಂದೆ ಒಬ್ಬ ಮುದುಕಿ ಕುಳಿತಿದ್ದಳು.

"ಕಾಸಿಂ ಅಲಿ ಮನೆ ಇದೇ ಅಲ್ಲವೇ?" ನಾನು ಕೇಳಿದೆ.

ಮುದುಕಿ ದುಃಖತಪ್ತಳಾಗಿ ಹೇಳಿದಳು: "ಬಾಬೂಜೀ, ಇಂದು ಅವನು ಮಸೀದಿಯಲ್ಲಿ ಶಾಂತವಾಗಿ ಮಲಗಿದ್ದಾನೆ".

"ಅಂದರೆ ಕಾಸಿಂ ಅಲಿ ಸತ್ತು ಹೋದನೆ?" ಆಶ್ಚರ್ಯದಿಂದ ಕೇಳಿದೆ.

"ಹೂಂ" ಆಕೆ ಪುನಃ ಹೇಳಿದಳು, "ಸಾಯಲಿಲ್ಲ ನೀವುಗಳೇ ಸಾಯಿಸಿದಿರಿ." ಮುದುಕಿ ಎಲ್ಲ ಕತೆ ಹೇಳಿದಳು. ವೃದ್ಧಾಪ್ಯದಲ್ಲಿ ಕಾಸಿಂನಿಗೆ ನಕಲಿನ ಗೀಳು ಬಲವಾಯಿತು. ಅವನು ಹೇಳುತ್ತಿದ್ದ, "ನೋಡುತ್ತಿರು ಹಮೀದಾ, ಈ ನಕಲುಗಳನ್ನು ನನ್ನ ಮೃತ್ಯುವಿನ ನಂತರ ಜನ ರಾಶಿ ರಾಶಿ ಹಣ ಕೊಟ್ಟು ತೆಗೆದುಕೊಂಡು ಹೋಗುತ್ತಾರೆ. ಇವು ಗ್ರಂಥಗಳಲ್ಲ ಹಮೀದಾ, ಇವು ವಜ್ರಗಳು!" ಅವನು ಸಂಗ್ರಹಿಸಿದ ನಕಲುಗಳು ಕೋಣೆಯ ತುಂಬಾ ಇದ್ದವು.

"ಅವುಗಳು ಎಲ್ಲಿವೆ?" ನಾನು ತವಕದಿಂದ ಕೇಳಿದೆ.

ಸ್ವಲ್ಪ ಹೊತ್ತು ಸುಮ್ಮನಿದ್ದ ಮುದುಕಿ, "ಗೋವಿಂದಪುರದ ದತ್ತರ ಮನೆಯಲ್ಲಿ ಐನೂರು ವರ್ಷದ ಹಿಂದಿನ ಗ್ರಂಥ ಇದೆ ಎಂದು ಹೇಳುತ್ತಿದ್ದರು. ಕಾಸಿಂನಿಗೆ ಅದನ್ನು ನಕಲು ಮಾಡುವ ಗೀಳು ಹಿಡಿಯಿತು. ಆದರೆ ಆ ಮನೆಯವರು ಅದನ್ನು ಗೃಹದೇವತೆ ಎಂದೇ ತಿಳಿದಿದ್ದರು.

"ಕಾಸಿಂನು ಅವರಲ್ಲಿಗೆ ಹೋಗಿ ಕೇಳಿದಾಗ ಅವರಿಗೆ ಕೋಪವೇ ಬಂತು. ಕಾಸಿಂನ ಅಪಮಾನ ಮಾಡಿ ಓಡಿಸಿಬಿಟ್ಟರು. ಆದರೆ ಕಾಸಿಂ' ಅದನ್ನು ನಕಲು ಮಾಡಿಯೇ ಬಿಡಬೇಕು ಅದರಲ್ಲೇನು ಮಾಣಿಕ್ಯವಿದೆಯೆ?" ಎಂದು ಹಟ ಹಿಡಿದ. ಕೊನೆಗೊಂದು ದಿನ ಅದನ್ನು ಕದ್ದು ನಕಲು ಮಾಡಿ ವಾಪಸ್ ಅಲ್ಲೇ ಇಟ್ಟು ಬರುತ್ತೇನೆಂದು ತೀರ್ಮಾನಿಸಿದ.

'ತಾರುಣ್ಯದಲ್ಲಿ ಈ ಸಾಹಸ ಮಾಡಬಹುದು. ವೃದ್ಧಾಪ್ಯದಲ್ಲಿ ಇದು ಅಪಾಯಕರ ಎಂದು ಎಷ್ಟೇ ಹೇಳಿದರೂ ಅವನು ಕೇಳಲಿಲ್ಲ.

"ಒಬ್ಬ ಮುಸಲ್ಮಾನ ಹುಡುಗನ ಸಹಾಯದಿಂದ ಆ ಕೆಲಸ ಮಾಡಿಬಿಟ್ಟ. ನಕಲು ಮಾಡಿ ಅದನ್ನು ಹಿಂದಿರುಗಿಸಿ ಇಟ್ಟು ಬರುವಾಗ ಸಿಕ್ಕಿಬಿದ್ದ.

"ಆ ಮನೆಯವರು ಹಿಗ್ಗಾ-ಮುಗ್ಗಾ ಹೊಡೆದರು. ಕಾಸಿಂ ಹಾಸಿಗೆ ಹಿಡಿದವನು ಮೇಲೇಳಲಿಲ್ಲ, ಏಳು ದಿನಗಳ ನಂತರ ಪ್ರಪಂಚವನ್ನೇ ಬಿಟ್ಟ".

ಸ್ವಲ್ಪ ಹೊತ್ತು ಸುಮ್ಮನಿದ್ದ ಅವಳು, "ನನಗೆ ಹಿಡಿಸಲಾರದಷ್ಟು ಕೋಪ ಬಂತು ಬಾಬೂಜಿ, ಅವನನ್ನು ಮೃತ್ಯುವಿನ ಬಾಯಿಗೆ ನೂಕಿದ ಆ ಗ್ರಂಥಗಳನ್ನೆಲ್ಲ ಸುಟ್ಟು ಹಾಕಿ ಬಿಟ್ಟೆ. ಯಾರಿಗೆ ತಾನೇ ಅದರ ಮೇಲೆ ಕೋಪ ಬರುವುದಿಲ್ಲ ಬಾಬೂಜಿ?" ಅವಳು ನಿಟ್ಟುಸಿರಿಟ್ಟಳು.

ನಿಜ ಹೇಳಬೇಕೆಂದರೆ ಆ ಅಮೂಲ್ಯ ಭಂಡಾರವನ್ನು ಸುಟ್ಟು ಬೂದಿ ಮಾಡಿದ ಹಮೀದಾಳ ಮೇಲೆ ಕೋಪ ಉಕ್ಕಿತು. ಆದರೆ ಏನೂ ಮಾಡಲಾರದವನಾಗಿದ್ದೆ.

ಹತಾಶನಾದ ನಾನು ಹಿಂತಿರುಗುತ್ತಿದ್ದೆ. ದಾರಿಯಲ್ಲಿ ಸಿಕ್ಕ ಒಬ್ಬನನ್ನು, "ಕಾಸಿಂ ಸಮಾಧಿ ಎಲ್ಲಿದೆ?" ಎಂದು ಕೇಳಿದೆ.

"ಅಗೊ ಅಲ್ಲಿ, ಆ ಹೊಂಡದ ಆಚೆ" ಎಂದು ಕೈ ಮಾಡಿ ತೋರಿಸಿದ. ಆ ಸಮಾಧಿಯ ಮೇಲೆ ಹಸಿರು ಹುಲ್ಲು ಬೆಳೆದಿತ್ತು. ಆದರೆ ಇನ್ನು ಕೆಲವೇ ವರ್ಷಗಳಲ್ಲಿ ಅಲ್ಲಿ ಹೊಲಗಳಾಗಿ ಇದು ಹೊಲಗಳ ನಡುವಿನ ಬದುವಿನಂತೆ ಕಾಣುವುದು.

# ಮಾವನ ಮನೆ



ಒಮ್ಮೆ ನಾನು ಅಡಿಗೆಯನ್ನು ಮಾಡುತ್ತಿದ್ದೆ. ಆಗ ಕೆಲವು ವಿದ್ಯಾರ್ಥಿಗಳು ಬಂದು, "ಅತ್ತಿಗೆ, ಅತ್ತಿಗೆ, ಅಲ್ಲಿ ದಾದಾರವರು ನಾನಾ ಹಾಗೂ ನಿಮ್ಮ ಶ್ರಾದ್ಧವನ್ನು ಮಾಡುತ್ತಿದ್ದಾರೆ," ಎಂದು ಹೇಳಿದರು.

ನಾನು ಒಮ್ಮೆಲೆ ಎದ್ದು, ಆದದಾದರೂ ಏನೆಂದು ಗುಡಿಗೆ ಹೋಗಿ ನೋಡುತ್ತೇನೆ; ಮಾವನವರು ಅಟ್ಟದ ಮೇಲಿಂದ ಒಂದೊಂದೇ ಪಾತ್ರೆಗಳನ್ನು ಎತ್ತಿ, ಕೆಳಗೆ ಒಗೆಯುತ್ತಿದ್ದರು. ಅವು ನೇರವಾಗಿ ರಾಮನ ಸಭಾ ಮಂಟಪದಲ್ಲಿ ಬಂದು ಬೀಳುತ್ತಿದ್ದವು. ಪ್ರತಿ ಒಗೆತಕ್ಕೂ ಅವರ ಮಂತ್ರಘೋಷವಾಗುತ್ತಿತ್ತು,

"ನನ್ನ ಸೊಸೆ ಸತ್ತಳು! ಇಂದು ಅವಳ ೧೨ನೆಯ ದಿನದ ತಿಥಿ. ನನ್ನ ಮಗ ಸತ್ತ! ಅವನಿಗೆ ತಿಲಾಂಜಲಿ ಕೊಡುತ್ತೇನೆ," ಎಂದು.

ಆದದ್ದೇನೆಂದರೆ ಪಾತ್ರೆಗಳಿಗೆ ಕಲೆ ಬಿದ್ದಿದ್ದವು. ಪಾತ್ರೆಗಳೆಲ್ಲ ತಾಮ್ರದವು. ಬಾವಿಯ ನೀರು, ಕಟ್ಟಿಗೆಯ ಗೊಬ್ಬರ, ಮೇಲಾಗಿ ಮಳೆ

★ ಸವಿತಾ ನಾಯಕ

ಮರಾಠಿ ಸಾಹಿತ್ಯದಲ್ಲಿಯ ೧೦೦ ಉತ್ತಮ ಗ್ರಂಥಗಳಲ್ಲಿ ಸೇರ್ಪಡೆಯಾದದ್ದು ಲಕ್ಷ್ಮೀಬಾಯಿ ಟಿಳಕರ "ಸ್ಮೃತಿಚಿತ್ರ" ಎಂಬ ಆತ್ಮವೃತ್ತಾಂತ. ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ಬರೆದ ಈ ಗ್ರಂಥವು ಆಳವಾದ ಜೀವನಾನುಭವ, ಕಾವ್ಯಾತ್ಮಕವಾದ ಭಾಷೆ, ನವಿರಾದ ಹಾಸ್ಯ ಹಾಗೂ ಸ್ವಂತಿಕೆಯಿಂದ ಕೂಡಿ ಅನನ್ಯವಾಗಿದೆ. ಪತಿ ನಾರಾಯಣರಾವ್ ಟಿಳಕರ ಬಗ್ಗೆ ಇದನ್ನು ಬರೆದರೂ ಲಕ್ಷ್ಮೀಬಾಯಿಯವರ ಸ್ವತಂತ್ರ ವ್ಯಕ್ತಿತ್ವ ಇಲ್ಲಿ ಅಚ್ಚಳಿಯದೆ ಮೂಡಿದೆ. 'ಸ್ಮೃತಿಚಿತ್ರ'ದಲ್ಲಿಯ ಒಂದು ಪ್ರಕರಣವನ್ನು ಇಲ್ಲಿ ಭಾಷಾಂತರಿಸಿ ಕೊಡಲಾಗಿದೆ. ಅತ್ತೆಯಿಲ್ಲದ ಲಕ್ಷ್ಮೀಬಾಯಿಗೆ ಮಾವನೇ ಅತ್ತೆಯಂತೆ ಕಿರುಕುಳ ಕೊಡುವ ಪ್ರಸಂಗ ಇಲ್ಲಿ ನಿರೂಪಿತವಾಗಿದೆ.



ಗಾಲದ ದಿನಗಳು. ಹಾಗಾಗಿ ಅವುಗಳನ್ನು ಹೊಳೆಯುವಂತೆ ನಾನೆಷ್ಟೇ ತಿಕ್ಕಿದರೂ ಕಲೆಗಳು ಹೋಗಿರಲಿಲ್ಲ.

ನಾನು ಅಟ್ಟವೇರಿ ಹೋದೆ. ಆ ಕೋಣೆಯ ಒಂದು ಮೂಲೆಯಲ್ಲಿ ಮಾವನವರು ತಮ್ಮ ದೇವರನ್ನು ಮಂಡಿಸಿದ್ದರು. ನಾನು ಎಲ್ಲ ಪಾತ್ರೆಗಳನ್ನೂ ಒಟ್ಟುಗೂಡಿಸಿದೆ. ಮಾವನವರು ನನ್ನ ಹಿಂದೆಯೇ ಬಂದರು.

"ಈ ಪಾತ್ರೆಗಳನ್ನು ನೀನು ತಿಕ್ಕಿದ್ದೀಯಾ ?"

"ಹೌದು !"

"ಆಹಾ ! ನನ್ನಾಣೆಯಾಗಿ ಹೇಳು."

"ನಿಮ್ಮಾಣೆ, ನಾನೇ ತಿಕ್ಕಿದ್ದೇನೆ."

"ನಾನು ಸತ್ತರೆ ನಿನಗೇನು ? ಮಂಗಳಸೂತ್ರವನ್ನು ಕೈಯಲ್ಲಿ ಹಿಡಿದು ಆಣೆ ಹಾಕು !"

ನಾನು ಮಂಗಳಸೂತ್ರವನ್ನು ಕೈಯಲ್ಲಿ ಹಿಡಿದು ಆಣೆ ಹಾಕಿದೆ. ಇಷ್ಟಕ್ಕೂ ಮಾಡಿಯೇ ಇಲ್ಲದಿದ್ದರೆ ಹೆದರಿಕೆ ಎಂಥಹುದು ?

"ನಿಲ್ಲು. ನಾನು ಹೆಂಗಸರ ಸಭೆಯನ್ನು ಕರೆಯುತ್ತೇನೆ. ಅಲ್ಲಿ ಈ ಪಾತ್ರೆಗಳನ್ನಿಟ್ಟು ಅವರ ಅಭಿಪ್ರಾಯವನ್ನು ಕೇಳುತ್ತೇನೆ. ಅವರು ನಿನ್ನ ಬಾಯಿಯಲ್ಲಿ ಚೆನ್ನಾಗಿ ಸೆಗಣೆಯನ್ನು ಹಾಕಬಹುದು."

ಆದರೆ ಆ ಹೆಂಗಸರು ನನ್ನ ಬಾಯಿಯಲ್ಲಿ ಸೆಗಣೆ ಹಾಕಲಿಕ್ಕಿಲ್ಲವೆಂದು ನನಗೆ ಖಾತ್ರಿಯಿತ್ತು.

"ನನ್ನ ಕಾಲನ್ನು ಮುಟ್ಟಿ ಆಣೆ ಹಾಕು. ನೋಡು, ಕಾಲಿಗೆ ಕೈಯನ್ನು ಹಚ್ಚಿದರೆ ಸುಟ್ಟು ಭಸ್ಮವಾಗುವಿ !"

ನಾನು ಅವರ ಕಾಲಮೇಲೆ ಕೈಯನ್ನು ಇಡುತ್ತಿದ್ದಂತೆ ಅವರು ಹಿಂದೆ ಹಿಂದೆ ಸರಿಯತೊಡಗಿದರು.

"ನೋಡು, ವಿನಾಕಾರಣ ಸುಟ್ಟುಹೋಗುವಿ !"

"ಅಡ್ಡಿಯಿಲ್ಲ. ನಿಮ್ಮ ಕಾಲಬಳಿ ಮರಣ ಬಂದರೆ ಏನೂ ಕೆಟ್ಟಿಲ್ಲ."

ಕೊನೆಗೆ ನಾನು ಅಡ್ಡಬಿದ್ದು, ಅವರ ಕಾಲನ್ನು ಗಟ್ಟಿಯಾಗಿ ಹಿಡಿದೆ. ನಾನೇನೂ ಸುಟ್ಟು ಸಾಯಲಿಲ್ಲ. ನನಗೆ ಬಹಳ ನಿರಾಶೆಯಾಯಿತು. ಸತ್ತರೆ ಒಳ್ಳೆಯದಾಗುತ್ತಿತ್ತೆಂದು ನನಗೂ ಅನಿಸುತ್ತಿತ್ತು. ಆದರೆ ಮಾವನವರ ತಪಸ್ಸಿನ ಸಾಮರ್ಥ್ಯ ಹೆಚ್ಚಿರಲಿಕ್ಕಿಲ್ಲವೆನ್ನಿ ಅಥವಾ ನಾನು ಆ ಪಾತ್ರೆಗಳನ್ನು ತೊಳೆದದ್ದು ಸತ್ಯವೆನ್ನಿ, ಅಂತೂ ಅಂದು ನಾನು ಸುಟ್ಟು ಹೋಗಲಿಲ್ಲ.

ಒಮ್ಮೆ ಮಾವನವರು ಟಿಳಕರನ್ನು ಹತ್ತಿರ ಕರೆದು ಹೇಳಿದರು, "ನಾನಾ, ನೀನು ಎರಡನೆಯ ಹೆಂಡತಿಯನ್ನು ಮಾಡಿಕೋ! ನಿನಗಾಗಿ ನಾನು ಕೊಂಕಣದಿಂದ ಹತ್ತು ಹುಡುಗಿಯರನ್ನು ತಂದುಕೊಡ್ತೇನೆ."

ಅದಕ್ಕುತ್ತರವಾಗಿ ಟಿಳಕರು ಹೇಳಿದರು, "ನನಗೆ ಒಬ್ಬಳ ಹೊಟ್ಟೆಯನ್ನು ತುಂಬಿಸುವುದೇ ಕಷ್ಟವಾಗಿರುವಾಗ ಇನ್ನೊಬ್ಬಳೇಕೆ ?"

"ನೀನು ಅವಳನ್ನು ತವರಿನಲ್ಲಿ ಬಿಟ್ಟು ಬಿಡು."

"ಹಾಗೆಂದಿಗೂ ಮಾಡಲಾರೆ. ನನ್ನ ಸಂಸಾರ ಇಲ್ಲದಂತಾದರೂ ಇಂತಹ ಕೆಲಸ ನನ್ನ ಕೈಯಿಂದ ಎಂದೆಂದಿಗೂ ನಡೆಯಲಾರದು."

ಟಿಳಕರಿಗೆ ನನ್ನ ಮೇಲೆ ಎಷ್ಟು ಪ್ರೇಮವಿತ್ತೆಂಬುದು ಇದರಿಂದ ಹಾಗೂ ಈ ಕೆಳಗಿನ ಘಟನೆಯಿಂದ ಚೆನ್ನಾಗಿ ನಿದರ್ಶನಕ್ಕೆ ಬಂದಿತು.

ಅದೆಂದರೆ ಎದುರಿನ ಬಾವಿಯ ನೀರು

ಬತ್ತಿತ್ತು. ಹಾಗಾಗಿ ಅಡವಿಯ ಬಾವಿಯ ನೀರಿಗಾಗಿ ಹೋಗುವ ಪ್ರಸಂಗ ಒದಗಿತು. ಅಲ್ಲಿ ಹಗಲಿನಲ್ಲಿ ಅತಿಶಯವಾಗಿ ಜನರ ದಟ್ಟಣೆಯಿರುತ್ತಿತ್ತು. ಹೀಗಾಗಿ ಪ್ರತಿದಿನ ರಾತ್ರಿಯಲ್ಲಿ ಅಲ್ಲಿಂದ ನೀರನ್ನು ತರಬೇಕೆಂದು ಮಾವನವರು ಹೇಳಿದರು. ಕತ್ತಲೆಯಲ್ಲಿ ನನಗೆ ಹೆದರಿಕೆಯಾಗುತ್ತಿತ್ತು. ಆದರೆ ಅವರಿಗೆ ಆ ಬಗ್ಗೆ ಏನೂ ಅನಿಸುತ್ತಿರಲಿಲ್ಲ. ಅವರು ನನಗೆ ಹೇಳಿದರು: "ನಿನ್ನನ್ನು ಯಾವುದಾದರೂ ದೆವ್ವ ತಿನ್ನಲು ಬಂದರೆ", ನನ್ನ ಮಾವನವರು ಗುಡಿಯಲ್ಲಿ ಕುಳಿತಿದ್ದಾರೆ. ಮೊದಲು ಅವರನ್ನು ತಿಂದು ಬಾ, ಆನಂತರ ನನ್ನನ್ನು ತಿನ್ನು ಎಂದು ಹೇಳು. ಆದರೆ "ಹೆದರಬೇಡ, ನಾನು ನೀರನ್ನು ತರುವೆ," ಎಂದು ಟಿಳಕರು ನನಗೆ ಹೇಳಿದರು.

ಹಾಗೇ ರಾತ್ರಿಯಾದ ಕೂಡಲೇ ಅವರು ಮುಂದಿನ ಬಾಗಿಲಿನಿಂದ ತಿರುಗಾಡಲು ಹೊರಡುತ್ತಿದ್ದರು ಮತ್ತು ನಾನು ಹಿಂದಿನ ಬಾಗಿಲಿನಿಂದ ನೀರಿಗಾಗಿ ಹೊರಡುತ್ತಿದ್ದೆ. ಅನಂತರ ನಾನು ಮನೆಯ ಹತ್ತಿರದಲ್ಲಿ ನಿಲ್ಲುತ್ತಿದ್ದೆ. ಅವರು ಬಾವಿಯಿಂದ ತಂದ ನೀರನ್ನು ಮನೆಯಲ್ಲಿ ಸಂಗ್ರಹಿಸಿಡುತ್ತಿದ್ದೆ. ತನ್ನ ಸೊಸೆ ಎಷ್ಟು ವಿಶ್ವಾಸದಿಂದ ನೀರನ್ನು ತುಂಬುತ್ತಿದ್ದಾಳೆಂದು ಮಾವನವರಿಗೆ ಅನಿಸುತ್ತಿತ್ತು.

ಒಮ್ಮೆ ನಾನು ಮಾವನವರ ಪೀಕದಾಣಿಯನ್ನು ತೊಳೆಯುತ್ತಿದ್ದೆ. ನನಗೆ ಅಸಹ್ಯ ಉಂಟಾಗಿ ಉಗಿದೆ. ಮಾವನವರ ತೀಕ್ಷ್ಣದೃಷ್ಟಿಗೆ ಅದು ಕಾಣಿಸಿತು. ಸಂಜೆ ಸವಿಯಾಗಿ ಮಾತನಾಡುತ್ತಾ, "ಲಕ್ಷ್ಮೀ, ನೀನು ನೀರು ಕುಡಿಯುವ ಪಾತ್ರೆ ನನಗೆ ಬಹಳ ಸೇರುತ್ತದೆ. ನನ್ನ ತಲೆದಿಂಬಿನ ಹತ್ತಿರ ಅದನ್ನೇ ಇಡು!" ಎಂದು ಹೇಳಿದರು.

ಪ್ರತಿನಿತ್ಯ ಅವರ ತಲೆದಿಂಬಿನ ಹತ್ತಿರ ನನ್ನ ಪಾತ್ರೆಯನ್ನು ಇಡತೊಡಗಿದೆ.

ಒಂದು ದಿನ ಪಾತ್ರೆ ತೊಳೆಯುವವಳು ಹೇಳಿದಳು: "ಬಾಯಿಯವರೆ, ದಾದಾರವರು ನಿಮ್ಮ ಪಾತ್ರೆಯನ್ನು ಪೀಕದಾಣಿಯಂತೆ ಉಪಯೋಗಿಸುತ್ತಾರೆ!"

ನನಗೆ ಅದು ನಿಜವೆಂದು ತೋರಲಿಲ್ಲ. ಮಾರನೆಯ ದಿನ ಆ ಕೆಲಸದವಳು ಅದನ್ನು ಪ್ರತ್ಯಕ್ಷವಾಗಿ ತೋರಿಸಿದಳು. ಆಗ ನನ್ನ ತಲೆಗೆ ಒಂದು ಉಪಾಯ ಹೊಳೆಯಿತು. ಆನಂತರ ನಾನು ಅದೇ ಪಾತ್ರೆಯನ್ನು ಅವರ ದೇವರ ಪೂಜೆಗಾಗಿ ಇಡತೊಡಗಿದೆ. ಅವರು ಅದನ್ನು ದೂರವಿಡಲು ಪ್ರಾರಂಭಿಸಿದರು.

ಮಾವನವರು ನನ್ನನ್ನು ಪೀಡಿಸುತ್ತಿದ್ದರು. ಆದರೆ ಎರಡು ವಿಷಯಗಳಿಗಾಗಿ ನನಗೆ ಅವರ ಗುಣಗಾನ ಮಾಡಬೇಕೆಂದೆನಿಸುತ್ತದೆ. ಅದೆಂದರೆ ಅವರೆಂದೂ ನನಗೆ ಕೆಟ್ಟ ಶಬ್ದವನ್ನು ಬಳಸಲಿಲ್ಲ ಅಥವಾ ಮೈಗೆ ಕೈಯನ್ನು ಹಚ್ಚಲಿಲ್ಲ.

ಹಾಗೆ ಅವರು ಒಮ್ಮೊಮ್ಮೆ ಇತರರ ಎದುರಿಗೆ ನನ್ನನ್ನು ಹೊಗಳುತ್ತಲೂ ಇದ್ದರು. ಒಮ್ಮೆ ಅವರು ಯಾರನ್ನೋ ಊಟಕ್ಕೆ ಕರೆದಿದ್ದರು. ಎಲ್ಲ ಅಡುಗೆಯನ್ನು ಅವರೇ ಮಾಡಿದ್ದರು. ನನಗೂ ಅವರ ಬಗ್ಗೆ ಆಶ್ಚರ್ಯವೆನಿಸಿತು. ಕೆಲ ಸಮಯದ ನಂತರ ಅತಿಥಿಗಳು ಬಂದರು. ನಾನು ಅವರಿಬ್ಬರಿಗೆ ಬಡಿಸಿದೆ. ಮಾವನವರು ಅತಿಥಿಗಳನ್ನು ಕೇಳಿದರು. "ಅಡಿಗೆ ಹೇಗಾಗಿದೆ?"

"ವ್ಹಾ! ಅತ್ಯುತ್ತಮ! ಅಡುಗೆಯ ಬಗ್ಗೆ ಏನು ಕೇಳ್ತೀರಿ!"

"ಹಾಗಲ್ಲ, ನನ್ನ ಸೊಸೆ ಮಾಡಿದ್ದಾಳೆ. ಅದಕ್ಕಾಗಿ ಮುದ್ದಾಂ ಕೇಳ್ತೇನೆ!"

ಉತ್ತಮ ಊಟವೆಂದು ಅತಿಥಿಗಳು

ಸಂತೋಷಪಟ್ಟರು. ನಾನು ಮಾತ್ರ ಮಾವನ ವರ ವರ್ತನೆಯಿಂದ ಆಶ್ಚರ್ಯಚಕಿತಳಾದೆ.

ಆದರೆ ಇಂತಹದು ಎಂದಾದರೊಮ್ಮೆ ಘಟಿಸುತ್ತಿತ್ತು. ಅವರ ಹತ್ತಿರ ಏನಾದರೂ ಕೇಳಿದರೆ ಅವರಿಗೆ ಬಹಳ ಕೋಪ ಬರುತ್ತಿತ್ತು. ಎಣ್ಣೆ, ಶೀಗೆಕಾಯಿ ನನಗೆಂದೂ ಲಭ್ಯವಿರಲಿಲ್ಲ. ನಾನು ಅವುಗಳನ್ನು ಕೇಳಿದಕೂಡಲೇ ಅವರು, "ಮೈಮುರಿದು ದುಡಿದು ಎಣ್ಣೆ, ಶೀಗೆಕಾಯಿಗಳನ್ನು ತೆಗೆದುಕೊಂಡು ಬಾ" ಅನ್ನುತ್ತಿದ್ದರು. ಹೀಗಾಗಿ ನಾನು ಮಣ್ಣಿನಿಂದ ತಲೆಯನ್ನು ತೊಳೆಯುತ್ತಿದ್ದೆ. ಅದರಲ್ಲಿಯೂ ನಾನು ಸ್ನಾನಮಾಡಲು ಕುಳಿತರಂತೂ ನನ್ನೆದುರಿನ ಬಿಸಿನೀರನ್ನು ಎತ್ತಿಕೊಂಡು ಸ್ವತಃ ಸ್ನಾನ ಮಾಡಲು ತೊಡಗುತ್ತಿದ್ದರು! ಉಳಿದ ಸ್ನಾನವನ್ನು ನಾನು ತಣ್ಣೀರಿನಿಂದ ಮಾಡುತ್ತಿದ್ದೆ. ಎಣ್ಣೆ, ಶೀಗೇಕಾಯಿಯ ನಿತ್ಯದ ವಾದದಲ್ಲಿ ಅವರು ಒಂದು ವಿಷಯ ಹೇಳುತ್ತಿದ್ದರು:

"ಒಮ್ಮೆ ಕಟ್ಟಿಗೆ ಮುಗಿದಿತ್ತು. ನನ್ನ ಹೆಂಡತಿ ಗರ್ಭಿಣಿಯಾಗಿದ್ದಳು. ಅವಳಿಗೆ ಕಟ್ಟಿಗೆಯನ್ನು ಒಡೆಯಲು ಹೇಳಿದೆ. ನಿನ್ನದೇನು ಮಹಾ? ನನ್ನ ಹೆಂಡತಿ ಎಂದೂ ಎದುರುತ್ತರ ಕೊಡುತ್ತಿರಲಿಲ್ಲ. ಮನೆಯ ಸಾಮಾನು ಮುಗಿದ ಕೂಡಲೇ ಉಳಿದ ಸಾಮಾನುಗಳನ್ನು ಮಾತಿಲ್ಲದೆ ನನ್ನೆದುರಿಗೆ ತಂದು ಇಡುತ್ತಿದ್ದಳು. ಅದರ ಮೇಲಿಂದ ಸಾಮಾನು ಮುಗಿದಿದೆ ಎಂದು ನಾನು ತಿಳಿದುಕೊಳ್ಳುತ್ತಿದ್ದೆ. ಆದರೆ ಇಂದಿನ ಹುಡುಗಿಯರು ಬಹಳ ಉದ್ಧಟ. ಹಿರಿಯರೆದುರಿಗೆ ಹೇಗೆ ವರ್ತಿಸಬೇಕೆಂದೇ ನೀವು ಹುಡುಗಿಯರಿಗೆ ಬರುವುದಿಲ್ಲ."

ಪ್ರತಿ ತಿಂಗಳೂ ಮುಟ್ಟಾದಾಗ ನಾನು ಮೂರು ದಿನ ಉಪವಾಸ ಮಾಡಬೇಕಾಗುತ್ತಿತ್ತು. ಮಾವನವರು ತಾವಷ್ಟೇ ಅಡಿಗೆ ಉಣ್ಣುತ್ತಿದ್ದರು. ಇದು ಟಿಳಕರ ಗಮನಕ್ಕೆ ಬಂದಾಗ ಅವರು ಅನ್ನವನ್ನು ಮಾಡಿ ನನಗೆ ಬಡಿಸುತ್ತಿದ್ದರು. ಅದರಂತೆ ಆ ಸಮಯದಲ್ಲಿ ನಾನು ಕತ್ತಲೆಯಲ್ಲಿ ಕೂಡಬೇಕಾಗುತ್ತಿತ್ತು. ಅಂಧಕಾರದ ಬಗ್ಗೆ ನನಗೆ ಭಯವಿತ್ತು. ಆದರೆ ನಾನಾಗ ಏನೂ ಮಾಡುವಹಾಗಿರಲಿಲ್ಲ. ಒಂದು ಮಾತಂತೂ ನಿಜ. ಇದರಿಂದಾಗಿ ನಿಧಾನವಾಗಿ ಕತ್ತಲೆಗೆ ಭಯಪಡುವುದು ಕಡಿಮೆಯಾಯಿತು.

ಈಗೀಗ ಕವಿಗಳೆಂದು ಟಿಳಕರ ಹೆಸರು ಮುಂದೆ ಬರತೊಡಗಿತು. ಮುಂಬಯಿ-ಪುಣೆಯ ವರೆಗೆ ಅವರ ಹೆಸರು ಕೇಳಬರತೊಡಗಿತು. ಮನೆಯಲ್ಲಿ ನನಗೆ ತೊಂದರೆಯಾಗುತ್ತಿದ್ದರೂ ಅವರ ದೃಷ್ಟಿಯಲ್ಲಿ ಈಗ ಒಳ್ಳೆಯ ದಿವಸಗಳು ಬಂದಿದ್ದವು. ಇದೇ ಸಮಯದಲ್ಲಿ ಮುಂಬಯಿಯಲ್ಲಿ ವ್ಯಾಖ್ಯಾನ ಕೊಡುವುದಕ್ಕಾಗಿ ಅವರಿಗೆ ಆಮಂತ್ರಣವೊಂದು ಬಂದಿತು.- ಎಂಟು ದಿನಗಳಲ್ಲಿ ಬರುತ್ತೇನೆಂದು ಮುಂಬಯಿಗೆ ಹೋದ ಟಿಳಕರು ಅಲ್ಲಿಯೇ ಉಳಿದುಬಿಟ್ಟರು. ಎಂಟು ದಿನಗಳಾದವು, ಹತ್ತು ದಿನಗಳಾದವು, ಹದಿನೈದಾಯಿತು, ಆದರೂ ಅವರ ಸುಳಿವಿಲ್ಲ, ಪತ್ರವಿಲ್ಲ.

ನನಗೆ ಬಹಳ ಚಿಂತೆಯಾಗತೊಡಗಿತು. ಆದರೂ ನನ್ನ ಕಣ್ಣುಗಳಿಂದ ನೀರು ಬರುತ್ತಿರಲಿಲ್ಲ. ಅದರಲ್ಲೂ ಅವರು ಮಾವನವರಿಗೆ ಸರದಾರಗೃಹದ ವಿಳಾಸವನ್ನು ಕೊಟ್ಟಿದ್ದರು.

ಮಾವನವರು ಹೇಳುತ್ತಿದ್ದರು:

"ಇಂದು ನಿನ್ನ ಗಂಡನ ಪತ್ರ ಬಂದಿದೆ."

"ಹೂಂ."

"ಅವನಿಗೆ ಸರದಾರಗೃಹದಲ್ಲಿ ಧೋತರವನ್ನು ತೊಳೆಯುವ ಕೆಲಸ ಸಿಕ್ಕಿದೆ."

"ಹಾಗಾದರೆ ನಾನು ಅವುಗಳನ್ನು ಒಣ ಹಾಕುವೆ."

"ಅವನು ಅಲ್ಲಿ ಎಲೆ ಬಡಿಸುತ್ತಾನೆ."

"ನಾನು ಎಂಜಲು ತೆಗೆಯುವೆ, ನೀವು ನನ್ನನ್ನು ಮುಂಬಯಿಗೆ ಕರೆದುಕೊಂಡು ಹೋಗಿ ಮುಟ್ಟಿಸಿರಿ."

"ನನ್ನ ಹತ್ತಿರ ಹಣವಿಲ್ಲ. ಬೇಕಿದ್ದರೆ ನೀನು ಹೇಗೆ ಬೇಕಾದರೂ ಹೋಗು. ಆದರೆ ಮುಂಬಯಿ ಎಂದರೆ ಮುರಬಾಡ ಅಲ್ಲ. ಅಲ್ಲಿ ನೀನು ಒಂದು ಮರಳಿನ ಕಣದಂತೆ. ನಿನ್ನ ಪತ್ತೆಯೂ ಹತ್ತಲಿಕ್ಕಿಲ್ಲ."

ಒಂದು ದಿನ ನಾನು ಬಹಳ ಅತ್ತೆ. ಮಾವನವರಿಗೆ ನನ್ನ ಬಗ್ಗೆ ಕರುಣೆ ಮೂಡಿತು. ಅವರು ನನ್ನ ಬಳಿ ಬೆನ್ನು ತಿರುಗಿಸಿ ಕುಳಿತು ಹೇಳಿದರು:

"ಲಕ್ಷ್ಮೀ, ನನಗೇನೂ ಹೆಚ್ಚು ಹುಡುಗಿಯರಿಲ್ಲ. ಕೇವಲ ಒಬ್ಬಳಿದ್ದಾಳೆ. ಒಬ್ಬಳು ಸತ್ತಳು. ನೀನು ನನ್ನ ಎರಡನೇ ಮಗಳೇ ಆಗಿರುವೆ. ಸಖೂ ನನಗೆ ಹೇಗೋ ಹಾಗೇ ನೀನು. ಅಳಬೇಡ. ಅವನು ಹೋದರೆ ಹೋಗಲಿ. ನಾಳೆ ಹರಿತಾಳಿಕೆ ಇದೆ. ನೀನು ಇಬ್ಬರು ಮುತ್ತೈದೆಯರನ್ನು ಊಟಕ್ಕೆ ಕರೆ, ಉಂಡಿ ಮಾಡು. ನಾನು ನಿನಗೆ ಎಲ್ಲ ಸಾಮಾನುಗಳನ್ನೂ ತಂದುಕೊಡುತ್ತೇನೆ."

ಹೀಗೆ ಹೇಳಿ ಅವರು ಪೇಟೆಗೆ ಹೋಗಿ ಬೇಸನ್ನಿನ ಉಂಡಿಗೆ ಬೇಕಾಗುವ ಎಲ್ಲ ಸಾಮಾನುಗಳನ್ನೂ ತಂದುಕೊಟ್ಟರು. ನಾನು ಎಲ್ಲ ಸಿದ್ಧತೆಯನ್ನೂ ಮಾಡಿದೆ. ಉಂಡಿ ಕಟ್ಟಿದೆ ಉಂಡಿ ಸಿದ್ಧವಾದ ಕೂಡಲೇ ಮೂರು ಉಂಡಿಗಳನ್ನು ತೆಗೆದಿಟ್ಟು ಹಾಗೂ ಡಬ್ಬಿಯನ್ನು ಎತ್ತಿ ತಮ್ಮ ಪೆಟ್ಟಿಗೆಯೊಳಗಿಟ್ಟು ಬೀಗ ಹಾಕಿದರು. ಬಂದ ಹೆಂಗಸರಿಗೆ ಉಳಿದ ಮೂರು ಉಂಡಿಗಳನ್ನಷ್ಟೆ ಬಡಿಸಿದೆ.

ಅಂದು ಅತಿಥಿಯಾಗಿ ಬಂದ ಹೆಂಗಸರ ಎದುರಿಗೆ ಮಾವನವರು ನನ್ನನ್ನು ದೂರ ತೊಡಗಿದರು - "ಲಕ್ಷ್ಮಿ ಕದ್ದು ತಿನ್ನುತ್ತಾಳೆ!"

ಗಂಗಾಬಾಯಿ ಸಾಕಷ್ಟು ಸಿಡಿದೆದ್ದು ಹೇಳಿದರು: "ಏನು ಕದ್ದು ತಿನ್ನುತ್ತಾಳೆ! ನಿಮ್ಮಲ್ಲಿಯಂತೂ ಎಲ್ಲ ಸಾಮಾನುಗಳೂ ಬೀಗದಲ್ಲಿರುತ್ತವೆ. ಏನು ಕಟ್ಟಿಗೆ ತಿನ್ನುತ್ತಾಳೇನು ? ಸೀಮೆ ಎಣ್ಣೆ ಕುಡೀತಾಳೇನು ?"

ತಾವು ಉಂಡಿಗಳನ್ನು ಏಕೆ ಎತ್ತಿ ಇಟ್ಟವೆಂಬುದನ್ನು ಅವರಿಗೆ ಹೇಳಬೇಕಾಗಿತ್ತು. ಆದರೆ ಅವರು ಹೀಗೆ ಮಾತನಾಡಲು ಪ್ರಾರಂಭಿಸಿದ ಕೂಡಲೇ ಅದು ಅವರ ಮೇಲೆಯೇ ತಿರುಗಿ ಬಿತ್ತು.

ಟಿಳಕರ ಗೈರು ಹಾಜರಿಯಲ್ಲಿ ನಡೆದ ಮತ್ತೊಂದು ಘಟನೆ ನೆನಪಾಗುತ್ತದೆ.

ಒಂದು ದಿನ ಅವರು ಎಲ್ಲಿಯೋ ಹೊರಗೆ ಹೋಗಿದ್ದರು. ಹುಡುಗರು ಒಟ್ಟುಗೂಡಿದರು ಹಾಗೂ ಮಾವನವರ ಮಸಿದೌತಿಯನ್ನು ಉರುಳಿಸಿದರು. ನಾನು ಪಕ್ಕದ ಮನೆಗೆ ಕುಳಿತುಕೊಳ್ಳಲು ಹೋಗಿದ್ದೆ. ಮಕ್ಕಳು ಓಡೋಡಿ ಬಂದು ಹೇಳತೊಡಗಿದರು: "ಅತ್ತಿಗೆ, ದಾದಾರವರ ಮಸಿ ಕುಡಿಕೆ ಉರುಳಿಬಿತ್ತು." ನಾನು ಹೆದರಿ ಎದ್ದೆ. ಕೆಳಗೆ ಬಿದ್ದ ಮಸಿಯನ್ನು ನನ್ನ ಕಾಲಿನಿಂದ ಒರೆಸಿದೆ. ನೆಲದ ಮೇಲೆ ನನ್ನ ಹೆಜ್ಜೆಗಳು ಮೂಡಿದವು.

ಮಾವನವರು ಮನೆಗೆ ಬಂದು ಮಸಿ ಉರುಳಿದ್ದನ್ನು ಕಂಡಕೂಡಲೇ ಕೋಪದಿಂದ ಕೆಂಡಾಮಂಡಲವಾದರು. ಯಾವ ಮಕ್ಕಳೂ ತಾವು ಮಾಡಿದ ತಪ್ಪನ್ನು ಒಪ್ಪಿಕೊಳ್ಳಲಿಲ್ಲ. ಅನಂತರ ಅವರು ಪ್ರತಿಯೊಬ್ಬನ ಪಾದವನ್ನೂ ಆ ಮೂಡಿದ ಹೆಜ್ಜೆಯ ಮೇಲೆ ಇಟ್ಟುನೋಡಿದರು. ಗರ್ಜಿಸುತ್ತ ಅಡಿಗೆ

ಮನೆಗೆ ಬಂದರು. "ನಡೆ ಮೇಲಕ್ಕೆ", ಅಂದರು.

ಅವರ ಆಜ್ಞೆಯಂತೆ ನಾನು ಮೇಲೆ ಹೋದೆ

"ಈ ಮಸಿಯನ್ನು ಯಾರು ಚೆಲ್ಲಿದರು ?"

"ನನಗಾಗೊತ್ತಿಲ್ಲ."

"ಈ ಹೆಜ್ಜೆ ಯಾರವು ? ಅದರ ಮೇಲೆ ಹೆಜ್ಜೆಯನ್ನಿಡು, ಮಸಿಯನ್ನು ಚೆಲ್ಲಿದೆಯೋ ಇಲ್ಲವೋ ಎಂಬುದನ್ನು ಹೇಳು."

"ನಾನು ಚೆಲ್ಲಲಿಲ್ಲ."

"ನೀನೇ ಚೆಲ್ಲಿದ್ದೀಯ. ಇದು ಸರಕಾರದ ಮಸಿ, ನೀನು ಅದನ್ನು ತುಂಬಿಸಿಕೊಡಬೇಕಾಗುವುದು."

"ನಾನು ಹೇಗೆ ತುಂಬಿಸಿಕೊಡಲಿ"?

"ಮೈಮುರಿದು ದುಡಿದು."

ಈ ಮಾತು ನನಗೆ ಚೆನ್ನಾಗಿ ಪರಿಚಿತವಾದ ಕಾರಣ ಅದಕ್ಕಾಗಿ ನನಗೆ ಏನೂ ಅನಿಸಲಿಲ್ಲ. ದೇವರೂ ಅಂಥ ಪ್ರಸಂಗವನ್ನು ತಂದಿರಲಿಲ್ಲ.

ಮಾವನವರು ಎರಡು ಪತ್ರಗಳನ್ನು ಬರೆದರು. ಒಂದು ಮುಂಬಯಿಗೆ ಟಿಳಕರಿಗಾಗಿ, ಇನ್ನೊಂದನ್ನು ಜಲಾಲಪುರಕ್ಕೆ ಗೋವಿಂದರಾವ್ ಮಾಮಾರವರಿಗೆ.

ಟಿಳಕರಿಗೆ ಬರೆದುದರಲ್ಲಿ ಹೀಗಿತ್ತು: "ನಿನ್ನ ಹೆಂಡತಿ ರಾತ್ರಿ ಹೊರಗೆ ಹೋಗುತ್ತಾಳೆ ಮತ್ತು ಬೆಳಿಗ್ಗೆ ಮರಳುತ್ತಾಳೆ. ನೀನು ಬಂದು ಅವಳನ್ನು ಕರೆದುಕೊಂಡು ಹೋಗು. ಅವಳ ಯಾವ ಜವಾಬ್ದಾರಿಯನ್ನೂ ನಾನು ಹೊರುವುದಿಲ್ಲ. ಇಲ್ಲವಾದರೆ ಇಂದೇ ಅವಳಿಗೆ ತಿಲಾಂಜಲಿಯನ್ನರ್ಪಿಸು."

ಗೋವಿಂದರಾವ್ ಮಾಮಾರವರಿಗೆ ಹೀಗೆ ಬರೆದರು - "ನಿಮ್ಮ ಅಳಿಯು ಬಹಳ ಕೆಟ್ಟುಹೋಗಿದ್ದಾನೆ. ಅವನಿಗೆ ಬೇಡವಾದ ವ್ಯಸನಗಳು ಹತ್ತಿಕೊಂಡಿವೆ. ಅವನು ತನ್ನ ಹೆಂಡತಿಯನ್ನು ಬಿಟ್ಟಿದ್ದಾನೆ. ಅವನು ಅಫೀಮು, ಗಾಂಜಾ, ಚರಸ ಇವನ್ನು ಸೇದುತ್ತಾನೆ. ನಿಮಗೆ ನಿಮ್ಮ ಮಗಳ ಅಗತ್ಯವಿದ್ದರೆ ಮೂರು ದಿನಗಳ ಒಳಗೆ ಬಂದು ಅವಳನ್ನು ಕರೆದುಕೊಂಡು ಹೋಗಿರಿ. ಇಲ್ಲವಾದರೆ ನಾನು ಅವಳನ್ನು ಎಲ್ಲಿಯಾದರೂ ಬಿಟ್ಟುಬಿಡುವೆ."

ಟಿಳಕರಿಗೆ ನನ್ನ ಬಗ್ಗೆ ಸಂಪೂರ್ಣ ವಿಶ್ವಾಸವಿತ್ತು. ಹಾಗೂ ತಂದೆಯ ಸ್ವಭಾವವೂ ಅವರಿಗೆ ಚೆನ್ನಾಗಿ ಗೊತ್ತಿತ್ತು. ಹೀಗಾಗಿ ಮಾವನವರ ಪತ್ರದ ಪರಿಣಾಮ ಅವರ ಮೇಲೆ ಆಗಲಿಲ್ಲ.

ಗೋವಿಂದರಾವ್ ಮಾಮಾ ಹಾಗೂ ಅತ್ಯಾಬಾಯಿ ಮಾತ್ರ ಸಾಕಷ್ಟು ಗಾಬರಿಗೊಂಡರು. ಅತ್ಯಾಬಾಯಿ ಹೇಳುತ್ತಿದ್ದರಂತೆ: "ಅಳಿಯ ಅಫು, ಗಾಂಜಾ ಸೇದುತ್ತಾನೆ ಸರಿ. ಆದರೆ ಚರಸ ಹೇಗೆ ಸೇದುತ್ತಾನೆ ? ಅದು ಕೈಗೆ ಹೇಗೆ ಹತ್ತುವುದು ? ಅದಂತೂ ಆಕಾಶದಲ್ಲಿ ಹಾರುವುದಂತೆ !

ಅದಕ್ಕೆ ಗೋವಿಂದಮಾಮಾ, "ಚರಸ ಅಂದರೆ ಅಫೂ ಸೇದುತ್ತಾನೆ", ಎಂದು ಹೇಳಿದರಂತೆ. ಆಗಂತೂ ಅವಳು ಬಹಳ ಗಾಬರಿಗೊಂಡಳು.

ಈ ಸಮಯದಲ್ಲಿ ನಾನಾ ಬಹಳ ಅಸೌಖ್ಯರಾಗಿದ್ದರು. ಅವರು ಬದುಕುವ ಭರವಸೆಯಿರಲಿಲ್ಲ. ಅವರನ್ನು ಹಾಗೆಯೇ ಬಿಟ್ಟು ಮಗಳ ಕಡೆಗೆ ಹೋಗಬೇಕೋ ಅಥವಾ ಅವರ ಹತ್ತಿರವಿದ್ದು ಮಗಳನ್ನು ಕೈಯಿಂದ ಬಿಡಬೇಕೋ ಎನ್ನುವ ಸಂದಿಗ್ಧದಲ್ಲಿ ಅವರಿಬ್ಬರೂ ಸಿಲುಕಿದರು. ●

# "ನೀನೇ ನನಗಿಂದು ಗುರುವಾದೆ!"

ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಲವಾರು ವರ್ಷಗಳ ಕಾಲ ಸಂಸ್ಕೃತ ಪ್ರಾಧ್ಯಾಪಕರಾಗಿದ್ದು ಸಂಸ್ಕೃತ ಸಾಹಿತ್ಯದ ಆಳವಾದ ಅಧ್ಯಯನಕ್ಕೆ, ಪಾಂಡಿತ್ಯಕ್ಕೆ ಹೆಸರಾದ ಡಾ. ಕೆ. ಕೃಷ್ಣಮೂರ್ತಿಯವರ ಪ್ರತಿಭೆ, ಪಾಂಡಿತ್ಯ, ಜ್ಞಾನಪಿಪಾಸೆಗೆ ನಿದರ್ಶನವಾಗಿ ಒಂದೆರಡು ಪ್ರಸಂಗಗಳು ನೆನಪಾಗುತ್ತವೆ. ಅವುಗಳಲ್ಲೊಂದು ಡಿವಿಜಿ ಅವರೊಂದಿಗಿನ ಪ್ರಥಮ ಸಂದರ್ಶನ. ಅದನ್ನು ಅವರ ಮಾತುಗಳಲ್ಲೇ ಕೇಳಿ:

"ಕುಮಟಾ ಕಾಲೇಜಿನಲ್ಲಿ ಪ್ರಾಧ್ಯಾಪಕನಾಗಿದ್ದ ನಾನು ಒಂದು ರಜೆಯಲ್ಲಿ ನನ್ನ ಗುರುಗಳಾದ ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳನ್ನು ಕಾಣಲೆಂದು ಬೆಂಗಳೂರಿಗೆ ಹೋದಾಗ ಅವರು ಡಿವಿಜಿಯವರನ್ನು ಭೇಟಿಮಾಡಿಸಲು ನನ್ನನ್ನು ಅವರ ಮನೆಗೆ ಕರೆದೊಯ್ದರು. ಆ ವೇಳೆಗೆ ಪ್ರಕಟವಾಗಿದ್ದ ನನ್ನ ಭಾಮಹನ ಕಾವ್ಯಾಲಂಕಾರದ ಒಂದು ಪ್ರತಿಯನ್ನು ಡಿವಿಜಿಯವರಿಗೆ ಕಳುಹಿಸಿದ್ದೆ. ಮಿತ್ರದ್ವಯರ ಕುಶಲ ಪ್ರಶ್ನೆಗಳಾದ ನಂತರ ಶಾಸ್ತ್ರಿಗಳು, ಒಳ್ಳೆಯ ವಿದ್ವಾಂಸ, ಪ್ರಾಧ್ಯಾಪಕ ಎಂದು ನನ್ನನ್ನು ಪರಿಚಯಿಸಿದರು. ಆಗ ಡಿವಿಜಿಯವರು, "ಇವರು ಕಳಿಸಿದ ಭಾಮಹನ ಅಲಂಕಾರಗ್ರಂಥದ ಒಂದು ಪ್ರತಿಯನ್ನು ನೋಡಿದ್ದೇನೆ. ಅಲ್ಲಿ ಮೊದಲ ಕಂದ ಪದ್ಯವನ್ನು ಓದಿದೆ. ಎರಡನೆಯ ಸಾಲು ಹೇಗೆ ಹೇಗೋ ಹಿಡಿಯಿತು. ಆದ್ದರಿಂದ ಮುಚ್ಚಿಟ್ಟುಬಿಟ್ಟೆ" ಎಂದು ಪರಿಹಾಸ ಮಾಡಿದರು. ಅಂದು ಕಂದ ಪದ್ಯದ ಬಳಕೆಯನ್ನು ಇನ್ನೂ ಸಜೀವವಾಗಿಸಿಕೊಂಡಿದ್ದ ಕವಿಗಳೆಂದರೆ ಅವರೊಬ್ಬರೇ. ಶಾಸ್ತ್ರಿಗಳು ಆ ಪದ್ಯವನ್ನು ತರಿಸಿ ಓದಿಸಿದರು.

ಡಿವಿಜಿ ಆ ಪದ್ಯವನ್ನು ಓದಿ, "ನೀವು ಕನ್ನಡ ಪ್ರೊಫೆಸರ್, ನೀವು ಹೇಳಬೇಕು. ಎರಡನೆಯ ಸಾಲಿನಲ್ಲಿ ಕುಂಟುತ್ತ ಹಿಡಿಯುತ್ತಿಲ್ಲವೆ?" ಎಂದರು. ಆಗ ಶಾಸ್ತ್ರಿಗಳು, "ಅವನೇ ಪ್ರೊಫೆಸರ್. ಪ್ರಾಯಶಃ ತಪ್ಪು ಮಾಡಲಾರ. ಅವನೇ ಹೇಳಲಿ," ಎಂದರು. ಆಗ ನಾನು ಹೇಳಿದೆ, "ನಿಮಗೆಲ್ಲೋ ತೆಲುಗಿನ ಕಂದದಂತೆ ಕನ್ನಡದಲ್ಲೂ ಆರನೆಯ ಗಣದ ಅಂತ್ಯದಲ್ಲಿ ಯತಿ-ವಡಿಗಳಿರಬೇಕೆಂಬ ಭಾವನೆ ಇರುವಂತಿದೆ. ಆದರೆ ಕನ್ನಡದಲ್ಲಿ ನೀವೇ ನೋಡಿ. 'ಪೊನ್ನುಳ್ಳವನೇ ಕುಲೀನಂ.....' "ಪೆಂಣ್ಗೆ ಮಣ್ಣಂ ಎಂಬ ಶಬ್ದ ಮಣಿ ದರ್ಪಣ ಪ್ರಯೋಗವಾಗಲಿ ಅತಿಮೃದುವ ನಿಶಿಸುಗುಂ.... ಮಾಳ್ಕೆ ಮಧ್ಯಮ ಗತಿಯಿಂ ಎಂಬ ಕಾವ್ಯಾವಲೋಕನ ಪ್ರಯೋಗವಾಗಲಿ ಹೀಗೆಯೆ ಬಂದಿಲ್ಲವೆ?" ಎಂದು ನಾನು ಕೇಳಿದೆ.

ಡಾ. ಕೃಷ್ಣಮೂರ್ತಿಯವರು ನೆನಪಿನಾಳದಿಂದ ಉಲ್ಲೇಖಿಸಿದ ಈ ವಿವರಣೆಯನ್ನು ಕೇಳಿ ಡಿವಿಜಿಯವರು ಯಾವ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದರು ಎಂಬುದನ್ನು ಕೇಳಿ: "ಡಿವಿಜಿಯವರು ತಟ್ಟನೆ ಗಾಢಾಲಿಂಗನ ಕೊಟ್ಟು, ನೀನೇ ಇಂದು ನನಗೆ ಗುರುವಾದೆ. ನೀನು ನಮಸ್ಕಾರಕ್ಕೆ ಅರ್ಹ" ಎನ್ನುತ್ತಾ ಒಳಗೆ ಹೋಗಿ ತಮ್ಮ ಎರಡು ಪುಸ್ತಕಗಳನ್ನು ತಂದು, ಒಂದರಲ್ಲಿ "ಪರಮಾನ್ನವಿಟ್ಟವರಿಗೆ ಹುರಿಹಿಟ್ಟಾದರೂ ಕೊಡಬೇಡವೆ?" ಎಂದೂ ಇನ್ನೊಂದರಲ್ಲಿ "ಕೀರು ಕೊಟ್ಟವರಿಗೆ ಈ ಕಾಕಂಬಿ ಮುಯ್ಯಿ" ಎಂದೂ ಬರೆದು, With best-regards ಎಂದು ರುಜು ಮಾಡಿಕೊಟ್ಟರು.

ಈ ಪ್ರಸಂಗವನ್ನು ಮುಕ್ತಾಯಗೊಳಿಸುತ್ತಾ ಡಾ. ಕೃಷ್ಣಮೂರ್ತಿಯವರು, "ಅವರ ಈ ಗುಣೋನ್ನತಿಯಿಂದ ಚಕಿತನಾದ ನಾನು ಅಲ್ಲಿಯೆ ಇನ್ನೊಂದು ಪದ್ಯ ಬರೆದು ಹಿಂದಿನ ಪದ್ಯವನ್ನು ಬದಲಾಯಿಸಿದೆ. ಈ ಘಟನೆಯಿಂದ ನನ್ನ ಕನ್ನಡ ಅನುವಾದ ಪ್ರಣಾಲಿಯಲ್ಲೆ ಒಂದು ಹೊಸ ತಿರುವು ಮೂಡಿ ಬಂತು," ಎಂದೂ ಹೇಳುತ್ತಾರೆ.

**ಡಾ. ಕೆ. ಶ್ರೀಕಂಠಯ್ಯ**

# ಉಚಲ್ಯಾ



ಪುಸ್ತಕ ವಿಭಾಗ

ಮರಾಠಿ ಮೂಲ: ಲಕ್ಷ್ಮಣ ಗಾಯಕವಾಡ
ಅನುವಾದ: ಚಂದ್ರಕಾಂತ ಪೋಕಳೆ
ಸಂಗ್ರಹ: ವಿ. ರಮಾ ಕಾರಂತ
ಪ್ರಕಾಶಕರು: ನವಕರ್ನಾಟಕ ಪ್ರಕಾಶನ, ಬೆಂಗಳೂರು

# ಉಚಲ್ಯಾ

ಹೊಲವಿಲ್ಲ, ಮನೆಯಿಲ್ಲ, ನಿಶ್ಚಿತವಾದ ಒಂದು ಊರೂ ಇಲ್ಲ. ಅಷ್ಟೇ ಏಕೆ ಜಾತಿಯೂ ಇಲ್ಲದಂಥ ಒಂದು ಅಲೆಮಾರಿ ಪಂಗಡದಲ್ಲಿ ಲಾತೂರು ತಾಲೂಕಿನ ಧನೇಗಾಂವ್ ಎಂಬ ಊರಲ್ಲಿ ಜನಿಸಿದೆ. ನಾನು ಚಿಕ್ಕವನಿದ್ದಾಗ ನನ್ನ ಮನೆ ಗುಬ್ಬಿಯ ಗೂಡಿನಂತಹ ಒಂದು ಗುಡಿಸಲಾಗಿತ್ತು. ಇಡೀ ಸಂಸಾರದ ಹೊಣೆಗಾರಿಕೆ ನಮ್ಮಜ್ಜಿ ನರಸಾಬಾಯಿಯದು. ಈ ಮೊದಲು ಅಜ್ಜ ನಿಂಗಪ್ಪನೇ ಮನೆಯ ಜವಾಬ್ದಾರಿ ಹೊತ್ತಿದ್ದ. ದೂರದೂರಿನ ಸಂತೆಗಳಿಗೆ ಹೋಗಿ ಕಿಸೆ ಕತ್ತರಿಸಿ, ಗಂಟು ಕದ್ದು, ಸಂಜೆ ಮನೆ ಸೇರುತ್ತಿದ್ದ. ಆತನಿಗೆ ಆ ಭಾಗದ ಪ್ರಸಿದ್ಧ ಕಳ್ಳನೆಂಬ ಖ್ಯಾತಿಯಿತ್ತು. ನಿಜಾಮ ಸರಕಾರದಲ್ಲೂ ಆತನ ಹೆಸರು ಪರಿಚಿತವಾಗಿತ್ತು.

ಒಮ್ಮೆ ಅಜ್ಜ ಕಳ್ಳತನ ಮಾಡಲು ಹೆಂಡದ ಅಮಲಿನಲ್ಲಿ ಸಂತೆಗೆ ಹೋದ. ಅಲ್ಲೊಬ್ಬ ತನ್ನ ಧೋತರದಲ್ಲಿ ನೋಟುಗಳನ್ನು ಮಡಚಿಟ್ಟು ಸೊಂಟಕ್ಕೆ ಸಿಕ್ಕಿಸಿಕೊಂಡಿದ್ದ. ಅಜ್ಜ ಹರಿತವಾದ ಬ್ಲೇಡಿನಿಂದ ಧೋತರ ಕತ್ತರಿಸಲು ಹೋಗಿ ತೊಡೆಯನ್ನೇ ಕತ್ತರಿಸಿದ. ಮುದುಕ ಕಿರುಚಲಾರಂಭಿಸಿದ. ಪೊಲೀಸರು ಅಜ್ಜನನ್ನು ಬಂಧಿಸಿ ಸಿಕ್ಕಾಪಟ್ಟೆ ಥಳಿಸಿದರು. ಮನೆಗೆ ಬಂದು ಇಡೀ ಮನೆ ಹುಡುಕಾಡಿದರು. ಪೊಲೀಸರ ವಿಚಾರಣೆ ನಡೆದಿತ್ತು: "ಬೋಲ್, ರಖಾಹೈ ಪೈಸಾ ಔರ್ ಸೋನಾ ?" ಅಜ್ಜ ಉತ್ತರಿಸಿದ, "ನೋಡರಿ ಸಾಹೇಬರ, ಮನ್ಯಾಗಂತೂ ಏನೂ ಇಲ್ಲ." ಪೊಲೀಸ ಖಾರವಾಗಿ, "ತೇರೆ ರಾಂಡಕೊ ಮಾಲೂಮ್ ಹೋಗಾ" ಎಂದು ಅಜ್ಜಿಯ ಕೂದಲು ಹಿಡಿದೆಳೆದು ಥಳಿಸಲಾರಂಭಿಸಿದ. ಪೊಲೀಸರು ಮನೆ ಮಂದಿಗೆಲ್ಲಾ ಹೊಡೆಯಲಾರಂಭಿಸಿದರು. ಕೊನೆಗೆ ಅಜ್ಜನನ್ನು ಪೊಲೀಸರು ಎಳೆದೊಯ್ದರು. ಕೆಲ ತಿಂಗಳ ಜೈಲುವಾಸ. ಬಿಡುಗಡೆಯಾದ ಮೇಲೆ ದಿನಕ್ಕೆರಡು ಬಾರಿ ಕತ್ತೆಯ ಮೇಲೆ ಕುಳಿತು ಸ್ಟೇಶನ್ನಿಗೆ ಹೋಗಿ ಹಾಜರಿ ಕೊಡುತ್ತಿದ್ದ. ಅಜ್ಜ ಹಾಜರಿ ತಪ್ಪಿಸಿದರೆ ಮನೆ ಮಂದಿಗೆಲ್ಲಾ ಹೊಡೆತ. ಪೊಲೀಸರು ಅಜ್ಜನನ್ನು 'ಗುರಂದಾ' ಎಂದು ನೇಮಿಸಿದರು. ಎಂದರೆ ಕಳ್ಳರನ್ನು ಗುರುತಿಸಲು ಅಜ್ಜ ಸಹಾಯ ಮಾಡಬೇಕು.

ನಮ್ಮದು ಕಳ್ಳರ ಜಾತಿ ಎಂಬುದಕ್ಕಾಗಿ ಅಪ್ಪನಿಗೆ ಯಾರೂ ಕೆಲಸ ಕೊಡುತ್ತಿರಲಿಲ್ಲ. ಕೊನೆಗೆ ಮನೆ ಖರ್ಚಿಗಾಗಿ ಅಜ್ಜಿಯೇ ಕಳ್ಳತನ ಪ್ರಾರಂಭಿಸಿದಳು. ಜಾತ್ರೆಯಲ್ಲಿ ಮಕ್ಕಳ ಸರ, ಹೆಂಗಸರ ಕೊರಳಹಾರ, ಓಲೆ, ರಿಂಗ್, ಇತ್ಯಾದಿ ಹರಿತವಾದ ಬ್ಲೇಡಿನಲ್ಲಿ ಕತ್ತರಿಸಿ ಕಳ್ಳತನ ಮಾಡುತ್ತಿದ್ದಳು. ಅದನ್ನು ಸಾಹುಕಾರರಿಗೆ ಮಾರಿ ಮನೆ ನಡೆಸುತ್ತಿದ್ದಳು. ಒಮ್ಮೊಮ್ಮೆ 'ಉಚಲ್ಯಾ' (ಗಂಟುಚೋರ) ಜನರ ಮನೆಗ

# ಉಚಲ್ಯಾ

ಳನ್ನು ಪೊಲೀಸರು ತಪಾಸಣೆ ಮಾಡಲು ಬರುತ್ತಿದ್ದರು. ಆಗ ಕದ್ದ ಮಾಲು ತೆಗೆದು ಕೊಂಡ ಸಾಹುಕಾರ, ಊರ ಪೊಲೀಸ ಗೌಡರು, ಪೊಲೀಸರಿಗೆ ಸ್ವಲ್ಪ ಹಣ ಕೊಟ್ಟು ಸಮಾಧಾನಪ ಡಿಸಿ ಕಳಿಸುತ್ತಿದ್ದರು. ಪೊಲೀಸ ಗೌಡರ ಅನುಮ ತಿಯಿಲ್ಲದೆ ನಮ್ಮ ಜಾತಿಯ ಜನ ಪರವೂರಿಗೆ ಹೋಗುವ ಹಾಗಿರಲಿಲ್ಲ. ಹೀಗಾಗಿ ನಮ್ಮವರಿಗೆ ಪ್ರಮಾಣಪತ್ರವೆಂದರೆ ದೇವರು. ಕಿಸೆ ಕತ್ತರಿ ಸುವ ಭಾರತ ಬ್ಲೇಡು ಅಂದರೆ ನಮ್ಮ ಪಾಲಿಗೆ 'ಲಕ್ಷ್ಮಿ'ಯಾಗಿತ್ತು. ಕಳ್ಳತನಕ್ಕೆ ಹೊರಡುವ ಮೊದಲು ಬ್ಲೇಡಿಗೆ ಕೋಳಿ ಬಲಿ ಕೊಡುತ್ತಿ ದ್ದರು. 'ಹೇ ದೇವರೆ, ಕಳ್ಳತನದಲ್ಲಿ ಯಶ ಸಿಗಲಿ' ಎಂದು ಬ್ಲೇಡಿಗೆ ನಮಸ್ಕರಿಸುತ್ತಿದ್ದರು.

ನನಗಂತೂ ಪೊಲೀಸರನ್ನು ಕಂಡರೆ ಯಮ ದೂತರ ನೆನಪಾಗುತ್ತಿತ್ತು. ಪೊಲೀಸರು ಮನೆ ತಪಾಸಣೆ ನಡೆಸಿದಾಗ, ಹೊಡೆಯುವಾಗ, ನಾನೆಷ್ಟೋ ಸಲ ಚಡ್ಡಿಯೊಳಗೇ ಹೊಲಸು

ಅಂದಿನಿಂದ ನಮ್ಮ (ಸಂತಾ ಮುಚ್ಚರ) ಸಂತೆಕಳ್ಳರು ಜನರ ಕಳ್ಳತನ ನಿರಾತಂಕವಾಗಿ ಸಾಗಿತು. ನಮ್ಮ ಜಾತಿಭಾಷೆ ತೆಲುಗು. ನಮ್ಮ ಜಾತಿಯ ಬಗ್ಗೆ ನಮಗೇನೂ ಗೊತ್ತಿಲ್ಲ. ಇಡೀ ಭಾರತದಲ್ಲಿ ನಮ್ಮನ್ನು ಎರಡೇ ಹೆಸರಿನಲ್ಲಿ ಕರೆಯುತ್ತಾರೆ. ಒಂದು ಜಾಧವ ಇನ್ನೊಂದು ಗಾಯಕವಾಡ. ಉಳನೋರ, ಬುಮೋ ನೋರ, ಕಾಳಪಿಟನೋರ, ಕಾಸಕೋನೋರ ಹೀಗೆ ನಮ್ಮಲ್ಲಿ ಅನೇಕ ಒಳ ಪಂಗಡಗಳಿವೆ. ನಮಗೆ ಸಂಬಂಧಿಕರು ಕಡಿಮೆ. ನನ್ನ ತಂದೆ ಮಾರ್ತಾಂಡ. ತಾಯಿ ಧೊಂಡಾಬಾಯಿ. ಅಣ್ಣ ಮಾಣಿಕದಾದಾ. ತಿನ್ನಲು ಏನೂ ಇಲ್ಲದಾಗ ಅಪ್ಪ ದೂರದ ಹೊಲಗಳಿಗೆ ರಾತ್ರಿ ಹೋಗಿ ಜೋಳದ ತೆನೆ, ಮೆಣಸು, ಶೇಂಗಾ ಕದ್ದು ತರುತ್ತಿದ್ದ. ನಮ್ಮಣ್ಣನಿಗೆ ಕಳ್ಳತನ ಕಲಿಸಲು ನೇರಳೆಯ ಸಂತಾರಾಮ, ಬಾರಗಾಂವಿನ ಸಖಾ ರಾಮ, ನಮ್ಮ ತಂಡವನ್ನು ಸೇರಿಕೊಂಡರು.

---

**ಸಮಾಜದ ತಿರಸ್ಕಾರಕ್ಕೊಳಗಾದ, ಬಡತನದ ಬೇಗೆಯನ್ನು ಸಹಿಸದೆ ಅನಿವಾರ್ಯವಾಗಿ ಕಳ್ಳತನಕ್ಕಿಳಿದ, ಅದನ್ನೇ ವೃತ್ತಿಯಾಗಿಸಿಕೊಂಡ, 'ಉಚಲ್ಯಾ' ಪಂಗಡದ ಹುಡುಗನೊಬ್ಬ ಹೇಗೆ ವಿದ್ಯಾವಂತನಾಗಿ, ತಾನೂ ಮೇಲೇರಿ ತನ್ನ ಜನರ ಒಳಿತಿಗಾಗಿ ಏನು ಮಾಡಿದ, ಸಾಧಿಸಿದ ಎನ್ನುವುದನ್ನು ವಿವರಿಸುವ ಆತ್ಮಕಥೆಯಿದು. -ಸಂ.**

---

ಮಾಡಿಕೊಂಡಿದ್ದೇನೆ. ಲಿಂಗಪ್ಪನ ಕಾರಣದಿಂದ ಕಳ್ಳತನ ಮಾಡುವುದು ಸಾಧ್ಯವಿಲ್ಲವೆಂಬ ಕಾರ ಣಕ್ಕಾಗಿ ಜಾತಿ ಪಂಚರೆಲ್ಲ ಸಭೆ ಸೇರಿ, ಇದಕ್ಕೇನಾ ದರೂ ವ್ಯವಸ್ಥೆ ಮಾಡಬೇಕೆಂದು ನಿಶ್ಚಯಿಸಿ ದರು. ಮತ್ತು ಒಂದು ರಾತ್ರಿ ಮನೆ ಭಾವಣೆಯ ನ್ನೆಲ್ಲ ಕಿತ್ತೊಗೆದು ಅಜ್ಜನ ಬಾಯಿಗೆ ಬಟ್ಟೆ ತುರುಕಿ ಕೊಡಲಿಯಿಂದ ಹೊಡೆದು ಕೊಂದರು. ಅಲ್ಲದೆ ಹೊರಗಿನ ಯಾರಿಗೂ ತಿಳಿಯದಂತೆ ಸುಟ್ಟೂ ಹಾಕಿದರು.

ಕಳ್ಳತನ ಮಾಡುವಾಗ ಸಿಕ್ಕಿಬಿದ್ದರೆ ಅಂಜಬಾ ರದು; ಪೊಲೀಸರು ಹಿಡಿದು ಎಷ್ಟೇ ಹೊಡೆ ದರೂ ಗುಟ್ಟು ಬಿಟ್ಟುಕೊಡಬಾರದು ಎಂದು ಕಳ್ಳತನಕ್ಕೆ ಮೊದಲು ಹೊಡೆತ ತಿನ್ನುವ ಶಿಕ್ಷಣ ನೀಡಲಾಗುತ್ತಿತ್ತು.

ಒಮ್ಮೆ ಕಳ್ಳತನ ಮಾಡುವಾಗ ಮಾಣಿಕದಾದಾ ಜನರ ಕೈಗೆ ಸಿಕ್ಕಿಬಿದ್ದ. ಅವರ ಹೊಡೆತ ತಾಳಲಾರದೆ, ಎಲ್ಲ ಹೇಳಿದ. ಮರುದಿನ ಮೀನು ಹಿಡಿಯಲು ದಾದಾನನ್ನು ಹೊಳೆಗೆ

ಕರೆದುಕೊಂಡು ಹೋದರು. ಮಧ್ಯಾಹ್ನದ ಉರಿಬಿಸಿಲು. ಉಸುಕು ಕಾಯ್ದು ಕೆಂಡವಾಗಿತ್ತು. ಉಣ್ಣಲು ಎಲ್ಲರೂ ಹತ್ತಿ ಮೇಲೆ ಬಂದರು. ಆಗ ತುಕ್ಯಾ ಮತ್ತು ಸಂತ್ಯಾ ಕೇಳಿದರು; "ಮಾಣಿಕ್ಯಾ ಮಗನ, ಬ್ರಾಹ್ಮಣರಾಂಗ ಹೊಡೆತಕ್ಕೆ ಅಂಜಿ, ನಮ್ಮ ಹೆಸರು ಯಾಕ ಹೇಳಿದಿ ? ಗಂಟು ಚಪ್ಪಲಿ ಯಾಕ ಕದ್ದು ಕೊಂಡು ಬಂದಿಲ್ಲ ಹೇಳ ?" ದಾದಾ ಉತ್ತರಿಸಿದ, "ಸಂತಿ ಮಂದಿಯೆಲ್ಲ ಕಣ್ಣಾಗ ಮೆಣಸಿನ ಪುಡಿ ಹಾಕಿ ಹೊಡೆದ್ರು, ಅದಕ್ಕೇ ಹೆಸರು ಹೇಳಬೇಕಾಯಿತು." ತಕ್ಷಣ ಅವರಿಬ್ಬರೂ ಸೇರಿ ದಾದಾನನ್ನು ಉಸುಕಿನ ಮೇಲೆ ಕೆಡವಿ, ಅಂಗಿ- ಚಡ್ಡಿ ಕಿತ್ತೆಸೆದು ಬತ್ತಲೆ ಮಾಡಿದರು. ಬೂಟುಗಾಲಿನಿಂದ ಒದ್ದರು. ಅವನು, "ಇಲ್ಲ, ಇನ್ನು ಹೆಸರು ಹೇಳೋದಿಲ್ಲ" ಎಂದರೂ ಬಿಡದೆ ಕಣ್ಣಿಗೆ ಹಸಿಮೆಣಸು ತುರುಕಿ ಹೊಡೆಯುತ್ತಿದ್ದರು. ಅಕ್ಷರಶಃ ಹೊಲಸು ಮಾಡಿಕೊಂಡ ನಂತರವೆ ಬಿಟ್ಟರು.

ಈಗ ದಾದಾ ಪಕ್ಕಾ ಕಳ್ಳನಾಗಿ ಸಾಕಷ್ಟು ಗಳಿಸಲಾರಂಭಿಸಿದ. ಈ ವೇಳೆಗಾಗಲೆ ಅಜ್ಜಿ ಸಾಕಷ್ಟು ಸೋತಿದ್ದಳು. ಪೊಲೀಸರು ತಲೆ ಕೆಳಗೆ ಮಾಡಿ ಹಂಟರಿನಿಂದ ಹೊಡೆಯುತ್ತಾರೆ. ಕೆಳಗೆ ಸಿಗರೇಟು ಹಚ್ಚುತ್ತಾರೆ. ಹೊಲಸನ್ನು ಬಾಯಲ್ಲಿ ತುರುಕಿ ತಿನ್ನುವಂತೆ ಬಲವಂತ ಮಾಡುತ್ತಾರೆ. ಆದ್ದರಿಂದ ತಾನು ಕಳ್ಳತನ ಬಿಡುತ್ತೇನೆಂದು ಹೇಳುತ್ತಿದ್ದಳು. ಕೆಲದಿನಗಳ ಬಳಿಕ ಹಾಸಿಗೆ ಹಿಡಿದ ಅಜ್ಜಿ ಕೊನೆಯುಸಿರೆಳೆದಳು. ಈಗ ದಾದಾನೇ ಮನೆ ನೋಡಿಕೊಳ್ಳಲಾರಂಭಿಸಿದ.

*** *** ***

ನನ್ನಪ್ಪನ ಕಾಲು ಸರಿಯಿಲ್ಲದ ಕಾರಣ ಅವನು ಎಲ್ಲೂ ಕಳ್ಳತನಕ್ಕೆ ಹೋಗುತ್ತಿರಲಿಲ್ಲ. ಆದರೂ



ಪುಸ್ತಕ ವಿಭಾಗ

ಯಾರ ಯಾರದೋ ಕಾಲಿಗೆ ಬಿದ್ದು ತೋಟ ಕಾಯುವ ಕೆಲಸ ಗಿಟ್ಟಿಸಿಕೊಂಡ. ಮಾಣಿಕ ದಾದಾ, ಭಗವಾನ, ಅಣ್ಣಾ, ಸಂಭಾಭಾವೂ ಮತ್ತು ಹರಿಚಂದ್ರ ಹೀಗೆ ನನಗೆ ಐವರು ಸಹೋದರರು. ಸಮೀಪದಲ್ಲಿಯೇ ಒಂದು ಜೋಪಡಿ ಕಟ್ಟಿಕೊಂಡು ನನ್ನಜ್ಜ (ತಾಯಿಯ ತಂದೆ) ವಾಸವಾಗಿದ್ದ. ನನ್ನಜ್ಜ ಸಾಯಿಬೂ ತಾತಾ ಶಿಕಾರಿಗೆ ಹೋಗಿ ಮೀನು, ಮೊಲ, ಚಿಗರೆ, ಕಾಡು ಬೆಕ್ಕುಗಳನ್ನು ಹಿಡಿದು ತರುತ್ತಿದ್ದ.

ತಾತ್ಯಾ ಮದುಕನಾದರೂ ಚಾಣಾಕ್ಷ. ನಮ್ಮ ಮನೆಗಳಲ್ಲಿ, ಇಲಿಗಳದ್ದೇ ಸಾಮ್ರಾಜ್ಯ. ನಾನು, ತಾತ್ಯಾ, ಬಲೆಯಿಟ್ಟು ಇಲಿ ಹಿಡಿಯುತ್ತಿದ್ದೆವು. ತಾತ್ಯಾ ಆ ಇಲಿಗಳನ್ನೆಲ್ಲ ಸಮೀಪದ ಗೋದಿ ಹೊಲಕ್ಕೊಯ್ದು ಬಿಟ್ಟು ಬರುತ್ತಿದ್ದ. ಅವು ತೆನೆ ಕತ್ತರಿಸಿ ಬಿಲದಲ್ಲಿ ಸಂಗ್ರಹಿಸುತ್ತಿದ್ದವು. ಸುಗ್ಗಿಯ ಬಳಿಕ ನಾನು, ತಾತ್ಯಾ, ಬಿಲಗಳನ್ನು ಗುದ್ದಲಿಯಿಂದ ಅಗೆದು, ಅಲ್ಲಿದ್ದ ಗೋದಿಯನ್ನು ಸಂಗ್ರಹಿಸುತ್ತಿದ್ದೆವು. ಈ ರೀತಿ ತಾತ್ಯಾ ನಾಲ್ಕು ಗಡಿಗೆ ಗೋದಿ ಸಂಗ್ರಹಿಸಿ ಅದನ್ನು ಮಾರಿದ ಹಣದಿಂದ ದಾದಾ ಮತ್ತು ಅಣ್ಣನ ಮದುವೆ ಮಾಡಿದ.

# ಉಚಲ್ಯಾ

ನಮ್ಮಲ್ಲಿ ಕಳ್ಳತನದ ಶಿಕ್ಷಣ ನೀಡಲು ಕೆಲವು ತಂಡಗಳಿವೆ. ಇವುಗಳನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಬಹುದು. ಕಿಸೆಗಳ್ಳತನ, ಚಪ್ಪಲು ಮತ್ತು ಗಂಟು ಚೋರತನ, ವಂಚನೆ, (ನಕಲಿ ಬದಲಿಗೆ ಅಸಲಿ ಬಂಗಾರ ಹಾರಿಸುವುದು) ಹಾಗೂ ಠಕ್ಕತನ. ಮೊದಲ ಆರು ತಿಂಗಳ ಗಳಿಕೆ, ಶಿಕ್ಷಣ ನೀಡಿದ ತಂಡದವರಿಗೆ ಸಲ್ಲುತ್ತದೆ.

ನಮ್ಮ ಮನೆ ಮೊದಲೇ ಚಿಕ್ಕದು. ಅದರಲ್ಲಿ ನೊಣಗಳಂತೆ ವಾಸಿಸುತ್ತಿದ್ದರು ಮನೆಮಂದಿಯೆಲ್ಲ. ಆಡಿನ ಪಕ್ಕದಲ್ಲೇ ನಮ್ಮ ಹಾಸಿಗೆ. ಚಳಿಗಾಲದಲ್ಲಿ ಗಡ ಗಡ ನಡುಗುತ್ತಾ ಒಂದೇ ಹೊದಿಕೆಯೊಳಗೆ ಸೇರುತ್ತಿದ್ದೆವು. ನಾಯಿಯೂ ನಮ್ಮ ಹಾಸಿಗೆಯೊಳಗೆ ತೂರುತ್ತಿತ್ತು. ರಾತ್ರಿ ಅದು ಉಚ್ಚೆ ಹೊಯ್ದರೂ ಬೆಚ್ಚಗೆನಿಸುತ್ತಿತ್ತು. ಮರುದಿನ ಮೂತ್ರದ ವಾಸನೆ ಬಂದರೂ ಅದನ್ನೆ ಹೊದ್ದು ಕೊಳ್ಳುತ್ತಿದ್ದೆವು. ನಮ್ಮ ಮನಸ್ಸು ಸತ್ತಿದ್ದರಿಂದ ನಮಗೆ ಏನೂ ಅನಿಸುತ್ತಿರಲಿಲ್ಲ. ನಮ್ಮ ಹಾಸಿಗೆಯಲ್ಲಿ ಹೇನು ತುಂಬಿರುತ್ತಿತ್ತು. ಆದರೂ ಹಾಸಿಗೆಯನ್ನು ವರ್ಷಕ್ಕೊಮ್ಮೆ ಒಗೆಯುತ್ತಿದ್ದೆವು.

ನಮ್ಮ ಪಕ್ಕದಲ್ಲಿ ದಾಯಾದಿಗಳಾದ ಸಂಬಾ, ಭೀಮಾ, ತುಳಸೀರಾಮ ವಾಸಿಸುತ್ತಿದ್ದರು. ನಾನು ಚಿಕ್ಕವನಿದ್ದಾಗ ಹಂದಿಮರಿಗಾಗಿ ಅವರೊಡನೆ ಜಗಳವಾಡುತ್ತಿದ್ದೆ. ಹಂದಿ ಬೆನ್ನಿನ ಮಾಂಸ ಕೊಡುವುದಾಗಿ ಆಸೆ ತೋರಿಸಿ, ದಾದಾ ಕಟ್ಟಿಗೆ ಆಯ್ದು ತರಲು ಕಳಿಸುತ್ತಿದ್ದ. ಅಲ್ಲಿ ಬಿದ್ದ ಊರ ಹೆಂಗಸರ ಮಲಬಳಿಯಲು ಹೇಳುತ್ತಿದ್ದ. ನಾವು ಮಾಂಸದ ಆಸೆಗೆ, ಗೆರಟೆಯಿಂದ ಅದನ್ನು ಬಳಿಯುತ್ತಿದ್ದೆವು. ತುಕಾರಾಮನ ಹಾರೆಯ ಹೊಡೆತಕ್ಕೆ ಹಂದಿ ವಿಲವಿಲ ಒದ್ದಾಡಿ ಪ್ರಾಣ ಬಿಡುತ್ತಿತ್ತು. ಅನಂತರ ತರಗೆಲೆ ಕಟ್ಟಿಗೆಯ ಸಹಾಯದಿಂದ ಹಂದಿ ಸುಡುತ್ತಿದ್ದೆವು. ಇಡೀ ಊರಿಗೆ ಇದೊಂದೇ ಹೇಲುಗೇರಿ. ಇಂಥ ಹೇಲುಗೇರಿಯ ನಡುವೆ ಕೂತು ನಾವು ಹಂದಿ ಸುಟ್ಟು ತಿನ್ನುತ್ತಿದ್ದೆವು.

ಒಮ್ಮೆ ಲಾತೂರ ಸಂತೆಯಿಂದ ಎಣ್ಣೆ ಡಬ್ಬಿ ಹೊತ್ತು ತರುತ್ತಿದ್ದ ಅಣ್ಣಾ ಸಿಕ್ಕಿಬಿದ್ದ. ಪೊಲೀಸರು ಅವನನ್ನು ಬೆತ್ತಲೆ ಮಾಡಿ ಹೊಡೆಯಲಾರಂಭಿಸಿದರು. ಸಾಕಷ್ಟು ಹೊಡೆದ ನಂತರ ಅವರನ್ನು ಕರೆದುಕೊಂಡು ಮನೆಗೆ ಬಂದರು. ಎಲ್ಲರನ್ನೂ ಸಾಲಾಗಿ ನಿಲ್ಲಿಸಿ ಹಂಟರಿನಿಂದ ಥಳಿಸಿದರು. ಅವ್ವನ ಕೂದಲೆಳೆದು ಬಡಿದರು. "ಮಾಲ ಎಲ್ಲಿಟ್ಟಾರ ಹೇಳು ?" ಎಂದು ಕಾಡಿದರು. "ಇನ್ನೂರು ರೂಪಾಯಿ ಕೊಟ್ಟರೆ ನಿನ್ನ ಮಕ್ಕಳನ್ನು ಬಿಡ್ತೀವಿ" ಅಂದರು. ಮಕ್ಕಳ ಸಂಕಟ ನೋಡಲಾರದೆ ಅವ್ವ ಆಡು ಮಾರಿ ಇನ್ನೂರು ರೂಪಾಯಿ ಭರ್ತಿ ಮಾಡಿದಳು. ಇದನ್ನೆಲ್ಲ ನೋಡಿದ ನಾನು ಚಡ್ಡಿಯಲ್ಲೇ ಉಚ್ಚೆ ಹೊಯ್ದಿದ್ದೆ. ಕಳ್ಳತನದ ಗಂಭೀರ ಪರಿಣಾಮ ಅರಿತ ಅಪ್ಪ ನನ್ನ ಕೈಗೆ ಬ್ಲೇಡಿನ ಬದಲು ಸ್ಲೇಟುಕೊಟ್ಟು ಬಾಲವಾಡಿಗೆ ಕಳಿಸಲಾರಂಭಿಸಿದ.

ಶಾಲೆಗೆ ಹೋಗಲಾರಂಭಿಸಿದ ನನಗೆ ಇದೆಲ್ಲ ಹೊಸ ಅನುಭವ. ತೋಳದ ಗುಂಪಿನಲ್ಲಿ ಕುರಿ ನುಸುಳಿದಂತಾಗಿತ್ತು ನನ್ನ ಸ್ಥಿತಿ. 'ಉಚಲ್ಯಾ ಲಕ್ಷ್ಮ'ಶಾಲೆಗೆ ಬಂದನೆಂದು ಕೆಲ ವಿದ್ಯಾರ್ಥಿಗಳು ಕಲ್ಲು ಹೊಡೆದರೆ ಕೆಲವರು, "ಲಕ್ಷ್ಯಾ ಏಡಿ ಸಾರು ಹೇಗಿರುತ್ತದೆ ?" ಎಂದು ಚೇಷ್ಟೆ ಮಾಡುತ್ತಿದ್ದರು. ಮೂರು ನಾಲ್ಕು ವಾರ ಕಳೆದಿರಬೇಕು, ಅಷ್ಟರಲ್ಲಿ ನಮ್ಮಲ್ಲಿ ಕೆಲವರಿಗೆ ವಾಂತಿ ಪ್ರಾರಂಭವಾಯಿತು. 'ಲಕ್ಷ್ಯಾ ಶಾಲೆಗೆ ಹೋದದ್ದರಿಂದ

ನಮ್ಮ ಮಕ್ಕಳಿಗೆ ವಾಂತಿ, ಭೇದಿ ಬಂತೆಂದು ಕೆಲವರು ಆರೋಪಿಸಿದರು. ಜಾತಿ ಜನರೆಲ್ಲ ಪಂಚಾಯತಿ ಮಾಡಿ, "ಒಂದೋ ಮಾರ್ತಾಂಡ ಊರು ಬಿಡಬೇಕು. ಇಲ್ಲವೆ ಮಗನ ಶಾಲೆ ಬಿಡಿಸಬೇಕು" ಎಂದು ಠರಾವು ಮಾಡಿದರು. ನಮ್ಮಲ್ಲಿ ಪಂಚರ ನಿರ್ಣಯಕ್ಕೆ ಒಪ್ಪದಿದ್ದರೆ ಬಹಿಷ್ಕಾರ ಹಾಕುತ್ತಾರೆ. ಹೀಗಾಗಿ ಅಪ್ಪ ಕುಲಕರ್ಣಿ ಮಾಸ್ತರರನ್ನು ಭೆಟ್ಟಿಯಾಗಿ ಮಗನ ಹೆಸರು ತೆಗೆಯಲು ಸೂಚಿಸಿದ. ಆದರೆ ಮಾಸ್ತರರು ಒಪ್ಪದೆ ನಮ್ಮಲ್ಲಿಗೆ ಬಂದು ಜನರಿಗೆ ಬುದ್ಧಿ ಹೇಳಿದರು. ಡಾಕ್ಟರನನ್ನು ಕರೆಸಿ ಎಲ್ಲರಿಗೂ ಔಷಧಿ ಕೊಡಿಸಿದರು. ವಾಂತಿ-ಭೇದಿ ಕಡಿಮೆಯಾಯಿತು. ನನ್ನ ಶಾಲೆ ಮತ್ತೆ ಪ್ರಾರಂಭ ವಾಯಿತು.

*** *** ***

ಮೀನು ಹಿಡಿಯಲು ನಾನು, ತಾತ್ಯಾ ಮತ್ತು ರಮಜಾನಪುರ ಕಾಪಸಿಯ ಹೊಳೆಗೆ ಹೋಗುತ್ತಿದ್ದೆವು. ತಾತ್ಯಾ ಮೀನಿಗೆ ಆಹಾರ ಹಾಕಿ, ಬಲೆ ಬೀಸಿ, ಮೀನು ಹಿಡಿಯಲು ನನಗೂ ಕಲಿಸುತ್ತಿದ್ದ. ಅಪ್ಪನಿಗೆ ಇದೆಲ್ಲ ಹಿಡಿಸುತ್ತಿರಲಿಲ್ಲ. ತಾತ್ಯಾನನ್ನೂ "ಹುಳು-ಹುಪ್ಪಡಿ ಕೊಲ್ಲುವ ಮನುಷ್ಯ" ಎಂದು ಬಯ್ಯುತ್ತಿದ್ದ. ಒಮ್ಮೆ ಪಾಟೀಲರ ಹುಲ್ಲಿನ ಬಣವೆಯಲ್ಲಿ ಕಾಡು ಬೆಕ್ಕು ಅಡಗಿದೆಯೆಂಬ ಸುದ್ದಿ ಬಂತು. ನಾವೆಲ್ಲ ಅದನ್ನು ಹಿಡಿಯಲು ಓಡಿದೆವು. ಕೊನೆಗೆ ನಮ್ಮ ನಾಯಿ ಅದನ್ನು ಹಿಡಿಯಿತು. ನಾವೆಲ್ಲ ಬೆಕ್ಕನ್ನು ಹಿಡಿದುಕೊಂಡು ಖುಷಿಯಿಂದ ಮನೆಯ ಕಡೆಗೆ ಹೊರಟಾಗ, "ಎಂಥ ಹೊಲಸು ಜನರಪ್ಪ" ಎಂದು ಊರವರು ತಿರಸ್ಕಾರದಿಂದ ದಿಟ್ಟಿಸಿದರು. ಆದರೆ ಮನೆಗೊಯ್ದು ನೋಡಿದರೆ, ಅದು ಊರು ಬೆಕ್ಕೋ ಕಾಡು ಬೆಕ್ಕೋ ಎಂಬುದು ನಮಗೇ ತಿಳಿಯಲಿಲ್ಲ. ಕೊನೆಗೆ ಬೆಕ್ಕು ಸುಟ್ಟು ನಾವೆಲ್ಲ ತಿಂದೆವು.

ಅಪ್ಪ ಆಗಾಗ ಬುದ್ಧಿ ಮಾತು ಹೇಳುತ್ತಿದ್ದ. "ಊರವರು ನೀರು ತರಲು, ದೇವಸ್ಥಾನದಲ್ಲಿ ಪ್ರವೇಶಿಸಲು ಕೊಡುವುದಿಲ್ಲ. ನಾವೂ ಅವರಂತೆ ಬದುಕೋಣ," ಎನ್ನುತ್ತಿದ್ದ. ಇಂಥದ್ದರಲ್ಲಿ ಕಾಡು ಬೆಕ್ಕೆಂದು ಸುಳ್ಳು ಹೇಳಿ ಸಾಕಿದ ಬೆಕ್ಕನ್ನು ತಿಂದರೆಂದು ಊರು ತುಂಬ ಸುದ್ದಿ ಹಬ್ಬಿತು. ಅಪ್ಪ ತೋಟದ ಮಾಲಿಕನಲ್ಲಿ ಉಣ್ಣುತ್ತಿದ್ದ. ಒಮ್ಮೆ ರಾತ್ರಿ ಮನೆಗೆ ಬಂದಾಗ ಬೆಕ್ಕು ತಿಂದ ಕಥೆ ಅವನಿಗೂ ಗೊತ್ತಾಯಿತು. ಬೆಕ್ಕು ತಿಂದದ್ದಕ್ಕೆ ಅವ್ವನಿಗೆ 'ಉಠಾಬೈಸ್' ತೆಗೆಯಲು ಹಚ್ಚಿದ. ಮತ್ತು ಸಿಕ್ಕಾಪಟ್ಟೆ ಹೊಡೆದ. ತಾತ್ಯಾ ಓಡಿ ಬಂದು, "ನನ್ನ ಒಬ್ಬಾಕಿ ಮಗಳಿಗೆ ಯಾಕೆ ಹೊಡೀತಿ ?" ಎಂದಾಗ, ಕೆರಳಿದ ಅಪ್ಪ, ಕತ್ತಿಯಿಂದ ತಾತ್ಯಾನಿಗೆ ಹೊಡೆದ. ತಕ್ಷಣ ಅವ್ವ ಅಡ್ಡ ಬಂದಳು. ಅವ್ವನ ತಲೆ ಒಡೆಯಿತು. ಅವ್ವನ ತಲೆ ಒಡೆದದ್ದನ್ನು ಕಂಡ ದಾದಾ ಕಟ್ಟಿಗೆಯಿಂದ ಅಪ್ಪನನ್ನು ಥಳಿಸಿದ.

ಈ ಘಟನೆಯ ನಂತರ ಅಪ್ಪ ಮತ್ತು ತಾತ್ಯಾನ ಸಂಬಂಧ ಕೆಟ್ಟಿತು. ತಾತ್ಯಾ ಈಗ ಸೋತಿದ್ದ. ಅವನ ಕೈಕಾಲುಗಳು ಬಾತಿದ್ದವು. ಆತ ಜಾವಳಿಯ ಭಾವ ಮೈದುನನ ಕಡೆ ಹೋಗುವ ಇಚ್ಛೆ ವ್ಯಕ್ತಪಡಿಸಿದ. ಜಾವಳಿಗೆ ಹೋದ ಬಳಿಕ ದೇಹದ ಗಾಯ ಉಲ್ಬಣಿಸಿ ಆಸ್ಪತ್ರೆಯಲ್ಲಿ ಕೊನೆಯುಸಿರೆಳೆದ. ನಾನು ತಾತ್ಯಾನನ್ನು ನೆನಪಿಸಿಕೊಂಡು ಬಹಳ ಅತ್ತೆ. ಹರಿಚಂದ್ರನಿಗೆ ಮಲರೋಗ ಬಂತು. ನಾನು ತಿಪ್ಪೆಯಲ್ಲಿದ್ದ ಹರಕು ಚಪ್ಪಲಿ ತಂದು ಆತನ ಮುಖಕ್ಕೆ ಸ್ಪರ್ಶಿಸಿದೆ. ಆಗ ಅವನಿಗೆ ಪ್ರಜ್ಞೆ ಬಂತು.

# ಊಚಲ್ಯಾ

ಭಾಭಿ ಬೀಸೋ ಕಲ್ಲಿನ ಬಾಣ ಹೊಡೆಯುವು ದಕ್ಕಾಗಿ ಆಗಾಗ ಊರೊಳಗೆ ಹೋಗುತ್ತಿದ್ದಳು. ಅವ್ವ ಊರೊಳಗಿನ ಹಾಲು ಸಂಗ್ರಹಿಸಿ ಲಾತೂರಿಗೊಯ್ದು ಮಾರುತ್ತಿದ್ದಳು. ವ್ಯಾಪಾರ ಚೆನ್ನಾಗಿ ನಡೆದಿತ್ತು. ಅವ್ವ ಹಾಲು ಮಾರಿದ ದುಡ್ಡಿನಿಂದ ತಗಡು ಖರೀದಿಸಿ, ಹಳೆ ಜೋಪಡಿ ಕೆಡವಿ, ಕಲ್ಲುಗೋಡೆ ಕಟ್ಟಿಸಿ ಮಾಡು ಹೊದಿಸಿದಳು. ಬದಿಗೆ ಕೊಟ್ಟಿಗೆ ಕಟ್ಟಿಸಿ ಎಮ್ಮೆ-ಆಡು ಕಟ್ಟಿದಳು.

ಮೊದಲು ಮಳೆ ಬಂದಾಗ ಮನೆಯೊಳಗೆಲ್ಲಾ ನೀರು ತುಂಬಿ ರಾಡಿಯಾಗುತ್ತಿತ್ತು. ಅದರಲ್ಲೇ ದುಪ್ಪಟಿ ಹಾಸಿ ನಡುಗುತ್ತಾ ಮಲಗುತ್ತಿದ್ದೆವು. ನಾನು ತಿಂಗಳಿಗೊಮ್ಮೆ ಸ್ನಾನ ಮಾಡುತ್ತಿದ್ದೆ. ಹೊಲಸಿನಿಂದಾಗಿ ತಲೆ ತುಂಬಾ ಕಜ್ಜಿಯಾಯಿತು. ಕೀವು ತುಂಬಿತು. ತಲೆ ಕೆರೆದು ವಾಸನೆ ನೋಡುತ್ತಿದ್ದೆ. ಒಂದು ದಿನ ಅವ್ವನಿಗೆ ತೋರಿಸಿದೆ. "ಭಾಡ್ಯಾ, ಇಷ್ಟು ದಿನ ನನಗ್ಯಾಕೆ ಹೇಳಲಿಲ್ಲ ?. ಈಗ ಸಾಯಿ," ಎಂದು ಬಯ್ದಳು. ಕತ್ತರಿ ತಂದು ಕೂದಲನ್ನೆಲ್ಲಾ ಕತ್ತರಿಸಿ ನೋಡುತ್ತಾಳೆ, ತಲೆತುಂಬಾ ಹುಳು ! ಅವ್ವ ಗಾಬರಿಯಾದಳು. ಮಾರೆವ್ವನಿಗೆ ಸಿಟ್ಟು ಬಂದಿರಬೇಕು. "ಹೇ ಮಾರೆವ್ವಾ, ನನ್ನ ಮಗನಿಗೆ ಬ್ಯಾನಿ ಕಡಿಮೆ ಮಾಡು. ನಿನಗೊಂದು ಆಡು ಕೊಡ್ತೀನಿ," ಎಂದು ಬೇಡಿಕೊಂಡಳು.

ಅನಂತರ ಗಣಪ ಕುರುಬನನ್ನು ಕರೆಸಿದಳು. ಅವನು ನನ್ನ ತಲೆಗೆ ಫಿನೈಲ್ ಸುರಿದ. ಬೆಂಕಿ ಬಿದ್ದಂತಾಗಿ ನಾನು ಕಿರುಚಿದೆ. ಆಮೇಲೆ ಅವನ ಬಳಿಯಿದ್ದ ಕುರಿಗಳ ಹುಳ ತೆಗೆಯುವ ಚಿಮ್ಮಟಿಗೆಯಿಂದ ಸರಸರ ಹುಳ ತೆಗೆಯಲಾರಂಭಿಸಿದ. ಅನಂತರ ಅವ್ವ ಬಿಸಿನೀರಿನ ಸ್ನಾನ ಮಾಡಿಸಿ, ಬೇವಿನ ರಸದಲ್ಲಿ ಕರ್ಪೂರ, ಎಣ್ಣೆ ಕೂಡಿಸಿ, ತಲೆಗಾಯಕ್ಕೆ ಹಚ್ಚಿದಳು. ಮೊದಮೊದಲು ಉರಿಯುತ್ತಿದ್ದರೂ ಕೊನೆಗೆ ಸಮಾಧಾನವಾಯಿತು. ಅವ್ವ ಮಾರೆವ್ವನಿಗೆ ಕುರಿ ಕಡಿಯುವ ನಿಶ್ಚಯ ಮಾಡಿದಳು. ಹಿಂದೊಮ್ಮೆ ಅಜ್ಜಿ ತುಳಜಾಪುರದಿಂದ ತಂದ ಕಲ್ಲನ್ನು ನಮ್ಮ ಮನೆಯ ಪಕ್ಕದಲ್ಲಿ ಸ್ಥಾಪಿಸಿ ಮಾರೆವ್ವನ ಗುಡಿ ಸ್ಥಾಪಿಸಿದ್ದೆವು. ಒಂದು ಮಂಗಳವಾರ ಆಡನ್ನು ಸಿಂಗರಿಸಿ ರಣಹಲಗೆ ಬಾರಿಸುತ್ತ ಮೆರವಣಿಗೆಯಲ್ಲಿ ಗುಡಿಗೆ ಬಂದೆವು. ಆಡಿನ ರುಂಡವನ್ನು ಕತ್ತರಿಸಿ, ದೇವಿಯ ಮುಂದೆ ಇಡಲಾಯಿತು. ಧೂಪ, ದೀಪ ಹಚ್ಚಿ, 'ಆಯೀ ರಾಜಾ ಉಧೋ, ಉಧೋ' ಎಂದು ಕೂಗುತ್ತ ನಮಸ್ಕರಿಸಿದೆವು.

*** *** ***

ಅವ್ವ ಒಮ್ಮೆ ಜ್ವರದಿಂದ ಹಾಸಿಗೆ ಹಿಡಿದಳು. ಹಾಲಿನ ಮಾರಾಟ ನಿಂತುಹೋಗಿ, ಗಳಿಕೆ ಸೊನ್ನೆಯಾಯಿತು. ಸಾಕು ಪ್ರಾಣಿಗಳನ್ನೆಲ್ಲ ಒಂದೊಂದಾಗಿ ಮಾರಿ ಹೊಟ್ಟೆ ತುಂಬಿಸಿಕೊಳ್ಳ ತೊಡಗಿದೆವು. ದವಾಖಾನೆಗೆ ಹೋಗಲು ಹಣವಿರಲಿಲ್ಲ. ಅವ್ವನಿಗೆ ದೇವಿ ಅಂಗಾರ ತಂದು ಹಚ್ಚುತ್ತಿದ್ದೆವು. ಆಗ ಅವ್ವ ಜಾವಳಿಗೆ ಕರೆದೊಯ್ಯುವಂತೆ ಸೂಚಿಸಿದಳು. ಹೋಗುವಾಗ ಕೇಸರಿಬಾಯಿ, ಕಾಶೀಬಾಯಿಯನ್ನು ಕರೆದು, "ನಂದೇನ ಭರೋಸಾ ಇಲ್ಲ. ನನ್ನ ಮಗನ ಕಾಳಜಿ ತಗೊಳ್ರಿ," ಎಂದು ಹೇಳಿದಳು. ಆ ಮಾತು ಕೇಳಿ ನಾನು ಅಳಲಾರಂಭಿಸಿದೆ. ನನ್ನನ್ನು ಕರೆದೊಯ್ಯಲು ರೊಕ್ಕವಿಲ್ಲ. ಜಾವಳಿಗೆ ಹೋದ ಅವ್ವನ ಆರೋಗ್ಯ ಹದಗೆಟ್ಟಿತು. ಕೊನೆಗೊಂದು ದಿನ ಧೋಂಡಾಬಾಯಿ ಸತ್ತಳೆಂಬ ಸುದ್ದಿ ಜಾವಳಿಯಿಂದ ಬಂತು. ನಾನು ಹೊರಳಾಡುತ್ತಾ ಅಳಲಾರಂಭಿಸಿದೆ. ಹಣದ ಸಮಸ್ಯೆ ಇದ್ದುದರಿಂದ ಅಪ್ಪ, ದಾದಾ, ಅಣ್ಣಾ

ಇವರಷ್ಟೇ ಜಾವಳಿಗೆ ಹೋದರು. ನನಗೆ ಅವ್ವನ ನೆನಪು ಕಾಡುತ್ತಿತ್ತು. ನಾನು ಪರದೇಶಿಯಾದೆ ಎಂಬ ಕಾರಣಕ್ಕೆ ಎಲ್ಲರೂ ನನ್ನನ್ನು ಪ್ರೀತಿಸಲಾರಂಭಿಸಿದರು.

*** *** ***

ಕ್ರಮೇಣ ಅವ್ವ ಸತ್ತ ದುಃಖ ಕಡಿಮೆಯಾಯಿತು. ಆದರೆ ಅವ್ವನ ಸಾವಿನ ಬಳಿಕ ಮನೆಯ ಸ್ಥಿತಿ ತುಂಬಾ ಹದಗೆಟ್ಟಿತು. ತಂದೆ-ಮಕ್ಕಳಲ್ಲಿ ಯಜಮಾನಿಕೆಗಾಗಿ ಜಗಳ ಪ್ರಾರಂಭವಾಯಿತು. ಪರಿಸ್ಥಿತಿ ಎಷ್ಟು ಹದಗೆಟ್ಟಿತೆಂದರೆ, ಒಂದು ಹೊತ್ತಿನ ಊಟಕ್ಕೂ ಗತಿಯಿಲ್ಲದಂತಾಯಿತು. ಹೀಗಾಗಿ ದಾದಾ, ಅಣ್ಣಾ, ಭಾವೂ ಒಮ್ಮೊಮ್ಮೆ ತಂಡದವರೊಟ್ಟಿಗೆ ಹೋದರೆ, ಮತ್ತೊಮ್ಮೆ ಒಂಟಿಯಾಗಿಯೇ ಹೋಗುತ್ತಿದ್ದರು.

ನಾನೀಗ ಮತ್ತೆ ಶಾಲೆಗೆ ಹೋಗಲಾರಂಭಿಸಿದೆ. ಬಾಳಾಚಾರಿ ಗುರೂಜಿ ಹಾಕಿಕೊಟ್ಟ ಅಂಕಿಯನ್ನು ತಿದ್ದಿ ಬರೆಯುತ್ತಿದ್ದೆ. ಒಮ್ಮೊಮ್ಮೆ ರಾತ್ರಿ ಅಪ್ಪ ಮನೆಗೆ ಬಂದಾಗ, “ಏನೇನು ಕಲಿತೆ ?"ಎಂದು ಕೇಳುತ್ತಿದ್ದ. ನಾನು 'ಜನಗಣಮನ' ಅಥವಾ ಮಗ್ಗಿ ಹೇಳಿದರೆ ಖುಷಿಯಾಗುತ್ತಿದ್ದ. ನನ್ನ ಮಗ ಕಲಿತು ಮಾಸ್ತರನಾಗುತ್ತಾನೆ ಎಂಬ ಆನಂದ ಅಪ್ಪನದು.

ಶಾಲೆಗೆ ಹೋಗಲು ಪ್ರಾರಂಭಿಸಿದಂದಿನಿಂದ ನನ್ನಲ್ಲಿ ಸಾಕಷ್ಟು ಬದಲಾವಣೆಯಾಯಿತು. ದಿನಾಲು ಹಲ್ಲು ಉಜ್ಜಲಾರಂಭಿಸಿದೆ. ಪ್ರತಿ ರವಿವಾರ ಮಡಕೆ ತೊಳೆದು ಸ್ವಚ್ಛ ನೀರು ತುಂಬಿಡತೊಡಗಿದೆ. ಸಗಣಿ ತಂದು ಸಾರಿಸಲು ಪ್ರಾರಂಭಿಸಿದೆ. ಇದನ್ನೆಲ್ಲ ನೋಡಿ ಮನೆಯವರು ಸಂತೋಷಪಟ್ಟರು.

ಶ್ರಾವಣ ಮಾಸ ನಮ್ಮಪಾಲಿಗೆ ವನವಾಸ. ಹೊಟ್ಟೆ ತುಂಬಿಸಿಕೊಳ್ಳಲು ಗೆಣಸಿನ ಬಳ್ಳಿಯನ್ನೇ ತಿನ್ನುತ್ತಿದ್ದೆವು. ಎಲೆಗಳನ್ನು ಕುದಿಸಿ ತಿನ್ನುತ್ತಿದ್ದೆವು. ಒಮ್ಮೊಮ್ಮೆ ರಸ್ತೆಯ ಬದಿಯಲ್ಲಿ ಬೆಳೆದ ರಾಜಗೀರ ಸೊಪ್ಪನ್ನೇ ಕುದಿಸಿ ತಿನ್ನುತ್ತಿದ್ದೆವು. ಒಮ್ಮೊಮ್ಮೆ ನಾನು ಸ್ಮಶಾನಕ್ಕೆ ಹೋಗಿ ಯಾರಾದರೂ ನಿವಾಳಿಸಿ ಒಗೆದ ದೆವ್ವದ ನೈವೇದ್ಯವನ್ನು ತಿನ್ನುತ್ತಿದ್ದೆ. ಅದು ದೆವ್ವದ ಊಟವೆಂದು ಯಾರೂ ಅದನ್ನು ಮುಟ್ಟುತ್ತಿರಲಿಲ್ಲ. ಆದರೆ ನನ್ನ ಹೊಟ್ಟೆಯೊಳಗೆ ಬಿದ್ದ ಬೆಂಕಿಯಿಂದಾಗಿ ನನಗೆ ದೆವ್ವದ ಅಂಜಿಕೆಯಾಗುತ್ತಿರಲಿಲ್ಲ. ಒಮ್ಮೆ ಮನೆಯಲ್ಲಿ ಎಂಟ್ಹತ್ತು ದಿನಗಳಿಂದ ಉಪವಾಸ. ಆಗ ಅಪ್ಪ ಯಾರಿಂದಲೋ ಒಂದಾಣೆ ಸಾಲ ತಂದು, ಚಟಾಕು ಬೆಲ್ಲ ಖರೀದಿಸಿ, ಬೆಲ್ಲದ ನೀರು ಮಾಡಿ ಎಲ್ಲರಿಗೂ ಒಂದೊಂದು ಲೋಟ ಕೊಟ್ಟ. ಅಂದು ನಾನು ಅಪ್ಪನನ್ನು ತಬ್ಬಿಕೊಂಡು ಬಿಕ್ಕಿಬಿಕ್ಕಿ ಅತ್ತೆ.

*** *** ***

ನಾನು, ತುಳಸಿ, ಸಂಭಾ, ತುಕ್ಯಾ ಸೇರಿ ಸನಿಹದಲ್ಲೆಲ್ಲಾದರೂ ಮದುವೆ, ಸಮಾರಾಧನೆ ಇದ್ದರೆ ಊಟಕ್ಕೆ ಹೋಗುತ್ತಿದ್ದೆವು. ಒಮ್ಮೆ ಭೂಸನಿ ಪಾಟೀಲರ ಮಗನ ಮದುವೆಗೆ ಹೋಗಿದ್ದೆವು. ಸುತ್ತಮುತ್ತಲಿನ ಊರಿಗೆಲ್ಲಾ ಆಮಂತ್ರಣವಿತ್ತು. ಬೂಂದೀಲಾಡುವಿನ ಊಟ. ಶಾಲೆ ತಪ್ಪಿಸಿ ನಾನೂ ಅವರೊಂದಿಗೆ ಹೋದೆ. ಪಂಕ್ತಿಯಲ್ಲಿ ಕುಳಿತೆವು. ಉಂಡು ಅಲ್ಲಲ್ಲಿ ಸುತ್ತಾಡಿ ಎರಡನೇ ಬಾರಿ ಮತ್ತೆ ಕುಳಿತೆವು. ಎಲೆ ಮೇಲೆ ಬಡಿಸಿದ ಬೂಂದೀಲಾಡನ್ನು ಮೆಲ್ಲನೆ ಕಿಸೆಗೆ ಹಾಕಿ ಊಟದ ಬಳಿಕ ಹೊರಗೆ ನಿಂತ ತುಕ್ಯಾನಿಗೆ ತಂದೊಪ್ಪಿಸುತ್ತಿದ್ದೆವು. ಹೀಗೆ ಮೂರುನಾಲ್ಕು ಸಲ ಊಟಕ್ಕೆ

ಕುಳಿತಂತೆ ಮಾಡಿ ಸಾಕಷ್ಟು ಲಾಡು ಸಂಗ್ರಹಿಸಿ ದೆವು. ಅಷ್ಟರಲ್ಲಿ ಒಬ್ಬ ವ್ಯಕ್ತಿಗೆ ಸಂಶಯ ಬಂದು ನನ್ನ ಮೇಲೆ ಕಣ್ಣಿಟ್ಟ. ನಾನು ಪುನಃ ಊಟಕ್ಕೆ ಕುಳಿತಾಗ ಅವನು ತಕ್ಷಣ ಬಂದು ನನ್ನ ಕಿವಿ ಹಿಡಿದು ಎಬ್ಬಿಸಿ, ಎಲ್ಲರೆದುರೇ ಕೆನ್ನೆಗೆ ಬಾರಿಸಿ, "ಏ ಹುಡುಗಾ, ಎಲ್ಲಿಯಂವಾ ನೀ ? ಇದು ನಿಮ್ಮಪ್ಪನ ಮದ್ವಿ ಅಂತ ತಿಳ್ದೀಯೇನು ? ಎಷ್ಟು ಸಲ ಪಂಕ್ತ್ಯಾಗ ಕೂಡ್ತಿ ?" ಎಂದು ಜಬರಿಸಿ ಹೊರಗೆ ದಬ್ಬಿದ. ನನಗೆ ಹೊಡೆತ ಬಿದ್ದದ್ದು ನೋಡಿ ಉಳಿದವರೆಲ್ಲ ಪರಾರಿಯಾಗಿದ್ದರು. ನಾನು ಅಳುತ್ತ ಅವರನ್ನು ಸೇರಿಕೊಂಡೆ. ಮನೆ ಸಮೀಪ ಬಂದೊಡನೆ ನಮ್ಮ ಪಾಲಿನ ಲಾಡು ಹಂಚಿಕೊಂಡೆವು. ಯಾರೇ ಬಯ್ಯಲಿ, ಹೊಡೆ ಯಲಿ, ನನಗೆ ಏನೂ ಅನಿಸುತ್ತಿರಲಿಲ್ಲ. ತಿನ್ನಲು ಸಿಕ್ಕರೆ ಸಾಕೆಂದು ಹಪಹಪಿಸುತ್ತಿದ್ದೆ.

ನಮ್ಮ ಧನೇಗಾಂವಿನಲ್ಲಿ ನಡೆದ ಸಮಾರಾಧ ನೆಗೆ ಹೋಗುತ್ತಿದ್ದೆವು. ವಾಡೇದ ಹೊರಗೆ ನಿಂತು, "ನಮಗೂ ಬಡಿಸ್ರೆಪೋ" ಎಂದು ಜೋರಾಗಿ ಕಿರಿಚುತ್ತಿದ್ದೆವು. ನಮ್ಮ ಪಕ್ಕದಲ್ಲಿ ನಾಯಿಗಳೂ ಪತ್ರಾವಳಿಗಾಗಿ ಕಚ್ಚಾಡುತ್ತಿ ದ್ದವು. ಒಂದು ಕಡೆ ನಾಯಿಗಳ ಕಿರುಚಾಟ; ಇನ್ನೊಂದುಕಡೆ ನಮ್ಮ ಒದರಾಟ. ಉಳಿದವರ ಊಟ ಮುಗಿದ ಬಳಿಕ, ನಮ್ಮನ್ನು ಸಾಲಾಗಿ ನಿಲ್ಲಿಸಿ, ಹೋಳಿಗೆ ತುಂಡು, ಸಾರು, ಎಂಜ ಲನ್ನು ತಂದು ಹಾಕುತ್ತಿದ್ದರು. ನಾವು ಎಂಜಲು ತಿಂದು ಮತ್ತೆ ಬೇಡಲು ಹೋಗಿ ಬೈಸಿಕೊಳ್ಳುತ್ತಿ ದ್ದೆವು. ಮದುವೆಯ ಊಟದ ಬೆನ್ನು ಹತ್ತಿ ನಾನು ಆಗಾಗ ಶಾಲೆ ತಪ್ಪಿಸುತ್ತಿದ್ದೆ. ಗುರೂಜಿ ಬೆತ್ತದಿಂದ ಹೊಡೆಯುತ್ತಿದ್ದರು. ಅಂತೂ ಕೊನೆಗೊಮ್ಮೆ ನಾಲ್ಕನೇ ಕ್ಲಾಸಿನ ಪರೀಕ್ಷೆ ಬಂತು. ಪಾಸಾದರೆ ನೌಕರಿ ಸಿಗುತ್ತದೆ ಎಂದು ಹಗಲಿರುಳೂ ಓದುತ್ತಿದ್ದೆ.

ಒಂದು ಸಲ ದಾದಾ, ಭಾವು, ಅಣ್ಣಾ ಎಲ್ಲರೂ ಸೇರಿ ತುಳಜಾಪುರಕ್ಕೆ ಕಳ್ಳತನ ಮಾಡಲು ಹೋದರು. ನನಗೆ ರಜೆಯಿದ್ದುದರಿಂದ ನಾನೂ ಬರುತ್ತೇನೆ ಎಂದು ಹಟ ಹಿಡಿದೆ. ಅವರು ಪೊಲೀಸರ ಬೆದರಿಕೆ ಹಾಕಿದರು. ಇವರೊಂದಿಗೆ ಕಳ್ಳತನಕ್ಕೆ ಹೋದರೆ ರುಚಿರುಚಿ ಯಾದ ತಿಂಡಿ ತಿನ್ನಬಹುದಲ್ಲ ಎಂಬ ಆಶೆ ಯಿಂದ ನಾನೂ ಹೊರಟೆ. ಲಾತೂರ ರೇಲ್ವೆ ಸ್ಟೇಶನ್ನಿನಲ್ಲಿ ದಾದಾನ ಪರಿಚಯದ ಪೊಲೀಸ ಭೆಟ್ಟಿಯಾಗಿ, "ಮಾಣಕ್ಯಾ, ಎಲ್ಲಿಗೆ ಹೊಂಟಿ ?" ಎಂದು ಪ್ರಶ್ನಿಸಿದ. ದಾದಾ ಗಡಬಡಿಸಿದ. ಉಳಿದವರು ಸಂಡಾಸಿನಲ್ಲಿ ಅಡಗಿ ಕುಳಿತರು. ನಾನು ದೂರ ಹೋಗಿ ನಿಂತೆ. ಆಗ ಪೊಲೀಸ, "ಸಾಲ್ಯಾ, ನನಗೆ ಸುಳ್ಳು ಹೇಳ್ತೀಯೇನು ? ಈ ಗಾಡಿ ಹತ್ತಿ ತುಳಜಾಪುರಕ್ಕೆ ಹೊಂಟೀರಿಲ್ಲೊ ? ಉಳಿದ ಸಾಥೀದಾರರೆಲ್ಲದಾರು ?" ಎಂದು ಗದರಿಸಿದ. "ಬ್ಯಾಡ್ರಿ ಸಾಹೇಬರ, ನಿಮ್ಮ ಕಾಲಿಗೆ ಬೀಳ್ತೀನಿ" ದಾದಾ ಗೋಗರೆದ. ಆದರೂ ಪೊಲೀಸ ಬಿಡಲಿಲ್ಲ. ಕಿಸೆಯಲ್ಲಿದ್ದ ಮೂವತ್ತು ರೂಪಾಯಿ ಕೊಟ್ಟ ಬಳಿಕವೇ ಹೋಗಲು ಅನುಮತಿ ಕೊಟ್ಟ. ಇದನ್ನೆಲ್ಲ ನೋಡಿ, ನಾನು ಹೆದರಿ ನಡುಗಿದೆ. ಅಷ್ಟರಲ್ಲಿ ಭಗವಾನ, ಅಣ್ಣಾ, ಭಾವು, ಇವರೆಲ್ಲ ಸಂಡಾಸಿನಿಂದ ಹೊರಬಿ ದ್ದರು. ಗಾಡಿಯೂ ಬಂತು. ನಾವೆಲ್ಲ ಅವಸರ ದಿಂದ ಗಾಡಿ ಹತ್ತಿದೆವು.

ತುಳಜಾಪುರ ತಲುಪಿದಾಗ ಅಲ್ಲಿಯ ಭಾರೀ ಜನದಟ್ಟಣೆ ನೋಡಿ ದಾದಾನಿಗೆ ಖುಷಿಯಾ ಯಿತು. ಅಲ್ಲಿ ನಮ್ಮಂತೆ ಕಳ್ಳತನ ಮಾಡಲು ಅನೇಕ ತಂಡಗಳು ಬಂದಿದ್ದವು. ಜಾವಳಿಯ

ಸಂತಾರಾಮ ಭಾವನೂ ಬಂದಿದ್ದ. ನಾನು, ಸಂಭಾ ದೇವಸ್ಥಾನಕ್ಕೆ ಹೋಗಿ ದೇವಿಯ ದರ್ಶನ ಮಾಡಿ ಬಂದೆವು. ಸಂಭಾ ಜನರ ಗಂಟಿನ ಮೇಲೆ ಲಕ್ಷ್ಯವಿಟ್ಟ, ಭಾವು ದೇವಸ್ಥಾನಕ್ಕೆ ಹೋಗಿ ಹೊಸ ಚಪ್ಪಲಿ ಹಾರಿಸಿಕೊಂಡು ಬಂದ, ದಾದಾ ಬಸ್‌ಸ್ಟ್ಯಾಂಡಿಗೆ ಹೋಗಿ ಎರಡು ನೂರುರೂಪಾಯಿ ಪಾಕೀಟು ಹಾರಿಸಿದ. ಅಣ್ಣಾ, ಭಾವು ಸೇರಿ ನಾಲ್ಕೈದು ಜೋಡಿ ಚಪ್ಪಲಿ-ಬೂಟು, ಸೀರೆ, ಧೋತರ, ಚಾದರಿನ ಗಂಟು ಹೊಡೆದರು. ಆಮೇಲೆ ನಾವೆಲ್ಲ ದೇವಸ್ಥಾನದ ಕೆರೆಯ ಬಳಿ ಹೋದೆವು. ಅಲ್ಲಿ ಸ್ನಾನ ಮಾಡಲು ಶ್ರೀಮಂತ ಹೆಂಗಸರೂ ಬಂದಿದ್ದರು. ಅವರ ಕೊರಳಲ್ಲಿದ್ದ ಬಂಗಾರ ನಮ್ಮ ಗಮನ ಸೆಳೆಯಿತು. ಅವರು ತಮ್ಮ ಕೊರಳಲ್ಲಿದ್ದ ಆಭರಣಗಳನ್ನು ಗಂಟು ಕಟ್ಟಿ, ಅದರ ಮೇಲೊಂದು ಬುಟ್ಟಿಯಿಟ್ಟು, ಬುಟ್ಟಿಯ ಮೇಲೆ ಒಬ್ಬ ಮುದುಕಿಯನ್ನು ಕೂಡ್ರಿಸಿ ಸ್ನಾನಕ್ಕೆ ಹೋದರು. ದಾದಾ ಸಂತಾರಾಮನಿಗೆ ವಿಷಯ ತಿಳಿಸಿದ. ಅವನು ಸ್ವಲ್ಪ ಯೋಚಿಸಿ ನಂತರ ಒಂದು ಕಿಲೋ ಫೇಡೆ ತಂದ. ಮುದುಕಿಯ ಎದುರು ಸಾಲಾಗಿ ನಿಲ್ಲುವಂತೆ ನಮಗೆಲ್ಲ ಸೂಚಿಸಿ ಎಲ್ಲರಿಗೆ ಫೇಡೆ ಹಂಚಿದ. ಮುದುಕಿ ಸ್ವಲ್ಪವೂ ಅಲುಗಾಡಲಿಲ್ಲ. ಬಳಿಕ ಅಂಗಡಿಗೆ ಹೋಗಿ ನೂರು ರೂಪಾಯಿ ಚಿಲ್ಲರೆ ತಂದ. ಮುದುಕಿಯ ಸನಿಹದಿಂದ ಹಾದು ಹೋಗುವಾಗ ಒಂದು ನೋಟು ಚೆಲ್ಲಿದ; ಮುದುಕಿ ಅಲುಗಾಡಲಿಲ್ಲ. ಭಾವ ಮತ್ತೆರಡು ಐದರ ನೋಟು ಚೆಲ್ಲಿ ಮುಂದೆ ನಡೆದ. ಮುದುಕಿ ಗಡಬಡಿಸಿ ಥಟ್ಟನೆ ಮೇಲೆದ್ದು ಒಂದೊಂದೇ ನೋಟುಗಳನ್ನು ಆರಿಸುತ್ತ ಹೋದಳು. ಅಷ್ಟರಲ್ಲಿ ದಾದಾ ಬುಟ್ಟಿಯ ಕೆಳಗಿನ ಗಂಟು ಅಪಹರಿಸಿದ. ಮುದುಕಿ ನೋಟು ಸಿಕ್ಕ ಖುಷಿಯಲ್ಲಿ ತಿರುಗಿ ಬಂದು ಬುಟ್ಟಿಯಮೇಲೆ ಕುಳಿತಳು. ಸ್ನಾನ ಮುಗಿಸಿ ಮರಳಿ ಬಂದ ಹೆಂಗಸರು ಸೀರೆಯುಟ್ಟು ಆಭರಣ ಹಾಕಿಕೊಳ್ಳಬೇಕೆಂದು ಮುದುಕಿಯನ್ನೆಬ್ಬಿಸಿ ಬುಟ್ಟಿ ಎತ್ತಿದರೆ ಅಲ್ಲೇನಿದೆ? ಗಾಬರಿಯಾದ ಹೆಂಗಸರು ಎದೆ ಎದೆ ಬಡಿದುಕೊಂಡು ಅಳಲಾರಂಭಿಸಿದರು. ಮುದುಕಿಯೂ ಅಳುತ್ತ ಹೊರಳಾಡಿದಳು. ಇದನ್ನು ಕಂಡು ಭಾವ ಸನ್ನೆ ಮಾಡಿದ. ನಾವೆಲ್ಲ ಅಲ್ಲಿಂದ ಕಂಬಿಕಿತ್ತೆವು.

ಊರು ಸೇರಿದ ಮೇಲೆ ಭಾವ ಹಂದಿಯೂಟ ಹಾಕಿದ. ಹೆಂಡ ತರಿಸಿದ. ಆಭರಣಗಳನ್ನು ಎಲ್ಲರೂ ಹಂಚಿಕೊಂಡರು. ದಾದಾನ ಪಾಲಿಗೊಂದು ಕಂಠಿಸರ ಮತ್ತು ಉಂಗುರ ಬಂತು. "ಲಕ್ಯಾನ ಕಾಲ್ಗುಣ ಛಲೋ ಅದ," ಎಂದು ದಾದಾ ಅಪ್ಪನಿಗೆ ಹೇಳಿದ. ಆದರೆ ಅಪ್ಪ ಹೇಳಿದ, "ನೀವು ಮೂರು ಜನ ಕಳ್ಳತನಕ್ಕೆ ಹೋಗ್ತೀರಿ ಸಾಕು. ಅವನಾದ್ರೂ ಸಾಲೀ ಕಲೀಲಿ. ಲಕ್ಯಾ, ನೀ ಮಾತ್ರ ಸಾಲಿ ತಪ್ಪಿಸಿ ಹೋಗಬ್ಯಾಡ."

ನನ್ನ ಅಣ್ಣಂದಿರು ಕಳ್ಳತನ ಪ್ರಾರಂಭಿಸಿದಾಗಿನಿಂದ ನಮ್ಮ ಮನೆಗೆ ಬಹಳ ಜನ ಬರಲಾರಂಭಿಸಿದರು. ಕಳ್ಳಮಾಲು ಪಾಲು ಮಾಡುವಾಗ ಕೆಲವೊಮ್ಮೆ ಮಾತಿಗೆ ಮಾತು ಬೆಳೆದು ಜಗಳ, ಹೊಡೆದಾಟ ನಡೆಯುತ್ತಿತ್ತು. ಕಳ್ಳ ಮಾಲನ್ನು ಯಾರಿಗೂ ಹೇಳದೆ ಮನೆಗೆ ಒಯ್ದರೆ ಜಾತಿ ಪಂಚಾಯತಿ ಸೇರಿಸಿ ವಿಚಾರಣೆ ನಡೆಸುತ್ತಿದ್ದರು. ನಮ್ಮಲ್ಲಿ ನಾವೇ ಪಾಟೀಲರು. ಊರ ಹೊರಗಿನ ಕುರುಬನೊಬ್ಬನ ತೋಟದಲ್ಲಿ ಪಂಚಾಯತಿ ಸೇರುತ್ತಿತ್ತು. ಆದಿನ ಪಂಚರು ಅಂಗಿ, ಧೋತರ, ಹೆಗಲಿಗೆ ಉಪ್ಪರಣೆ ತೊಟ್ಟು ನಿರ್ಣಯ ಕೊಡುತ್ತಿದ್ದರು. ಆರೋಪ ಸಿದ್ಧ

ವಾದ ಬಳಿಕ ಗುನ್ಹೆಗಾರನಿಗೆ ಐನೂರರಿಂದ ಸಾವಿರದವರೆಗೆ ದಂಡ ವಿಧಿಸಲಾಗುತ್ತದೆ.

* * * * * * *

ಒಮ್ಮೆ ಸಲಗೆರೆಯ ಶಂಕರ ತನ್ನ ಮಗಳನ್ನು ಹೆಂಡತಿಯಂತೆ ಉಪಭೋಗಿಸಿದ್ದ. ಈ ಸುದ್ದಿ ಜಾತಿಯವರಿಗೆ ಗೊತ್ತಾಗಿ ರಂಪಾಟವಾಯಿತು. ನಮ್ಮವರ ಅತಿ ದೊಡ್ಡ ಪಂಚಾಯ್ತಿ ನಡೆಯುವ ಸ್ಥಳ ಕವಠೆ. ಅಲ್ಲಿ ನಮ್ಮ ಜಾತಿಯ ಮಾಸ್ತರ ಕಾಕಾ ಇದ್ದಾರೆ. ಅಲ್ಲಿ ಹದಿನೈದು ದಿನ ಪಂಚಾಯತಿ ನಡೆಸಿ, ಮಗಳನ್ನು ಹೆಂಡತಿಯಂತೆ ನಡೆಸಿಕೊಂಡ ಶಂಕರನಿಗೆ, ಎರಡು ವರ್ಷ ಬಹಿಷ್ಕಾರ ಹಾಗೂ ಶಂಕರನ ಮೀಸೆಯನ್ನು ಮಗಳ ಮೂತ್ರದಲ್ಲಿ ಅದ್ದಿ ಬೋಳಿಸುವುದು ಎಂಬ ನಿರ್ಣಯವನ್ನು ಕೈಕೊಳ್ಳಲಾಯಿತು. ಈ ಕಾಲಾವಧಿಯಲ್ಲಿ ಯಾರಾದರೂ ಅವನನ್ನು ಮುಟ್ಟಿದರೆ ಇಲ್ಲವೆ ಊಟ ಹಾಕಿದರೆ ಅಂಥವರಿಗೂ ಬಹಿಷ್ಕಾರ ಎಂದು ಜಾತಿಯವರಿಗೆಲ್ಲ ತಿಳಿಸಲಾಯಿತು.

ಒಮ್ಮೆ ಭಾಡಗಾಂವದ ತಂಡದೊಡನೆ ಪಂಥರಾಪುರದ ಜಾತ್ರೆಗೆ ಹೋದೆವು. ಅಲ್ಲಿ ಭಾರೀ ಪ್ರಮಾಣದ ಜಾತ್ರೆ ಸೇರುತ್ತದೆ. ಆದರೆ ಪೊಲೀಸರು ಧ್ವನಿ ವರ್ಧಕದ ಮೂಲಕ ಕಳ್ಳರ ಬಗ್ಗೆ ಎಚ್ಚರಿಕೆ ಕೊಟ್ಟದ್ದರಿಂದ ನಮ್ಮ ಯಾವ ಆಟವೂ ನಡೆಯಲಿಲ್ಲ. ನಮ್ಮ ಜಾತಿಯವರೆಲ್ಲ ಒಂದೆಡೆ ಸೇರಿ ಚರ್ಚೆ ಮಾಡಲಾರಂಭಿಸಿದರು. ಯಾತ್ರಿಕರೆಲ್ಲ ಜಾಗರೂಕರಾಗಿದ್ದರು. ಗಂಟು ಬಿಟ್ಟು ಅಲುಗಾಡುತ್ತಿರಲಿಲ್ಲ. ಕಿಸೆಯೊಳಗೆ ಕೈಹಾಕಿಕೊಂಡೆ ತಿರುಗಾಡುತ್ತಿದ್ದರು. ಜಾವಳಿಯ ಭಾವ ಹಣೆಗೆ ಗಂಧ, ತಲೆಗೆ ರುಮಾಲು ಸುತ್ತಿದ್ದ. ದಾದಾ, ಅಣ್ಣಾ ತುಳಸೀ ಮಾಲೆ, ಜನಿವಾರ ಧರಿಸಿದ್ದರು. ಕೊನೆಗೆ ನಮ್ಮ ಸಂತಾರಾಮ ಭಾವಾ ಚಂದ್ರಭಾಗಾ ನದೀದಡದಲ್ಲಿ ನಿಂತು ತಾಳ ಹಾಕುತ್ತಾ ಕೀರ್ತನೆ ಆರಂಭಿಸಿದ. ಆಗ ನಮ್ಮವರೆಲ್ಲ ಅವನ ಎದುರಿಗೆ ನಿಂತು ಚಪ್ಪಾಳೆ ತಟ್ಟುತ್ತಾ ಕುಣಿಯಲು ಪ್ರಾರಂಭಿಸಿದರು. ಆದರೆ ಜನರು ಎಚ್ಚರಿಕೆಯಿಂದ ಇದ್ದುದರಿಂದ ನಮಗೆ ಗಳಿಕೆಯಾಗದೆ ಬೇಸರವಾಯಿತು. ಅಷ್ಟರಲ್ಲಿ ಭಾವು ಮತ್ತೊಂದು ಉಪಾಯ ಮಾಡಿದ! ಸೋಪಾನ ದಾದಾನನ್ನು ಸ್ಟೇಶನ್ನಿಗೆ ಕಳಿಸಿ ಮಿರಜ, ಲಾತೂರ ಗಾಡಿ ನಾಲ್ಕು ಗಂಟೆಗಿದೆ ಎಂಬುದನ್ನು ಖಾತ್ರಿ ಮಾಡಿಕೊಂಡ. ಮತ್ತು ತನ್ನ ಜನರಿಗೆ, "ನೋಡ್ರಿ, ಗಾಡಿ ಬಿಡಾಕ ಅರ್ಧತಾಸು ಐತಿ. ನಾನೊಂದು ಐಡಿಯಾ ಮಾಡ್ತೀನಿ. ನೀವು ಮಾತ್ರ ಕೈಗೆ ಸಿಕ್ಕ ಗಂಟು ಗಂಟು ತಗೊಂಡ ಓಡ್ರಿ," ಎಂದು ಹೇಳಿದ. ನಮ್ಮ ಜನ, ಚಂದ್ರಭಾಗಾ ನದಿ ತೀರಕ್ಕೆ ಹೋದರು. ಸಂತರಾಮ ಕೆಲಜನರೊಡನೆ ಸೇರಿ ಸರಿಯಾಗಿ ಮೂರೂ ಮುಕ್ಕಾಲುಗಂಟೆಗೆ, "ನದಿಗೆ ಮಹಾಪೂರ ಬಂದೈತಿ, ಎಲ್ಲರೂ ಓಡ್ರಿ, ಓಡ್ರಿ," ಎಂದು ಕೂಗಿದ. ಉಳಿದವರೂ ಜೋರಾಗಿ ಕೂಗಿ ಗಾಬರಿಯಾದವರಂತೆ ನಟಿಸಿದರು. ಜನ ಇದನ್ನು ನಿಜವೆಂದು ನಂಬಿ, ಗಂಟು ಮೂಟೆ ಹಿಡಿದು ಓಡಲಾರಂಭಿಸಿದರು. ನದಿಯಲ್ಲಿ ಸ್ನಾನ ಮಾಡುತ್ತಿದ್ದವರೂ ಅರ್ಧಕ್ಕೆ ಬಿಟ್ಟು ಓಡಲಾರಂಭಿಸಿದರು. ನಮ್ಮವರು ಉಳಿದವರನ್ನು ಗಾಬರಿಗೊಳಿಸುತ್ತ, "ಓಡಿರಿ ಓಡಿರಿ," ಎಂದು ಓಡಿಸಿದರು. ಯಾತ್ರಿಕರು ಜೀವ ಉಳಿದರೆ ಸಾಕೆಂದು ಗಂಟು ಮೂಟೆ ಬಿಟ್ಟೇ ಓಡಲಾರಂಭಿಸಿದರು. ನಮ್ಮ ಉಚಲ್ಯಾ ಜನ, ಮುದುಕರಿಗೆ, ಶ್ರೀಮಂತರಿಗೆ ಸಹಾಯ ಮಾಡುವ ನೆಪದಲ್ಲಿ ಅವರ ಗಂಟು-ಪೆಟ್ಟಿಗೆ ಹೊತ್ತುಕೊಂಡು ಜನಸಂದಣಿಯಲ್ಲಿ ಮಾಯ

ವಾದರು. ನಮ್ಮವರೆಲ್ಲ ಸರಸರ ರೈಲು ಏರಿದ ಕೆಲವೇ ನಿಮಿಷಗಳಲ್ಲಿ ರೈಲು ಸ್ಟೇಶನ್ನು ಬಿಟ್ಟಿತು. ನಮ್ಮವರೆಲ್ಲ ಪಾಂಡುರಂಗನ ಮಹಿಮೆಯನ್ನು ಕೊಂಡಾಡಿದರು. ಪ್ರಾಣಾಪಾಯಕ್ಕೆ ಹೆದರಿ ಓಡುತ್ತಿದ್ದ ಎಷ್ಟೋ ಯಾತ್ರಿಕರ ಕಿಸೆ ಹೊಡೆದರು. ಚಪ್ಪಲಿ ಕದ್ದರು. ಹೆಂಗಸರ ಕೊರಳ ಹಾರ ಅಪಹರಿಸಿದರು. ಕೊನೆಗೆ ನಾವೆಲ್ಲ ಜಾವಳಿ ತಲುಪಿ ಕದ್ದ ಮಾಲು ಹಂಚಿಕೊಂಡೆವು. ಕೆಲವು ಬುತ್ತಿಗಂಟು ಸಿಕ್ಕವು. ನಾವೆಲ್ಲ ಖುಷಿಯಿಂದ ಹೊಟ್ಟೆತುಂಬ ಊಟ ಮಾಡಿದೆವು.

** ** **

ನಾನೊಮ್ಮೆ ಶಾಲೆ ಬಿಟ್ಟ ಬಳಿಕ ರೊಟ್ಟಿಗಂಟು ಹಿಡಿದು ಅಪ್ಪನಿಗೆ ಕೊಡಲು ತೋಟಕ್ಕೆ ಹೊರಟಿದ್ದೆ. ಎದುರಿಗೆ ಸೈಕಲ್ಲೇರಿ ಪೊಲೀಸರು ಬರುವುದು ಕಾಣಿಸಿತು. ನಾನು ಗಾಬರಿಯಾಗಿ ಪಕ್ಕದಲ್ಲಿದ್ದ ಕರೀಮ ಚಾಚಾನ ಹೊಲಕ್ಕೋಡಿ ಅಲ್ಲಿದ್ದ ಔಡಲ ಗಿಡದ ಹಿಂದೆ ಅಡಗಿಕೊಂಡೆ. ಬುತ್ತಿಯಗಂಟು ಎಲ್ಲಿ ಬಿತ್ತೋ ಗೊತ್ತಾಗಲಿಲ್ಲ. ಆದರೆ ಹಾದಿಯ ಮೇಲೆ ಬಿದ್ದ ಬುತ್ತಿಯ ಗಂಟು ಪೊಲೀಸರ ಕಣ್ಣಿಗೆ ಬಿತ್ತು. ಅವರು ದಿನ್ನೆ ಏರಿ ಸುತ್ತಲೂ ನೋಡಿದರು. ನಾನು ಸತ್ತವನಂತೆ ಬಿದ್ದುಕೊಂಡಿದ್ದರೂ ಅವರ ಕಣ್ಣಿಗೆ ಬಿದ್ದೆ. ಒಬ್ಬ ಪೊಲೀಸ ನನ್ನನ್ನು ಹಿಡಿದು ಎಬ್ಬಿಸಿ, "ಯಾರು ನೀನು ? ಧನೇಗಾಂವಿನವನೇನು ?" ಎಂದು ಪ್ರಶ್ನಿಸಿದ.

ನಾನು ಹೌದೆಂದು ಹೇಳಿದೆ. "ಯಾರ ಪೈಕಿ ?" ಎಂದಾಗ, "ಉಚಲ್ಯಾರ ಪೈಕಿ," ಎಂದೆ. ತಕ್ಷಣ ಕೆನ್ನೆಗೆರಡು ಬಾರಿಸಿದ. ನಾನು ಚಡ್ಡಿಯೊಳಗೆ ಉಚ್ಚೆ ಹೊಯ್ದೆ. "ನಾರ್‍ಯಾ, ಮಾಣಕ್ಯಾ ಎಲ್ಲದಾರ ಹೇಳು ? ಮಾಣಕ್ಯಾ ನಿನಗೇನಾಗಬೇಕು ?" ಎಂದು ಬೆದರಿಸಿದ. 'ಅಣ್ಣ' ಎಂದೆ. ಮತ್ತೊಮ್ಮೆ ಕೆನ್ನೆಗೆ ಬಾರಿಸಿದ. "ನೀನು ಕಳ್ಳನ ತಮ್ಮ ನಡಿ, ಊರಾಗ," ಎಂದು ಎಳೆದುಕೊಂಡು ಹೊರಟ. ನಾನು, "ಸಾಹೇಬ್ರ ನಾನು ಕಳ್ಳ ಅಲ್ರಿ, ನಾನು ಸಾಲಿಗೆ ಹೋಗ್ತೇನ್ರಿ," ಎಂದು ಕಳಕಳಿಯಿಂದ ಬೇಡಿಕೊಂಡೆ. ಕೆರಳಿದ ಪೊಲೀಸ, "ಕಳ್ಳ ಸೂಳೇ ಮಗ್ನ, ಎಂದಾದರೂ ನಿಮ್ಮಪ್ಪ ಸಾಲಿ ಕಲ್ತಾನೇನು ? ನಡಿ, ನಿನ್ನ ಜೇಲಿನಾಗ ಹಾಕ್ತೇನಿ. ಅಲ್ಲೇ ಸಾಲಿ ಕಲಿಯುವಂತಿ," ಎಂದು ಜಬರಿಸಿ ಎಳೆದುಕೊಂಡು ಹೊರಟ.

"ನಾರ್‍ಯಾನ ಮನಿ ತೋರಿಸು," ಎಂದ. ನಾನು ತೋರಿಸಿದೆ. ನಾರ್‍ಯಾನ ಅಪ್ಪನಿಗೆ, "ನಾರ್‍ಯಾ ಎಲ್ಲಿ ?" ಎಂದು ಕೇಳಿದ. "ಅಂವ ಊರಾಗ ಇಲ್ಲರಿ ಸಾಹೇಬರ, ಎಂದದ್ದೇ ತಡ, ಸಿಟ್ಟಿಗೆದ್ದ ಪೊಲೀಸ, ಛಾವಣಿ ಕಿತ್ತು ಹೊಡೆಯಲಾರಂಭಿಸಿದ. ಅವನ ಹೆಂಡತಿ ನಡುವೆ ಬಂದಳು. ಅವಳಿಗೂ ಹೊಡೆತ ಬಿತ್ತು. ಪೊಲೀಸರು ಒಳಗೆ ಹೋಗಿ ಎಲ್ಲ ಕಿತ್ತಾಡಿದರು. ಏನೂ ಸಿಗಲಿಲ್ಲ. ನಾರ್‍ಯಾನ ಅಪ್ಪನಿಗೆ ಪಂಚಾಯತಿ ಕಛೇರಿಗೆ ಬರಲು ಹೇಳಿ, "ಏ ಹುಡುಗಾ, ನಡೀ, ಮಾಣಕ್ಯಾನ ತೋರಿಸು," ಎಂದು ನನ್ನನ್ನು ಮನೆಗೆ ಕರೆದೊಯ್ದರು. ಪೊಲೀಸರು ಮನೆಯಲ್ಲಿ ಪ್ರವೇಶಿಸಿದವರೆ ಅವ್ವನ ಸೀರೆ ಎಳೆದು, "ಮಾಣಕ್ಯಾ ಎಲ್ಲದಾನ ಹೇಳು ?" ಎಂದು ಹೊಡೆಯಲಾರಂಭಿಸಿದರು. ನಾನು ಬಿಕ್ಕಿಬಿಕ್ಕಿ ಅಳಲಾರಂಭಿಸಿದೆ. ನಮ್ಮವ್ವ ಎಂದೂ ಕಳ್ಳತನ ಮಾಡಿರಲಿಲ್ಲ. ಆದರೆ ಮನೆಗೆ ಬಂದ ಪೊಲೀಸರು ಆಕೆಯನ್ನು ಮೊದಲು ಥಳಿಸುತ್ತಿದ್ದರು. ಜನ ಮಜ ನೋಡುತ್ತಾ ನಿಲ್ಲುತ್ತಿದ್ದರು. ಅಂದು ಅವ್ವ, "ನಾವ್ಯಾರೂ ಕಳ್ಳತನ ಮಾಡಿಲ್ಲರಿ. ನಮ್ಮ ಹುಡ್ಗ ಸಾಲಿಗೆ ಹೋಗ್ತಾನ. ಅವನನ್ನು ಬಿಟ್ಟುಬಿಡಿರಿ," ಎಂದು ಪ್ರಾರ್ಥಿಸಿದಳು.

# ಉಚಲ್ಯಾ

ಅವ್ವ ಪೊಲೀಸರ ಕಾಲಿಗೆ ಬಿದ್ದು ಹೊರಳಾಡುತ್ತಿದ್ದಾಗ, ಪೊಲೀಸನೊಬ್ಬ ಬೂಟುಗಾಲಿನಿಂದ ಅವಳನ್ನು ಒದ್ದು ದೂಡಿದ." ನಿನ್ನೆ ಲಾತೂರ ಪ್ಯಾಟ್ಯಾಗ ಐನೂರು ರೂಪಾಯಿ ಕಳವು ಆಗೇದ. ನಿನ್ನ ಹುಡ್ಗ ರೊಕ್ಕ ಕದ್ದಾನ. ಐನೂರು ರೂಪಾಯಿ ಕೊಟ್ರೆ ಸರಿ. ಇಲ್ಲದಿದ್ರ ಎಲ್ಲಾರನ್ನೂ ಹಿಡಿದು ಜೇಲಿಗೆ ಹಾಕ್ತೇವಿ," ಎಂದು ಅಬ್ಬರಿಸಿದ. "ನಾವು ಪೊಲೀಸ ಪಾಟೀಲರ ಮನ್ಯಾಗ ಇರ್ತೇವಿ. ಐನೂರು ರೂಪಾಯಿ ತಗೊಂಡ ಬಾ," ಎಂದು ತಾಕೀತು ಮಾಡಿ ಹೋದರು. ಅಪ್ಪ ತೋಟದ ಮಾಲೀಕರ ಕೈಕಾಲು ಬಿದ್ದು ವರ್ಷದ ಸಂಬಳ ತಂದ. ಅವ್ವ ಸಾಹುಕಾರರ ಕಡೆಯಿಂದ ವಾರಕ್ಕೆ ಐದು ರೂಪಾಯಿ ಬಡ್ಡಿಯಂತೆ ಸ್ವಲ್ಪ ಹಣ ತಂದಳು. ಅಷ್ಟರಲ್ಲಿ ಪೊಲೀಸರು ಹೆಂಡ ಕುಡಿಯುತ್ತ ಬಂದು, ಎಲ್ಲರನ್ನೂ ಜೈಲಿಗೆ ಹಾಕ್ತೇವಿ ಎಂದು ಕೂಗಾಡಿದರು. ಮನೆಯೊಳಗಿನ ಪಾತ್ರೆ-ಪರಡೆ ಹೊದಿಕೆಗಳನ್ನು ಚೀಲಕ್ಕೆ ತುರುಕಿದರು. ಆಗ ಅಪ್ಪ, "ಸಾಹೇಬರ, ನಾವು ಕಳ್ಳತನ ಮಾಡಿಲ್ಲರಿ. ನಮ್ಮ ಮ್ಯಾಲ ಕೇಸ ಹಾಕಬ್ಯಾಡರಿ," ಎಂದು ಬಿನ್ನವಿಸಿ, ಸಂಗ್ರಹಿಸಿದ ಹಣವನ್ನೆಲ್ಲ ಅವರ ಕೈಗಿಟ್ಟು ಕೈ ಮುಗಿದ. ಆಗ ಪೊಲೀಸರು ನಮ್ಮನ್ನು ಬಂಧಿಸದೆ ಬಿಟ್ಟರು.

ಹೀಗೆ ಪೊಲೀಸರು ನಮ್ಮ ಜನರ ಮನೆಗಳ ಮೇಲೆ ದಾಳಿ ಮಾಡಿ ಹಣ ಕೀಳುತ್ತಿದ್ದರು. ಈ ಸುದ್ದಿ ಎಲ್ಲರಿಗೂ ಗೊತ್ತಾಗುತ್ತಿತ್ತು. ದುಡಿಯಬೇಕೆಂದರೆ ಯಾರೂ ಕೆಲಸ ಕೊಡುತ್ತಿರಲಿಲ್ಲ. ಪೊಲೀಸರು ಹೊರಿಸಿದ ಕಳ್ಳತನದ ಆರೋಪದಿಂದ ನೌಕರಿಯೂ ಸಿಗುತ್ತಿರಲಿಲ್ಲ. ಸಾಲ ಮಾಡಿ ಪೊಲೀಸರಿಗೆ ಲಂಚ ಕೊಡಬೇಕು. ಸಾಹುಕಾರನ ಸಾಲ ತೀರಿಸಲು ದಾದಾ, ಭಾವು, ಅಣ್ಣಾ ಕಳ್ಳತನ ಮಾಡಬೇಕಾಗುತ್ತಿತ್ತು. ನಾನು, ಅವ್ವ ಕಳ್ಳತನ ಮಾಡದಿದ್ದರೂ ಉಚಲ್ಯಾ ಜಾತಿಯಲ್ಲಿ ಹುಟ್ಟಿದ ತಪ್ಪಿಗೆ ಪೊಲೀಸರ ಹೊಡೆತ ತಿನ್ನಬೇಕಾಗುತ್ತಿತ್ತು. ಶಾಲೆಗೆ ಹೋದರೆ ಅಲ್ಲಿನ ಮಕ್ಕಳು "ಕಳ್ಳ ಬಂದ್ನಪೋ ಕಳ್ಳ" ಎಂದು ಕೂಗಿಸುತ್ತಿದ್ದರು. ಪುಸ್ತಕದ ಮೊದಲ ಪುಟ ತೆರೆದರೆ, 'ನಮ್ಮದೇಶ ಭಾರತ. ಭಾರತೀಯರೆಲ್ಲ ನನ್ನ ಬಾಂಧವರು' ಎಂದು ಬರೆದಿರುತ್ತಿತ್ತು. ಇದು ಸತ್ಯವಾಗಿದ್ದರೆ ವಿನಾಕಾರಣ ನಮ್ಮ ಮೇಲೇಕೆ ಕಳ್ಳತನದ ಆರೋಪ ಹೊರೆಸುತ್ತಾರೆ? ಥಳಿಸುತ್ತಾರೆ? ಭಾರತೀಯರು ಬಂಧುಗಳಾಗಿದ್ದರೆ ನಮ್ಮ ಅಣ್ಣಂದಿರಿಗೇಕೆ ಕೆಲಸ ಕೊಡುತ್ತಿಲ್ಲ? ನಮಗೇಕೆ ಹೊಲ ಮನೆಗಳಿಲ್ಲ? ನಮ್ಮವರಿಗೇಕೆ ಕಳ್ಳತನ ಮಾಡುವ ಪರಿಸ್ಥಿತಿ ಬಂತು? ಎಂಬ ನೂರಾರು ವಿಚಾರಗಳು ತಲೆಯಲ್ಲಿ ಸುಳಿದುಹೋಗುತ್ತಿದ್ದವು.

ಯಾವುದೇ ಸಾಕುಪ್ರಾಣಿ ಮೇವು ಹಾಕದಿದ್ದರೆ ಕೂಗುತ್ತದೆ. ರಾತ್ರಿ ಹಸಿವಾದರೆ ಕಟ್ಟಿದ ಹಗ್ಗ ಕಿತ್ತೊಗೆದು ಹೊಲದಲ್ಲಿ ಬೆಳೆದ ಹಸಿರು ಫಸಲಿನ ಮೇಲೆ ದಾಳಿ ಮಾಡುತ್ತದೆ. ಕೆರಳಿದ ಮಾಲಿಕ ಹೊಡೆದು-ಬಡಿದು ಕೊಂಡವಾಡೆಗೆ ಹಾಕುತ್ತಾನೆ. ಆಮೇಲೆ ದಂಡ ಕೊಟ್ಟು ಬಿಡಿಸಿಕೊಳ್ಳುತ್ತಾರೆ. ಹೀಗೆಯೇ ನಮ್ಮ ಜನ ಕಳ್ಳತನ ಮಾಡುವಾಗ ಪೊಲೀಸರು ಬಂಧಿಸಿದರೆ ಕೋರ್ಟಿಗೆ ದಂಡ ಕಟ್ಟಿ ಜಾಮೀನು ಕೊಟ್ಟರೆ ಬಿಡುಗಡೆ ಮಾಡುತ್ತಾರೆ. ಹೀಗಾಗಿ ಕೊಂಡವಾಡೆ ಸೇರಿದ ದನಗಳಿಗೂ ನಮಗೂ ಯಾವ ವ್ಯತ್ಯಾಸವೂ ಕಾಣುತ್ತಿರಲಿಲ್ಲ. ನನಗೆ ಅಕ್ಷರ ಜ್ಞಾನ ಆದಂದಿನಿಂದ ಇಂಥ ವಿಚಾರಗಳು ಹೊಳೆಯಲಾರಂಭಿಸಿದವು. ಆ ಪುಸ್ತಕದ

ಮೊದಲ ಪುಟದಲ್ಲಿರುವ ಮುಖ್ಯ ಸುಳ್ಳೆನಿಸುತ್ತಿತ್ತು. ಹೀಗೆ ನಾನು ದ್ವೈಪಕ್ಷಿ, ಹಣೆಬರಹಕ್ಕೆ ಬಯ್ಯುತ್ತ, ಮೌನವಾಗಿ ವೇದನೆಗಳನ್ನೆಲ್ಲ ನುಂಗುತ್ತ ಉಚಲ್ಯಾ ಜಾತಿಯಲ್ಲಿ ಬೆಳೆಯುತ್ತ, ಶಾಲೆ ಕಲಿಯಲಾರಂಭಿಸಿದೆ.

ಕಳ್ಳತನದ ಮಾಲು ಬಂದ ದಿನ ನಮ್ಮ ಮನೆಯಲ್ಲಿ ಸಂಭ್ರಮದ ವಾತಾವರಣವಿರುತ್ತಿತ್ತು. ಆ ದಿನ ಮನೆಯಲ್ಲಿ ಜಂದಿಯೂಟ; ಕಳ್ಳಭಟ್ಟಿಯ ಸಮಾರಾಧನೆ. ನಾನು ಬಲವಂತದಿಂದಾಗಿ ಎಂದಾದರೊಮ್ಮೆ ಕುಡಿದಾಗ ಶಾಲೆಯ ಮಕ್ಕಳು ಚೇಷ್ಟೆ ಮಾಡುತ್ತಿದ್ದರು. ಹೀಗಾಗಿ ನಾನು ನಾಲ್ಕನೆಯ ಕ್ಲಾಸಿನಲ್ಲಿದ್ದಾಗ ಕುಡಿಯುವುದನ್ನು ಬಿಟ್ಟೆ. ಇಂಥ ಪರಿಸ್ಥಿತಿಯಲ್ಲಿ ಬೋರ್ಡ್ ಪರೀಕ್ಷೆಗೆ ಕುಳಿತು ಪಾಸಾದೆ. ಅಪ್ಪ, ದಾದಾ ಸಂತೋಷಪಟ್ಟರು. ಹೆಚ್ಚಿನ ಓದಿಗೆ ಸೊಲ್ಲಾಪುರಕ್ಕೆ ಕಳಿಸುವ ವಿಚಾರ ಮಾಡಿದರು. ಅಲ್ಲಿ ನಮ್ಮ ನೆಂಟರೂ ಇದ್ದರು. ನಮ್ಮ ಜಾತಿಯವರ ಶಾಲೆಯೂ ಇತ್ತು. ಹೆಚ್ಚಿನ ಮಾಹಿತಿಗಾಗಿ ದಾದಾ ಸ[illegible]ಮ ಭಾವನನ್ನು ಭೆಟ್ಟಿಯಾದ. ಅವನ ಸಹಾಯದಿಂದ ಸೊಲ್ಲಾಪುರದ ಸಿದ್ರಾಮನಿಗೊಂದು ಪತ್ರ ಬರೆದರು. ಅವನೇ ನಮ್ಮ ಸಮಾಜದ ಅಧಿಕಾರಿ. ಇವರ ಆಶ್ರಮ ಶಾಲೆ ಸೋನಗಾಂವದಲ್ಲಿತ್ತು. ಅವನ ಪತ್ರ ಬಂದ ಬಳಿಕ, ಶಾಲೆಯ ಪ್ರಮಾಣ ಪತ್ರದೊಂದಿಗೆ ಸೊಲ್ಲಾಪುರಕ್ಕೆ ಹೊರಟೆವು. ನನಗಂತೂ ಸೂರ್ಯ ಪಶ್ಚಿಮದಲ್ಲಿ ಹುಟ್ಟಿದನೇನೋ ಅನಿಸುತ್ತಿತ್ತು. ಸಿದ್ರಾಮ ನಮ್ಮನ್ನು ಶಾಮರಾವ್ ಮಾಸ್ತರರ ಬಳಿ ಕರೆದೊಯ್ದ. ಅನಂತರ ನಮಗೆ ಸೋನಗಾಂವಿಗೆ ಬರುವಂತೆ ತಿಳಿಸಲಾಯಿತು. ಅಲ್ಲಿ ಶಿ[illegible]ರಾಯರ ಅಳಿಯನೇ ಹೆಡ್‌ಮಾಸ್ತರ. ತಂದ ಸಾಮಾನು-ಸರಂಜಾಮುಗಳನ್ನೆಲ್ಲ ಒಂದು ಕೋಣೆಯಲ್ಲಿಟ್ಟೆವು. ಹೀಗೆ ನಾನು ಅಲ್ಲಿಯ ಶಾಲೆಯಲ್ಲಿ ಐದನೇ ಕ್ಲಾಸಿಗೆ ಸೇರಿದೆ.

ಆ ದಿನ ನಾನು ಬಹಳ ಸಂತೋಷಪಟ್ಟೆ. ಅಲ್ಲಿ ಊಟದ, ವಾಸದ, ಪುಸ್ತಕದ ವ್ಯವಸ್ಥೆಯಿತ್ತು. ನನ್ನ ಜೊತೆಗೆ ಬಾಬು ಶಹಾ, ಶಿವು ಎಂಬ ಇಬ್ಬರು ಹುಡುಗರೂ ಇದ್ದರು. ನಮ್ಮನ್ನು ಅಲ್ಲಿ ಬಿಟ್ಟು ಸಿದ್ರಾಮ ಸೊಲ್ಲಾಪುರಕ್ಕೆ ಮರಳಿದ. ಶಾಲೆಯಿಂದ ರಸ್ತೆ ಸಾಕಷ್ಟು ದೂರದಲ್ಲಿತ್ತು. ಸನಿಹದಲ್ಲೊಂದು ಹೊಳೆ ಹರಿಯುತ್ತಿತ್ತು. ನಾವು ಆ ದಿನ ಹೊಳೆಯಲ್ಲಿ ಸ್ನಾನ ಮಾಡಿದೆವು. ರಾತ್ರಿಯೂಟದ ಗಂಟೆ ಬಾರಿಸಿತು. ಎಲ್ಲರಂತೆ ನಾನೂ ತಾಟು, ಬಟ್ಟಲು ತೆಗೆದುಕೊಂಡು ಊಟಕ್ಕೆ ಕುಳಿತೆ. ಎಲ್ಲರಂತೆ ನಮಗೂ ರೊಟ್ಟಿ, ಸಾರು ನೀಡಲಾಯಿತು. ರೊಟ್ಟಿ ತುಂಬಾ ತೆಳ್ಳಗಿತ್ತು. ನಾವು ಹೊಸಬರೆಂದು ಅರ್ಧ ರೊಟ್ಟಿ ಹೆಚ್ಚು ಕೊಟ್ಟರು. ನಾವು ಗಪಗಪ ತಿಂದು ಮತ್ತೆ ಬೇಡಿದೆವು. ಆಗ ಗುರೂಜಿ ಹೇಳಿದರು, "ಒಮ್ಮೆ ಊಟಕ್ಕೆ ಕುಳಿತಾಗ ಎರಡೇ ರೊಟ್ಟಿ." ನಾವು ಮೇಲಕ್ಕೆದ್ದು ಕೈತೊಳೆದೆವು.

ಇಲ್ಲಂತೂ ಹೊಟ್ಟೆ ತುಂಬುವದಿಲ್ಲ. ಏನು ಮಾಡುವುದು ? ಎಂದು ಬಾಬು, ಶಹಾ, ಶಿವಾ ಮಾತಾಡಿಕೊಳ್ಳುತ್ತಿದ್ದರು. ಅವರಿಗೆ ಇಲ್ಲಿ ಬಂದ ಬಗ್ಗೆ ಬಹಳ ಕೆಟ್ಟೆನಿಸಿತ್ತು. ಆದರೆ ನನಗೆ ಮಾತ್ರ ಹಾಗನಿಸಲಿಲ್ಲ. ಏನೇ ಆಗಲಿ, ಪ್ರತಿನಿತ್ಯ ಊಟ ಸಿಗುತ್ತದಲ್ಲ, ಅಷ್ಟೇ ಸಾಕು ಅಂದು ಕೊಂಡೆ. ಅನಂತರ ನಾವು ಗೆಳೆಯರಾದೆವು. ಪ್ರತಿದಿನ ಹೊಳೆಯಲ್ಲಿ ಸ್ನಾನ. ವಾರಕ್ಕೊಂದು ಸಾಬೂನು ಕೊಡುತ್ತಿದ್ದರು. ಅದರಿಂದ ಅಂಗಿ-ಚಡ್ಡಿ ತೊಳೆಯುತ್ತಿದ್ದೆವು. ಆದರೆ ಬಾಬು ಶಹಾ-ಶಿವಾಜಿಗೆ, ಇಲ್ಲಿಯ ಊಟ ಹಿಡಿಸಲಿಲ್ಲ.

# ಉಚಲ್ಯಾ

ಅವರು ಮನೆಗೆ ಹೋಗುವ ಹಟ ಹಿಡಿದು ಅಳುತ್ತಿದ್ದರು. ಇದನ್ನು ಅರಿತ ಹೆಡ್ ಮಾಸ್ತರರು ಅವರನ್ನು ಥಳಿಸಿದರು. ಆ ದಿನ ರಾತ್ರಿ ನಾವೆಲ್ಲ ಗಾಢ ನಿದ್ರೆಯಲ್ಲಿದ್ದಾಗ ಬಾಬು ಶಹಾ ಮತ್ತು ಶಿವ್ಯಾ ಪಲಾಯನ ಮಾಡಿದರು. ಕೊನೆಗೆ ಅಪರಾತ್ರಿಯಲ್ಲಿ ಹೊರಟ ಅವರನ್ನು ಪೊಲೀಸರು ಬಂಧಿಸಿ ಸ್ಟೇಶನ್ನಿಗೊಯ್ದರು. ಶಿವ್ಯಾ ಮನೆಯ ವಿಳಾಸ ಹೇಳಿದ. ಅನಂತರ ಸಿದ್ರಾಮ ಅವರನ್ನು ಬಿಡಿಸಿ ಕರೆದೊಯ್ದ. ಬಳಿಕ ಸೋನಗಾಂವಿಗೆ ಬಂದು ನನ್ನನ್ನು ಕರೆದೊಯ್ದ. ನಾನು ಭಾಬಳಗಂವಿಗೆ ಹೋಗಿ ಹೆಡ್ ಮಾಸ್ತರರ ಕಾಲಿಗೆ ಬಿದ್ದು ಐದನೇ ಕ್ಲಾಸಿಗೆ ಪ್ರವೇಶ ಪಡೆದೆ. ಅಲ್ಲಿ ನನಗೆ ದಗಡೂ ಎಂಬ ಅಂಬಿಗರ ಗೆಳೆಯ ಸಿಕ್ಕ.

** ** **

ಹೀಗಿರುವಾಗ ಕಳ್ಳತನ ಮಾಡುವಾಗ ಹರಿಚಂದ್ರ ಪೊಲೀಸರ ಕೈಗೆ ಸಿಕ್ಕಿ ರಿಮಾಂಡ್ ಹೋಮ್ ಸೇರಬೇಕಾಯಿತು. ಮನೆಯ ಪರಿಸ್ಥಿತಿ ತುಂಬಾ ಕೆಟ್ಟಿತ್ತು. ನಾನು ಇದಕ್ಕಾಗಿ ತಲೆಕೆಡಿಸಿಕೊಳ್ಳದೆ ಶಾಲೆಗೆ ಹೋಗುತ್ತಿದ್ದೆ. ಹಸಿವೆಯಾದಾಗ ನಾನು, ದಗಡೂ ಜೇನು ಹುಡುಕುತ್ತಾ ಅಲೆದಾಡುತ್ತಿದ್ದೆವು. ಪಕ್ಷಿಗಳ ತತ್ತಿ ಸಿಕ್ಕರೆ ಸುಟ್ಟು ತಿನ್ನುತ್ತಿದ್ದೆವು. ಚಾಟರ ಬಿಲ್ಲಿನಿಂದ ಹಕ್ಕಿಗಳನ್ನು ಕೊಂದು ತಿನ್ನುತ್ತಿದ್ದೆವು. ಮರುದಿನ ಶಾಲೆ ತಪ್ಪಿಸಿದ್ದಕ್ಕೆ ಗುರುಗಳಿಂದ ಛಡಿ ಏಟೂ ತಿನ್ನುತ್ತಿದ್ದೆವು.

ನಾನೊಮ್ಮೆ ದಾದಾ ಕದ್ದು ತಂದ ಅಂಗಿಯನ್ನು ಧರಿಸಿ ಶಾಲೆಗೆ ಹೋದೆ. ಆ ಅಂಗಿ ಎಷ್ಟು ಗಿಡ್ಡವಾಗಿತ್ತೆಂದರೆ ಮುಂದೆ ಎಳೆದರೆ ಬೆನ್ನು, ಹಿಂದೆ ಎಳೆದರೆ ಹೊಟ್ಟೆ ಕಾಣಿಸುತ್ತಿತ್ತು. ನನ್ನ ಈ ವೇಷ ನೋಡಿ, ನಮ್ಮ ಊರಿನಿಂದ ನನ್ನ ಜೊತೆಗೇ ಶಾಲೆ ಕಲಿಯಲು ಬರುತ್ತಿದ್ದ ಸುಲಭಾಳ ಅಣ್ಣ ಅರುಣ ಕೇಳಿದ: "ಲಕ್ಷ್ಮಣ ಅಂಗಿಯನ್ನು ಹೀಗೇಕೆ ಹೊಲಿಸಿದೆ?" "ನಮ್ಮಣ್ಣ ಅಳತೆ ಕೊಡದೆ ಲಾತೂರಿನಿಂದ ಹೊಲಿಸಿ ತಂದಾನ," ಎಂದು ನಾನು ಸುಳ್ಳು ಹೇಳಿದೆ. ಸುಲಭಾ ಅವಳ ಸ್ನೇಹಿತೆ ಶಕುಂತಲಾ ಎಲ್ಲರೂ ನನ್ನ ವೇಷ ನೋಡಿ ಹೊಟ್ಟೆ ತುಂಬ ನಕ್ಕರು. ನನಗೆ ನಾಲ್ಕು ಜನರೆದುರಿಗೆ ಹೇಗೆ ನಡೆದುಕೊಳ್ಳಬೇಕೆಂದೇ ತಿಳಿದಿರಲಿಲ್ಲ.

ಸುಗ್ಗಿ ಬಂದಾಗ ನಮ್ಮ ಮನೆಯವರೆಲ್ಲ ಪರಊರಿಗೆ ಹೋಗುತ್ತಿದ್ದರು. ಆಗ ನನ್ನ ಪೇಚಾಟ ಹೇಳತೀರದು. ಮನೆಯಲ್ಲಿ ನಾನೊಬ್ಬನೆ. ತಿನ್ನಲು ಏನೂ ಇರುತ್ತಿರಲಿಲ್ಲ. ಆಗ ನಾನು ಗಡ್ಡೆ, ಗೆಣಸು ಅಗೆದು ತಿನ್ನುತ್ತಿದ್ದೆ. ಹೀಗಿರುವಾಗ ನನಗೆ ಅಂಕುಶನ ಪರಿಚಯವಾಯಿತು. "ಇಂದು ಲಕ್ಷ್ಯಾ ಉಪವಾಸ ಬಂದಾನ. ಎಲ್ಲಾರೂ ಸ್ವಲ್ಪ ಸ್ವಲ್ಪ ರೊಟ್ಟಿ ಕೊಡ್ರಿ," ಎಂದು ರೊಟ್ಟಿ ಸಂಗ್ರಹಿಸಿ ತಂದು ಕೊಡುತ್ತಿದ್ದ. ಉಳಿದವರು ಉಣ್ಣುವಾಗ ನಾನು ಪುಸ್ತಕ ಹಿಡಿದು ಮೂಲೆಯಲ್ಲಿ ಕೂತಿರುತ್ತಿದ್ದೆ. ಹೊಟ್ಟೆಯಲ್ಲಿ ಬೆಂಕಿ ಬಿದ್ದಿರುತ್ತಿತ್ತು. ಹುಡುಗರಾದರೂ ಎಷ್ಟಂತ ಕೊಟ್ಟಾರು? ನನ್ನ ಬಡತನ ಕಂಡು ಕೆರಳುತ್ತಿದ್ದೆ. ಒಂದು ವರ್ಷ ಗ್ಯಾನಬಾನ ಮನೆಯಲ್ಲಿ ಕೆಲಸ ಮಾಡಿ ಹೊಟ್ಟೆ ತುಂಬಿಸಿಕೊಂಡೆ. ಓದಿನಿಂದ ನನ್ನ ವೈಚಾರಿಕ ಶಕ್ತಿ ಬೆಳೆಯಿತು. ದೇವರು ನನಗೇಕೆ ಈ ಶಿಕ್ಷೆ ಕೊಟ್ಟ? ನನಗಿಂತ ಭಿಕ್ಷುಕರೇ ಮೇಲಲ್ಲವೇ? ನಾನು ಮಾಡಿದ ಪಾಪವಾದರೂ ಏನು? ಎಂದು ಎಷ್ಟೋ ಸಲ ಅನ್ನಿಸುತ್ತಿತ್ತು. ನಾನು ಶುಕ್ರವಾರ, ಮಂಗಳವಾರ ಹೆಚ್ಚಾಗಿ ಶಾಲೆ

ತಪ್ಪಿಸುತ್ತಿದ್ದೆ. ಏಕೆಂದರೆ ಭವಾನಿ ಮಂದಿರದಲ್ಲಿ ತಂದಿಡುತ್ತಿದ್ದ ನೈವೇದ್ಯ ತಿನ್ನಲು ಸಿಗುತ್ತಿತ್ತು.

ಗುರೂಜಿ ಬುದ್ಧ, ಮಹಾವೀರರ ಚರಿತ್ರೆ ಕಲಿಸುತ್ತಿದ್ದರು. ನಾನು ಅವರ ಜ್ಞಾನೋದಯ, ತಪಸ್ಸಿನ ಬಗ್ಗೆ ತಲೆಕೆಡಿಸಿಕೊಳ್ಳುತ್ತಿದ್ದೆ. ನಾನೊಮ್ಮೆ ಪ್ರಧಾನಿ ಇಂದಿರಾ ಗಾಂಧಿಯವರಿಗೆ ಪತ್ರ ಬರೆದೆ. ಬಡವರಿಗೆ ಮೈತುಂಬ ಬಟ್ಟೆ ಸಿಗಲೆಂದು ಗಾಂಧಿ ತುಂಡು ಬಟ್ಟೆ ತೊಟ್ಟರು. ಗಾಂಧಿಯವರ ಕನಸು ನನಸಾಗುವುದೆಂದು ? ನೀವು ಕೊನೆಪಕ್ಷ ಬಡವರಿಗೆ ಒಂದು ಹೊತ್ತಿನ ಊಟದ ವ್ಯವಸ್ಥೆಯನ್ನಾದರೂ ಮಾಡಿ ಎಂದು ಏನೇನೊ ಬರೆದಿದ್ದೆ. ಆದರೆ ವಿಳಾಸವನ್ನು ಸರಿಯಾಗಿ ನಮೂದಿಸಿರಲಿಲ್ಲ.

ಶಾಲೆ ಕಲಿಯುವಾಗ ಒಂದು ಹಠ ತೊಟ್ಟಿದ್ದೆ. ಅದೇನೆಂದರೆ ನಾನು 'ಉಚಲ್ಯಾ' ಜಾತಿಯವನಾಗಿದ್ದರೂ ಏನಾದರೊಂದು ವಿಧಾಯಕ ಕೆಲಸ ಮಾಡಿ ತೋರಿಸಬೇಕೆನ್ನುವುದು. ಒಮ್ಮೆ ಮ್ಯಾಟ್ರಿಕ್‌ವರೆಗಿನ ವಿದ್ಯಾರ್ಥಿಗಳು ಭಾಷಣ ಸ್ಪರ್ಧೆ ಏರ್ಪಡಿಸಿದ್ದರು. ಅದರಲ್ಲಿ ನನಗೆ ಮೊದಲ ಬಹುಮಾನ ಬಂತು. ಅನಂತರ ಯಾವ ಭಾಷಣವೇ ನಡೆಯಲಿ, ನನ್ನ ಹೆಸರೇ ಸೂಚಿತವಾಗುತ್ತಿತ್ತು.

ನನಗೆ ಭಜನೆಯ ಹುಚ್ಚಿತ್ತು. ದಿನಾಲು ದೇವಸ್ಥಾನದ ಮೂಲೆಯಲ್ಲಿ ಕುಳಿತು ಕೇಳುತ್ತಿದ್ದೆ. ಅಲ್ಲೊಬ್ಬ ಮಹಾದೇವನೆಂಬ ಮುದುಕನಿದ್ದ. ನಾನು ಭಜನಾ ಮಂಡಳಿಯನ್ನು ಸೇರಿದ್ದು ನೋಡಿ ಅವನಿಗೆ ಬಹಳ ಆನಂದವಾಯಿತು. ಆತ ನನಗೆ ಅಭಂಗ ಕಲಿಸಿದ. ನನಗೆ ತಾಳ, ಸ್ವರಗಳ ಪರಿಚಯವಿರಲಿಲ್ಲ. ಸಹಜವಾಗಿ ಹಾಡುತ್ತಿದ್ದೆ. ಅನಂತರ ಅಭಂಗ ಹಾಡುವುದನ್ನು ಕಲಿತೆ. ಅವರಿವರ ಮನೆಗೆ ಹೋಗಿ ಹಾಡಲಾರಂಭಿಸಿದೆ. ಈಗ ಜನ ನನ್ನನ್ನು ಮುಟ್ಟಲಾರಂಭಿಸಿದರು.

ಅಂದಿನಿಂದ ಎಲ್ಲೆಲ್ಲಿ ಭಜನೆ, ಸಪ್ತಾಹ, ಕೀರ್ತನೆ ನಡೆಯುತ್ತಿತ್ತೋ ಅಲ್ಲೆಲ್ಲ ಹಾಜರಿರುತ್ತಿದ್ದೆ. ತಾಳ ಮೃದಂಗದ ನಾದದಲ್ಲಿ ಎಲ್ಲವನ್ನೂ ಮರೆಯುತ್ತಿದ್ದೆ. ಮನಸ್ಸು ಪರಿವರ್ತನೆಯಾಯಿತು. ಏಡಿಸಾರು, ಹಂದಿಮಾಂಸ ತಿನ್ನುವುದು ಪಾಪವೆನಿಸಿತು. ವ್ರತ, ನೇಮ ಮಾಡಲಾರಂಭಿಸಿದೆ. ಜನರ ಗೌರವ, ನಡೆ-ನುಡಿ, ನನ್ನ ಈ ಪರಿವರ್ತನೆಗೆ ಕಾರಣವಾಯಿತು. ರಾಮಾಯಣ ಪಠನದ ಆಶೆಯಿಂದ ಗೋವಿಂದ ಪಾಟೀಲನೆಂಬ ಸಂಪ್ರದಾಯವಾದಿಯ ಕಡೆ ಹೋದೆ. ಅವರು ಕೆರಳಿ, “ಬೆಕ್ಕು, ಹಂದಿ ತಿನ್ನುವ ಜಾತಿ ನಿನ್ನದು. ನೀನು ರಾಮಾಯಣ ಓದುತ್ತೀಯಾ ?" ಎಂದು ಬಯ್ದರು. ನಾನು ಕೊರಳಲ್ಲಿದ್ದ ತುಳಸಿ ಮಾಲೆ ತೋರಿಸಿದೆ. ನನ್ನ ಕೀರ್ತನೆ, ಭಜನೆ, ಉಪವಾಸಗಳ ಬಗ್ಗೆ ಹೇಳಿದೆ. ಅವರು ಮೆಚ್ಚಿ ನಾಳೆಯಿಂದ ಬರುವಂತೆ ಹೇಳಿದರು. ಅವರಿಂದ ನಾನು ಶಿವಲೀಲಾಮೃತ, ಭಗವದ್ಗೀತೆ ಓದುವುದನ್ನು ಕಲಿತೆ. ಅನಂತರ ರಾಮಾಯಣವನ್ನು ಲಯಬದ್ಧವಾಗಿ ಹಾಡುವುದನ್ನು ಕಲಿತೆ. ಜನ ನನ್ನ ಕಂಠ ಮೆಚ್ಚಿ ಹೊಗಳಲಾರಂಭಿಸಿದರು.

ನಾನು ಮನೆಯಲ್ಲಿ ಎಂದೂ ಒಳ್ಳೆಯ ದಿನ ಕಾಣಲಿಲ್ಲ. ಸದಾ ಬಡತನ. ನಾನು ಗಳಿಸುವುದಿಲ್ಲವೆಂದು ಮನೆಯ ಹೆಂಗಸರಿಗೂ ನನ್ನ ಬಗ್ಗೆ ತಾತ್ಸಾರ. “ನಿನ್ನನ್ನು ಸಾಕೋರ್‍ಯಾರು ?" ಎಂದು ಬೈಯ್ಯುತ್ತಿದ್ದರು. ನಮ್ಮಲ್ಲಿ ಬಾಮಲೇ ಎಂಬ ಗೃಹಸ್ಥನಿದ್ದ. ಶ್ರಾವಣಮಾಸದಲ್ಲಿ ಜನ ಉಪವಾಸ ಸಾಯುವಾಗ ಸಹಾಯ ಮಾಡುವ

# ಉಚಲ್ಯಾ

ಸೋಗಿನಲ್ಲಿ ಒಂದೆರೆಡು ಸೇರು ಹುಳುಕು ಜೋಳ ಕೊಟ್ಟು ಅವರ ಮನೆಯ ತಿಪ್ಪೆಯ ಗೊಬ್ಬರ ಒಯ್ಯುತ್ತಿದ್ದ. ಬಡವರ ಗೋಣು ಮುರಿಯುತ್ತಿದ್ದ. ಯಾರು ಸತ್ತರೂ ಕಣ್ಣೆತ್ತಿ ನೋಡುತ್ತಿರಲಿಲ್ಲ. ಇಷ್ಟು ಕಠೋರವಾಗಿತ್ತು ನಮ್ಮೂರು.

ಮನೆಯ ಹೆಂಗಸರಲ್ಲಿ ಹೊಂದಾಣಿಕೆಯಿರ ಲಿಲ್ಲ. ಆಗಾಗ ಜಗಳ, ಮನಸ್ತಾಪ ಆಗುತ್ತಿತ್ತು. ಅಂತೂ ಕೊನೆಗೊಮ್ಮೆ ಮನೆ ಪಾಲಾಯಿತು. ನಾನು, ಹರಿಚಂದ್ರ, ಅಪ್ಪ ನಿರಾಧಾರರಾದೆವು. ಅಪ್ಪನಿಗೆ ತೋಟ ಕಾಯುವ ಕೆಲಸ; ಹರಿಚಂದ್ರ ನಿಗೆ ಕಳ್ಳತನದ ಉದ್ಯೋಗ. ಆದರೆ ನನ್ನನ್ನು ಸಾಕಲು ಯಾರೂ ಮುಂದಾಗಲಿಲ್ಲ. ಕೊನೆಗೆ ಸಂಭಾ ನನ್ನನ್ನು ಸಾಕುವ ಹೊಣೆ ಹೊತ್ತ. ಉಳಿದವರು ಶಾಲೆ ಖರ್ಚು ನೀಡುವುದೆಂದು ನಿರ್ಧಾರವಾಯಿತು. ಹರಿಚಂದ್ರ ದಾದಾನ ಮನೆ ಸೇರಿದರೆ, ಅಪ್ಪ ಅಣ್ಣನ ಮನೆ ಸೇರಿದ. ಎಲ್ಲರೂ ಪ್ರತ್ಯೇಕವಾಗಿ ತಂತಮ್ಮ ಸಂಸಾರ ಪ್ರಾರಂಭಿಸಿದರು. ಈಗ ಮನೆಯಲ್ಲಿ ಉಳಿದವ ರೆಂದರೆ ನಾನು, ಭಾವು ಹಾಗೂ ಭಾಭಿ. ಕೊನೆಗೆ ಸುಗ್ಗಿಯ ನೆಪಮಾಡಿ ಭಾವು ಭಾಭಿಯನ್ನೂ ತವರಿಗೆ ಕಳಿಸಿದ. ಈಗ ರೊಟ್ಟಿ ಮಾಡುವ ಕೆಲಸ ನನ್ನ ಪಾಲಿಗೆ ಬಂತು. ಹೀಗೆ ಊರ ಹೊರಗಿನ ಹೊಲಗೇರಿಯಲ್ಲಿ ನಮ್ಮ ಸಂಸಾರ ನಡೆದಿತ್ತು.

ಭಾವೂ ಈಗ ಕಳ್ಳತನ ಬಿಟ್ಟು ಯಂತ್ರದ ಕೆಲಸ ಕಲಿಯುತ್ತಿದ್ದ. ನಮಗೆ ನೌಕರಿ ಸಿಕ್ಕರೆ ನಮ್ಮ ನ್ಯಾರೂ ಕಳ್ಳರೆಂದು ಕರೆಯಲಿಕ್ಕಿಲ್ಲ ಎಂದು ಅನಿಸಿತು. ನಾನು ಬಾಬಳಗಾವಿನ ಹಿಂದುಳಿದ ವರ ಬೋರ್ಡಿಂಗಿನಲ್ಲಿ ವಾಸಿಸಬೇಕೆಂದು ನಿಶ್ಚ ಯಿಸಿ, ಹೆಡ್‌ಮಾಸ್ತರರು ಕೊಟ್ಟ ಪತ್ರವನ್ನು ಅಲ್ಲಿಯ ಸೆಕ್ರೆಟರಿಗೆ ಕೊಟ್ಟು ಬೋರ್ಡಿಂಗ್ ಸೇರಿದೆ. ಅಲ್ಲಿ ಸುಮಾರು ಇಪ್ಪತ್ತು ವಿದ್ಯಾರ್ಥಿಗ ಳಿದ್ದರು. ಅವರೊಂದಿಗೆ ಸ್ನೇಹ ಬೆಳೆಯಿತು. ಎರಡು ಹೊತ್ತಿನ ಊಟಕ್ಕಂತೂ ಕೊರತೆಯಿರ ಲಿಲ್ಲ. ಪ್ರತಿ ರವಿವಾರ ಅಪ್ಪನೊಂದಿಗೆ ಕಳೆದು ಬರುತ್ತಿದ್ದೆ. ಅಪ್ಪನ ನಿಷ್ಠೆಗೆ ಮೆಚ್ಚಿ ಅವರ ಮಾಲಿಕ, ಎರಡು ಹೊತ್ತಿನ ಊಟ, ಹತ್ತು-ಹದಿನೈದು ರೂಪಾಯಿ ಸಂಬಳ ಕೊಡುತ್ತಿದ್ದ. ನನಗೂ ಆಗಾಗ ಅಪ್ಪ ಎಂಟ್ಹತ್ತು ಆಣೆ ಕೊಡುತ್ತಿದ್ದ. ಅಪ್ಪ ಮುದುಕನಾದರೂ ದುಡಿ ಯುವುದನ್ನು ಬಿಟ್ಟಿರಲಿಲ್ಲ. ನನಗೆ ಶಾಲೆ ಕಲಿಯುವಂತೆ ಹುರಿದುಂಬಿಸುತ್ತಿದ್ದ. "ಹರಿ ಚಂದ್ರನ ಜೀವನವಂತೂ ಹಾಳಾಯಿತು; ನೀನಾದರೂ ಕಲಿತು ದೊಡ್ಡವನಾಗು," ಎನ್ನು ತ್ತಿದ್ದ. ಆ ಬೋರ್ಡಿಂಗಿನಲ್ಲಿ ಇಬ್ಬರು ಲಿಂಗಾ ಯತ ಹುಡುಗರನ್ನು ಬಿಟ್ಟರೆ, ಉಳಿದವರೆಲ್ಲ ಹಿಂದುಳಿದವರೆ. ನಾನೊಬ್ಬನೇ ಉಚಲ್ಯಾ ಜಾತಿ ಯವ. ಈ ನಡುವೆ ಮೋರೆ ಗುರೂಜಿಯ ಪರಿಚಯವಾಯಿತು. ಆಗಾಗ ಅವರ ಕೋಣೆಗೆ ಹೋಗುತ್ತಿದ್ದೆ. ನನ್ನ ಇಂಗ್ಲೀಷ್ ಪಾಠಾಂತರ ನೋಡಿ, ಮೆಚ್ಚಿ ಒಮ್ಮೊಮ್ಮೆ ತಮ್ಮ ಪಾಲಿನ ಊಟ ನನಗೇ ಕೊಟ್ಟು ಬಿಡುತ್ತಿದ್ದರು. ಹೀಗೇ ದೀಪಾವಳಿವರೆಗೆ ಬೋರ್ಡಿಂಗಿನಲ್ಲಿ ಉಳಿದೆ. ಅಪ್ಪ ಮುದುಕನಾದ. ಹರಿಚಂದ್ರ ಕಳ್ಳತನ ಬಿಟ್ಟ. ಪುಸ್ತಕಗಳಿಗೆ ಹಣ ಸಿಗುತ್ತಿರಲಿಲ್ಲ. ನನಗೆ ನೌಕರಿ ಮಾಡಿ ಅಪ್ಪನನ್ನು ಸಾಕಬೇಕೆನಿಸುತ್ತಿತ್ತು. ರಜೆ ಬಂದಾಗ ಭಾವೂನ ಮನೆಗೆ ಬಂದೆ. ನಾನು ಶಾಲೆ ಬಿಟ್ಟ ಸುದ್ದಿ ಕೇಳಿ ಭಾಭೀ ಬಯ್ದರೂ ತಮ್ಮ ಹಣ ಉಳಿಯಿತಲ್ಲ ಎಂದು ಸಮಾಧಾನ ಪಟ್ಟುಕೊಂ ಡರು. ಕೆಲಸವಿಲ್ಲದೆ ಕುಳಿತು ತಿನ್ನುವ ನನ್ನನ್ನು ಮತ್ತಷ್ಟು ಕಾಡಲಾರಂಭಿಸಿದಳು.




ಅಪ್ಪ ಒಮ್ಮೆಲಾತೂರಿಗೇ ಬಂದ. "ಮನೆಯ ಭಾವಣೆಗೆ ಹಾಕಿದ ತಗಡು ಮಾರಿಯಾದರೂ ಪುಸ್ತಕ ಕೊಡಿಸುತ್ತೇನೆ, ಶಾಲೆ ಬಿಡ ಬೇಡ,"ಎಂದ. "ಮಾಲಿಕ ಮೊದಲಿನ ಹಾಗೆ ರೊಟ್ಟಿ ಕೊಡುತ್ತಿಲ್ಲ; ಹರಿಚಂದ್ರನನ್ನು ಸಾಕು ವುದೇ ಕಷ್ಟ"ಎಂದು ದುಃಖ ತೋಡಿಕೊಂಡ. ಈಗ ಭಿಕ್ಷೆ ಬೇಡುವುದೊಂದೆ ಬಾಕಿ ಎಂದು ಅತ್ತ. ಕೆಲದಿನಗಳಲ್ಲಿಯೇ ಅವನಿಗೆ ಭವಾನೀ ದೇವಿಯ ಪರಡಿ ತಂದುಕೊಟ್ಟ. ನಾನೂ ವಾರಕ್ಕೆ ಎರಡು ದಿನ ಜೋಗವ್ವ ಬೇಡುತ್ತ ತಿರುಗಾಡುತ್ತಿದ್ದೆ. ಇದೂ ಒಂದು ರೀತಿಯ ಭಿಕ್ಷೆಯೇ. ನಾವದನ್ನು ಜೋಗವ್ವ ಅನ್ನುತ್ತಿ ದ್ದೆವುಅಷ್ಟೆ.

ಹೀಗೆ ಕಷ್ಟಗಳಿಗೆ ಬೇಸತ್ತ ನಾನು ನೌಕರಿ ಹುಡುಕಲಾರಂಭಿಸಿದೆ. ಲಾತೂರಿನ ನಾಕಾದ ಬಳಿ ನಮ್ಮ ಜನರ ವಸತಿಯಿದೆ. ಅಲ್ಲಿಗೆ ಹೋಗಿ ಬ್ರೆಡ್, ಬಾಳೆ ಹಣ್ಣು ಮಾರಲಾರಂಭಿಸಿದೆ. ನೂಲು ಗಿರಣಿಗೆ ಹೋಗಿ ಸೇರುವ ಹೊಸ ಹುಡುಗರಿಗೆ ಅರ್ಜಿ ಬರೆದು ಕೊಡುತ್ತಿದ್ದೆ. ಒಂದು ದಿನ ನಾನು ಅರ್ಜಿ ಬರೆದುಕೊಂಡು ಗಿರಣಿಗೆ ಹೋದೆ. ನಾನಿನ್ನೂ ಸಣ್ಣವನೆಂಬ ಕಾರಣಕ್ಕಾಗಿ ಹೊರಗಟ್ಟಿದರು. ಒಬ್ಬಾತ, ಸಹ ಕಾರ ಮಂತ್ರಿಗಳಾದ ಕೇಶವರಾವ್ ಸೋನಾವ ಣೆಯವರನ್ನು ಭೇಟಿಯಾಗುವಂತೆ ಸಲಹೆ ಮಾಡಿದ. ಒಂದು ದಿನ ಧೈರ್ಯಮಾಡಿ ಅವರ ಮನೆಗೆ ಹೋಗಿ, ಅವರ ಕಾಲಿಗೆ ಬಿದ್ದು, ನನ್ನ ಪರಿಸ್ಥಿತಿಯನ್ನು ವಿವರಿಸಿ ಕೆಲಸವಿಲ್ಲದಿದ್ದರೆ ನಾನು ಭಿಕ್ಷೆ ಬೇಡಬೇಕಾಗುವುದೆಂದು ಕಳಕಳಿ ಯಿಂದ ಪ್ರಾರ್ಥಿಸಿದೆ. ಅವರು ನನ್ನ ಸ್ಥಿತಿಗೆ ಮರುಗಿ ಅರ್ಜಿ ಸಹಿ ಹಾಕಿದರು. ಅದನ್ನು ನೋಡಿದ ನಂತರ ಸ್ಪಿನ್ನಿಂಗ್ ಮಾಸ್ತರ ನನ್ನ ವಯಸ್ಸು ಹದಿನೆಂಟು ಎಂದು ಮನದಟ್ಟು ಮಾಡಿಕೊಂಡು ನನ್ನ ಅರ್ಜಿಗೆ ಸಹಿಹಾಕಿ ನನ್ನನ್ನು ರಿಂಗ್ ಫ್ರೇಮ್ ವಿಭಾಗದಲ್ಲಿ ನಿಯಮಿ ಸಿಕೊಂಡ. ಆ ಗಿರಣಿಯಲ್ಲಿ ನಾನು ಎಲ್ಲರಿಗಿಂತ ಕಿರಿಯನಾಗಿದ್ದೆ.

ಗಿರಣಿಯಲ್ಲಿ ನನ್ನದು ನೂಲು ಜೋಡಿಸುವ ಕೆಲಸ. ತುಂಬಾ ಕಷ್ಟದ ಕೆಲಸ. ಆಗಾಗ ನೂಲಿನ ಕಾಂಡಿ, ಹತ್ತಿ ಆರಿಸುತ್ತಿದ್ದೆ. ಎಷ್ಟೋ ಹುಡು ಗರು ಈ ಕೆಲಸಕ್ಕೆ ಹೊಂದಿಕೊಳ್ಳಲಾರದೆ ಅರ್ಧಕ್ಕೇ ನೌಕರಿ ಬಿಟ್ಟು ಹೋಗುತ್ತಿದ್ದರು. ಸ್ಪಿನ್ನಿಂಗ್ ಮಾಸ್ತರ ಹತ್ತಿರ ಬಂದಾಗ, "ಸಾಹೇ ಬರ, ನನಗ ನೂಲು ಜೋಡಸಾಕ ಬರ್ತದರಿ, ಬೇಕಾದ್ರೆ ಟ್ರಯೆಲ್ ನೋಡರಿ," ಎಂದು ಕೇಳಿಕೊಳ್ಳುತ್ತಿದ್ದೆ. ಅಷ್ಟರಲ್ಲಿ ಮಾಸ್ತರ ಹೊರ ಟುಹೋಗಿರುತ್ತಿದ್ದ. ಹೀಗೆ ನಾನು ಕೆಲಸ ಪ್ರಾರಂಭಿಸಿ ನೂರಾ ಇಪ್ಪತ್ತೈದು ದಿನ ಕಳೆದವು. ನನಗೆ ಸಂಬಳ ಕೊಡುವಂತೆ ಅರ್ಜಿ ಮಾಡಿದೆ. "ತುಮ್ ಜಬ್‌ತಕ್ ಧಾಗಾ ಲಗಾತೇ ನಹೀ, ತಬ್ ತಕ್ ಪಗಾರ ನಹೀ," ಎಂದು ಮಾಸ್ತರ ಉತ್ತರ ಕೊಟ್ಟ. ನಾನವರಿಗೆ ನನ್ನ ಬಡತನ,

## ಊಚಲ್ಯಾ

ಮನೆಯ ಪರಿಸ್ಥಿತಿ ಬಗ್ಗೆ ಹೇಳಿ ವಿನಂತಿಸಿ ಕೊಂಡೆ. ಆಗ ಆತ, "ತುಮ್ಹಾದಾ ಟ್ರಯಲ್ ಲೇಂಗೆ" ಎಂದು ಕರೆದೊಯ್ದ. ನಾನು ದೇವರ ಸ್ಮರಣೆ ಮಾಡುತ್ತಾ ಯಂತ್ರದ ಬಳಿ ಹೋಗಿ ನೂಲು ಜೋಡಿಸಿದೆ. "ಛೋಕರಾ , ತುಮ್ ಬಹೂತ್‌ಹುಶಾರ್‌ಹೋ,"ಎಂದು ಬೆನ್ನುತಟ್ಟಿ ಅರವತ್ತು ರೂಪಾಯಿ ಸಂಬಳ ಗೊತ್ತುಮಾಡಿದ. ನನಗೆ ಬಹಳ ಆನಂದವಾಯಿತು.

ನನ್ನದು ಬೆಳಗಿನ ಏಳುಗಂಟೆಯ ಪಾಳಿ. ನನ್ನ ಸಂಬಳ ಆರಂಭವಾದ್ದರಿಂದ ನನಗೆ ಬೇರೆ ಬೇರೆ ಕೆಲಸ ಕೊಡಲಾರಂಭಿಸಿದರು. ವೈಂಡಿಂಗ್, ಎಂಭತ್ತು ಕಿಲೋ ಭಾರದ ನೂಲಿನ ಬುಟ್ಟಿ ಎಳೆಯುವುದು ಇತ್ಯಾದಿ ಕೆಲಸ ಮಾಡಬೇಕಾಯಿತು. ಎಳೆಯದಿದ್ದರೆ ಹೊಡೆತ, ಕೆಲಸಕಳೆದು ಕೊಳ್ಳುವ ಅಂಜಿಕೆ. ಎರಡು ತಿಂಗಳು ನನಗೆ 'ಡಾಪ'ಕೆಲಸಕೊಟ್ಟರು. ಡಾಪ ಎಂದರೆ ನೂಲು ತುಂಬಿದ ಬಾಬಿನ್ ತೆಗೆಯುವುದು, ತಂತಿ ಜೋಡಿಸುವುದು. ಜಾಬರ್ ಪ್ರಭಾಕರ ಎಲ್ಲವನ್ನೂ ತಿಳಿಸಿ ಕಲಿಸುತ್ತಿದ್ದ. ನನ್ನ ಕೆಲಸದ ಮೇಲಿನ ಶ್ರದ್ಧೆ ನೋಡಿ, "ಡಾಫರ್" ತಾರವಾಲಾ ಕೆಲಸ ಕೊಟ್ಟರು. ಉತ್ತಮ ಕೆಲಸ ಮಾಡಿದರೆ ನಿನಗೆ ಸೈಡರ್‌ಕೆಲಸಕೊಡುವುದಾಗಿ ಹುರಿದುಂಬಿಸುತ್ತಿದ್ದ. ಆರು ತಿಂಗಳ ಬಳಿಕ ಸಂಬಳ ಎಪ್ಪತ್ತೈದಕ್ಕೆ ಏರಿತು. ಖುಷಿಯಿಂದ ದೇವರಿಗೆ ಹರಕೆ ಒಪ್ಪಿಸಿದೆ. ಕೆಲ ದಿನಗಳಲ್ಲಿ ಸೈಕಲ್‌ಕಲಿತೆ.

ನನ್ನ ನೌಕರಿ ನೋಡಿ ಭಾವೂ, ಭಾಭೀಗೆ ಸಂತೋಷವಾಯಿತು. ನಾನು ಸಾಕಷ್ಟು ಕಲಿತು ದೊಡ್ಡ ಮನುಷ್ಯನಾಗಬೇಕೆಂಬ ಆಶೆ ಅಪ್ಪನದು. ಆದರೆ ಗಿರಣಿಯಲ್ಲಿ ಕೆಲಸ ಮಾಡುತ್ತಿದ್ದ ನಾನು ದೊಡ್ಡ ಮನುಷ್ಯನಾಗುವುದು ಹೇಗೆ ಸಾಧ್ಯ? ನಾನೊಮ್ಮೆ ಸಂಬಳ ಪಡೆಯಲು ಹೋದಾಗ ಟೈಮ್ ಕೀಪರ್ ಪಾಟೀಲ ಕೇಳಿದ, "ಗಾಯಕವಾಡ, ನೀನು ಶಾಲೆ, ನೌಕರಿ ಎರಡೂ ಏಕೆ ಮಾಡಬಾರದು," ಆಗ ನಾನು ಶಾಲೆಗೆ ಹೋಗುವುದನ್ನು ನಿಶ್ಚಯಿಸಿದೆ. ಊರಿನಿಂದ ಟಿ.ಸಿ. ತರಿಸಿ ಲಾತೂರಿನ ಶಿವಾಜಿ ಹೈಸ್ಕೂಲಿನಲ್ಲಿ ಹೆಸರು ಹಚ್ಚಿದೆ. ಪಾಟೀಲರಿಗೆ ಹೇಳಿ ರಾತ್ರಿ ಪಾಳಿ ಹಾಕಿಸಿಕೊಂಡೆ. ಬೆಳಿಗ್ಗೆ ಏಳಕ್ಕೆ ಕೆಲಸ ಮುಗಿಸಿ ಬಂದು ನಿನ್ನೆಯ ರೊಟ್ಟಿ ತಿಂದು ಮಲಗುತ್ತಿದ್ದೆ. ಹತ್ತಕ್ಕೆ ಎದ್ದು ಶಾಲೆಗೆ ಹೋಗುತ್ತಿದ್ದೆ. ನಾನು ಶಾಲೆ ಕಲಿತು ನೌಕರಿ ಮಾಡುವುದನ್ನು ಕಂಡು ಕೆಲ ಜನ ಮೆಚ್ಚಿದರು. ಜನ ನನಗೆ ಲಕ್ಷ್ಮಣ ಗಾಯಕವಾಡ ಎಂದು ಗೌರವಿಸಲಾರಂಭಿಸಿದರು. ನೌಕರಿ, ಗೌರವ ಎರಡೂ ಸಿಕ್ಕಿದ್ದರಿಂದ ನನಗೆ ಅಭಿಮಾನವೆನಿಸಿತು.

ಒಮ್ಮೆ ದತ್ತ ಸಾವಂತನ ಮನೆಗೆ ಊಟಕ್ಕೆ ಹೋದೆ. ಎಲ್ಲರಿಗೆ ಸ್ಟೀಲ್ ತಾಟಿನಲ್ಲಿ ಬಡಿಸಿದರು. ತಾಟಿನಲ್ಲಿ ನೀಡಿದ ವಿವಿಧ ರೀತಿಯ ಪದಾರ್ಥ ನೋಡಿ ದಂಗಾದೆ. ಯಾವುದು ಮೊದಲು ತಿನ್ನಬೇಕೆಂದು ತಿಳಿಯಲಿಲ್ಲ. ಭಜಿ ತಿನ್ನಬೇಕೆನ್ನುವಷ್ಟರಲ್ಲಿ ದತ್ತು ಅನ್ನ ತೋರಿಸಿ ಸನ್ನೆ ಮಾಡಿದ. ಉಣ್ಣುವಾಗ ಕೈ ಕಂಪಿಸುತ್ತಿತ್ತು. ಎರಡೂ ಕೈ ಮುಸುರೆಮಾಡಿ ತಿನ್ನುವ ನಮಗೆ ಶಿಷ್ಟಾಚಾರ ಗೊತ್ತಿರಲಿಲ್ಲ. ಅಂತೂ ಹೇಗೋ ಉಂಡು, ತಾಟಿನಲ್ಲೇ ಕೈತೊಳೆದು, ಅದನ್ನು ತೊಳೆಯಲು ಹೊರಗೆತ್ತಿ ಒಯ್ದೆ. ದತ್ತು, "ನೋಡು ಲಕ್ಷ್ಮಣ, ಉಣ್ಣುವಾಗ ಎಡಗೈ ಬಳಸಬಾರದು. ಮೊದಲು ಅನ್ನಸಾರಿನ ಊಟ, ಅನಂತರ ಹೋಳಿಗೆ. ಎಲ್ಲರೊಂದಿಗೆ ಕೂಡಿಯೇ ಏಳುವುದು, ಉಂಡ ತಾಟಿನಲ್ಲಿ ಎಂದೂ ಕೈತೊಳೆಯಬಾರದು" ಎಂದಾಗ ಅಚ್ಚ

## ಪುಸ್ತಕ ವಿಭಾಗ

ರಿಗೊಂಡೆ. ಜೀವನದಲ್ಲಿ ಮೊದಲ ಬಾರಿಗೆ ನಗರದ ನಾಗರಿಕತೆ ಕಲಿಯುತ್ತಿದ್ದೇನೆ ಎಂದೆನಿಸಿತು.

ನನಗೆ ಈಗ ಈ ವಾಡೆಯಲ್ಲಿರಲು ಮನಸ್ಸಾಗಲಿಲ್ಲ. ರಾತ್ರಿ ಡ್ಯೂಟಿ ಮುಗಿಸಿ ಶಾಂತವಾಗಿ ಮಲಗಬೇಕೆಂದರೆ ಹೆಂಗಸರ, ಮಕ್ಕಳ ಕಿರಿಕಿರಿ. ಹೀಗಾಗಿ ನಾನು ಮನೆಯ ಸನಿಹದಲ್ಲಿದ್ದ ಸರಕಾರಿ ಗೋಡೌನಿನ ನೆರಳಿನಲ್ಲಿ ಮಲಗುತ್ತಿದ್ದೆ. ಆ ಗೋಡೌನಿನ ಎದುರಿಗೆ ಒಬ್ಬ ಇಂಜನಿಯರನ ಮನೆಯಿತ್ತು. ಆ ಮನೆಯಲ್ಲೊಂದು ಸುಂದರಳಾದ ಹುಡುಗಿಯಿದ್ದಳು. ನಾನು ನೆರಳಿನಲ್ಲಿ ಮಲಗಲು ಬಂದಾಗಲೆಲ್ಲ ಆಕೆ ಕಿಡಕಿಯಲ್ಲಿ ನಿಂತು ನಗುತ್ತಿದ್ದಳು. ನಾನು ನಾಚಿ ನೀರಾಗುತ್ತಿದ್ದೆ. ಓರ್ವ ಶ್ರೀಮಂತ ಕನ್ಯೆ ನನ್ನಂಥ ದರಿದ್ರನನ್ನು ನೋಡಿ ನಗುವುದೆಂದರೇನು ? ನನ್ನ ಮನಸ್ಸು ಅರಳುತ್ತಿತ್ತು. ನಾನೂ ತಿರುಗಿ ನಗುತ್ತಿದ್ದೆ. ಹೀಗೆ ಮೇಲಿಂದ ಮೇಲೆ ನಕ್ಕುಅವಳು ನನಗೆ ಹುಚ್ಚು ಹಿಡಿಸಿದಳು.

ನನ್ನ ಮನಸ್ಸಿನ ತುಂಬ ಆಕೆಯ ನೆನಪು. ನನ್ನ ಬದುಕಿನಲ್ಲಿ. ಆಕಸ್ಮಿಕವಾಗಿ ಪ್ರವೇಶಿಸಿದ ಈ ಶ್ರೀಮಂತ ಕನ್ಯೆಯಿಂದಾಗಿ ನಾನು ಕನಸು ಕಾಣಲಾರಂಭಿಸಿದೆ. ಅವಳ ಸುಂದರ ನಗುಮುಖ ಕಣ್ಣಿಗೆ ಕಟ್ಟಿದಂತಾಗಿ ಪಾಠದ ಕಡೆ ಮೊದಲಿನ ಹಾಗೆ ಲಕ್ಷ್ಯ ಹೋಗುತ್ತಿರಲಿಲ್ಲ. ಯಾವಾಗ ಶಾಲೆ ಬಿಡುತ್ತದೋ ಯಾವಾಗ ಆಕೆಯನ್ನು ಕಂಡೇನೋ ಎಂಬ ತವಕ. ಒಮ್ಮೆ ಶಾಲೆಗೆ ಹೊರಟಾಗ ನಾವಿಬ್ಬರೂ ರಸ್ತೆಯಲ್ಲಿ ಭೆಟ್ಟಿಯಾದೆವು. ಜೊತೆ, ಜೊತೆಯಾಗಿಯೇ ಹೊರಟೆವು. "ನೀವು ಯಾವ ಶಾಲೆಗೆ ಹೋಗ್ತೀರಿ ?"ಎಂದು ಆಕೆಯೇ ಧೈರ್ಯ ಮಾಡಿ ಕೇಳಿದಳು. ನಾನು ನಾಚಿದೆ. ಆದರೂ ಧೈರ್ಯ ತಂದುಕೊಂಡು, "ಶಿವಾಜಿ ಹೈಸ್ಕೂಲಿನಲ್ಲಿ ಒಂಭತ್ತನೆಯ ಕ್ಲಾಸು ಓದುತ್ತೇನೆ. ನೂಲಿನ ಗಿರಣಿಯಲ್ಲಿ ಕೆಲಸ ಮಾಡುತ್ತೇನೆ," ಎಂದು ಹೇಳಿದೆ.

ಆಕೆಯ ಹೆಸರು ಶೋಭಾ ಜಗತಾಪ ಎಂದು ತಿಳಿಯಿತು. ಆಕೆ ಸರಕಾರೀ ಹೆಣ್ಣುಮಕ್ಕಳ ಶಾಲೆಗೆ ಹೋಗುತ್ತಿದ್ದಳು. ದಿಟ್ಟ ಸ್ವಭಾವದಾಕೆ. ಬಂಗಾರದ ಉಂಗುರ, ಲಾಕೆಟ್ ಧರಿಸಿದ್ದಳು. ನಾನು ಆಕೆಯ ಶಾಲೆಯವರೆಗೆ ಹೋದೆ.

"ಶೋಭಾ, ನೀನು ಶ್ರೀಮಂತ ಘರಾಣೆದವಳು. ನಾನೋ ಕಡು ಬಡವ. ನಮ್ಮನ್ನು ನೋಡಿದ್ರೆ ಜನ ಏನಂದಾರು ?" ಎಂದು ಮನಬಿಚ್ಚಿ ಮಾತನಾಡಿದೆ. ಅದಕ್ಕೆ ಆಕೆ, "ಮಂದಿಗೆ ಅಂಜಿ ಕೂತರೆ ಹ್ಯಾಂಗ" ಎಂದು ಮರುಪ್ರಶ್ನೆ ಹಾಕಿದಾಗ, ನಾನು ಹುಚ್ಚನಂತಾದೆ. ಈಗ ಇಬ್ಬರೂ ಕೂಡಿಯೇ ಶಾಲೆಗೆ ಹೋಗಲಾರಂಭಿಸಿದೆವು. ಪ್ರೇಮಪತ್ರ ಬರೆಯಲಾರಂಭಿಸಿದೆವು. ಒಮ್ಮೆ ಹೀಗೆ ಬರೆದಿದ್ದಳು. "ತುಮ್ ಜಹಾಂ ಭೀ ಹೋ ಖುಶ್ ರಹೋ ಸನಮ್, ದಿಲ್ ದಿಲ್‌ಸೆ ಮಿಲಗಯಾ ತೋ ಕ್ಯಾ ಕಮ್ ಸನಮ್."

ನನ್ನ ಮಿತ್ರ ಮೋತಿಗೆ ಅವಳು ಬರೆದ ಪ್ರೇಮ ಪತ್ರವೊಂದನ್ನು ತೋರಿಸಿದ್ದೇ ತಪ್ಪಾಯಿತು. ಅವನೂ ಅವನಂತೆಯೇ ಅನೇಕ ಹುಡುಗರೂ ಅವಳ ಬೆನ್ನು ಹತ್ತಿದ್ದಾರೆಂದು ನನಗೆ ಗೊತ್ತಿರಲಿಲ್ಲ. ಅವನು ನನಗೇ ಬೆದರಿಸಿದ. ಆ ಪತ್ರವನ್ನು ಅವಳಿಗೆ ತೋರಿಸಿ ದಬಾಯಿಸಿದ. ಕೊನೆಗೆ ಅವಳ ತಮ್ಮನ ಸಹಾಯದಿಂದ ಆ ಪತ್ರ ಅವಳ ತಂದೆಯ ಕೈಗೆ ಸಿಗುವಂತೆ ಮಾಡಿದ. ಸಿಟ್ಟಿಗೆದ್ದ ತಂದೆ, ಆ ಪತ್ರಕ್ಕೆ ಬೆಂಕಿ ಹಚ್ಚಿ ಅವಳ ಗಲ್ಲದ ಮೇಲಿಟ್ಟ. ಗಲ್ಲ ಸುಟ್ಟು ಕರಕಾಯಿತು. ಕೆಲ

# ಊಚಲ್ಯಾ

ದಿನಗಳಲ್ಲಿ ಭೆಟ್ಟಿಯಾದ ಶೋಭಾ ನಡೆದ ಕಥೆಯನ್ನೆಲ್ಲ ಹೇಳಿದಳು. ಆಗ ನನ್ನ ಪ್ರೇಮದ ಅಮಲು ಇಳಿಯಿತು. ಸ್ನೇಹ ಎಂದರೇನು ಎಂದೂ ಅರ್ಥವಾಯಿತು. "ಇನ್ನು ನಾವು ಈ ಬಗೆಯ ಪ್ರೇಮಕ್ಕೆ ವಿದಾಯ ಹೇಳಿ ಅಣ್ಣತಂಗಿಯರಂತೆ ಇರೋಣ," ಎಂದೆ. ಆಕೆ ಬಿಕ್ಕಿ ಬಿಕ್ಕಿ ಅತ್ತಳು.

ಅನಂತರ ಆಕೆಯ ಮದುವೆ ಒಬ್ಬ ಶಿಕ್ಷಕನೊಂದಿಗೆ ಆಯಿತು. ನಾನಾಗ ಬಹಳ ಅತ್ತೆ. ಶ್ರೀಮಂತಳಾಗಿದ್ದರೂ ಒಬ್ಬ ಬಡವನನ್ನು ಪ್ರೀತಿಸಿದ ಶೋಭಾಳನ್ನು ಮರೆಯುವುದು ಸಾಧ್ಯವಿರಲಿಲ್ಲ.

ಹೀಗಿರುವಾಗ ಔರಂಗಾಬಾದ್ ನೂಲಿನ ಗಿರಣಿಯಲ್ಲಿ ಕೆಲಸ ಖಾಲಿಯಿದೆ, ಇನ್ನೂರು ರೂಪಾಯಿ ಅಡ್ವಾನ್ಸ್ ಕೊಡುತ್ತಾರೆ ಎಂಬ ಸುದ್ದಿ ಬಂತು. ಶಾಲೆಗೆ ಟಾಟಾ ಹೇಳಿದೆ. ಭಿಕ್ಷೆ ಬೇಡುತ್ತಾ ಅಲೆದಾಡುತ್ತಿದ್ದ ಹರಿಚಂದ್ರನನ್ನು ಕರೆಸಿಕೊಂಡೆ. ದೂರದ ಊರಿಗೆ ಹೋದರೆ ಹೊಸ ಅನುಭವ ಸಿಗುತ್ತದೆಂದು ಅಲ್ಲಿಗೆ ಹೋಗುವ ಮನಸ್ಸು ಮಾಡಿದೆ. ಕೊನೆಗೆ ೧೯೭೨ರಲ್ಲಿ ಔರಂಗಾಬಾದಿಗೆ ಹೋದೆ. ಔರಂಗಾಬಾದಿನ ಹೆಸರು ಇತಿಹಾಸದಲ್ಲಿ ಕೇಳಿದ್ದೆ. ಅಲ್ಲಿ ಹೋದರೆ ಅಜಂತಾ, ಎಲ್ಲೋರಾ ನೋಡಬಹುದಲ್ಲ ಎಂದು ಖುಷಿಯಾಯಿತು. ನಾನು, ಹರಿಚಂದ್ರ ಔರಂಗಾಬಾದಿಗೆ ಹೊರಟೆವು. ನಮ್ಮನ್ನೆಲ್ಲ ಸೈಡರ್ ಎಂದು ನಿಯುಮಿಸಿ ದಿನಕ್ಕೆ ಹತ್ತು ರೂಪಾಯಿ ಸಂಬಳ ನಿಶ್ಚಯಿಸಿ ವಾರಕ್ಕೊಮ್ಮೆ ಸಂಬಳದ ಬಟವಾಡೆ ಮಾಡುತ್ತಿದ್ದರು. ನಾವು ಲಾತೂರಿನಿಂದ ಬಂದ ನಾಲ್ಕೈದು ಜನ, ನೂಲಿನ ಗಿರಣಿಗೆ ಸಮೀಪದ ಗಾರಖೇಡಾ ಎಂಬ ಹಳ್ಳಿಯಲ್ಲಿ ಒಂದು ಮನೆ ಬಾಡಿಗೆ ಹಿಡಿದೆವು. ನಮ್ಮ ಬಳಿಯಿದ್ದ ಪೆಟ್ಟಿಗೆಯಲ್ಲಿ ಅಡಿಗೆ ಸಾಮಾನು ಇಟ್ಟುಕೊಂಡು, ನಾವೇ ಅಡಿಗೆ ಮಾಡಿಕೊಳ್ಳುತ್ತಿದ್ದೆವು. ಗಾರಖೇಡಾದಲ್ಲಿ ಮುಸಲ್ಮಾನರೇ ಬಹುಸಂಖ್ಯೆಯಲ್ಲಿದ್ದರು. ಹೊಸದಾಗಿ ಹೋದಾಗ ಅವರ ಭಾಷೆ, ನಡೆನುಡಿಗಳನ್ನು ನೋಡಿ ನಗುತ್ತಿದ್ದೆವು. ಮುದುಕಿಯರು ಸಹ ಚಡ್ಡಿ ಧರಿಸುತ್ತಿದ್ದರು. ಶುಕ್ರವಾರಕ್ಕೊಮ್ಮೆ ಸ್ನಾನ. ನಮಗೂ ಇದೇ ರೂಢಿಯಾಯಿತು. ರಜೆಯದಿನ ಸೈಕಲ್ಲೇರಿ, ಬೀಬೀಕಾ ಮಕಬರಾ, ದೌಲತಾಬಾದ್ ಕೋಟೆ ಸುತ್ತಾಡಿ ಬಂದೆವು. ಹೀಗೆ ನನ್ನ ಜೀವನ ವ್ಯವಸ್ಥಿತವಾಗಿ ಸಾಗಿತ್ತು.

ಒಮ್ಮೆ ರಶಿಯಾ ಪ್ರವಾಸ ಮಾಡಿದ ಗೃಹಸ್ಥನೊಬ್ಬನ ಭಾಷಣವಿತ್ತು. "ರಶಿಯಾದಲ್ಲಿ ಮಾಲಿಕ ಮತ್ತು ಶ್ರಮಿಕರಲ್ಲಿ ಯಾವ ಭೇದಭಾವವೂ ಇಲ್ಲ. ಅವರೆಲ್ಲ ಸುಖವಾಗಿದ್ದಾರೆ" ಎಂದೆಲ್ಲ ಹೇಳಿದ. ಆಗ ನಾನು, "ಭಾರತದಲ್ಲಿ ಏಕಿಲ್ಲ ?" ಎಂದು ಕೇಳಿದೆ. ಅದಕ್ಕಾತ ಏನೇನೋ ಉತ್ತರಕೊಟ್ಟು, "ನೀವು ಜಾಣರ ಹಾಗೆ ಕಾಣುತ್ತೀರಿ. ಆಗಾಗ ಬಂದು ಭೆಟ್ಟಿಯಾಗಿರಿ," ಎಂದು ಹೇಳಿದ. ಅಂದಿನಿಂದ ಗಿರಣಿಯ ಅಧಿಕಾರಿಗಳೆಲ್ಲ ನನ್ನನ್ನು ಗೌರವದಿಂದ ಕಾಣಲಾರಂಭಿಸಿದರು. ಲಾತೂರಿನ ತಾಂದಳೆ ಎಂಬ ಮ್ಯಾನೇಜರ ನನ್ನನ್ನು ಬಹಳ ಪ್ರೋತ್ಸಾಹಿಸಿದರು.

ಕೆಲವು ದಿನಗಳ ಬಳಿಕ ಅಪ್ಪನನ್ನು ಕಾಣಲು ನಾನು ಧನೇಗಾಂವಿಗೆ ಹೋದೆ. ಈಗ ಮಾಣಿಕ ದಾದಾ ಮತ್ತು ಭಗವಾನ್ ಇಬ್ಬರಿಗೂ ಲಾತೂರಿನ ಗಿರಣಿಯಲ್ಲಿ ಕೆಲಸ ಸಿಕ್ಕಿತ್ತು. "ನಾನೀಗ ಮುದುಕ ಆಗೇನಿ. ಪಟಕ್ಕನೆ ಸತ್ತರೆ ನೋಡುವವರು ಯಾರು ? ಅದಕ್ಕೆ ನೀ ಇಲ್ಲೇ ಬಂದು




ಬಿಡು," ಎಂದು ಅಪ್ಪ ಹೇಳಿದ. ಜನ್ಮಕೊಟ್ಟ ತಂದೆಯನ್ನು ಹೀಗೆ ತಿರಸ್ಕರಿಸುವುದೆ ? ಎಂದು ನನಗೆ ನನ್ನ ಮೇಲೆಯೆ ಸಿಟ್ಟು ಬಂತು. ಇಲ್ಲೇ ಒಂದು ನೌಕರಿ ಹಿಡಿದು, ಅಪ್ಪನನ್ನು ಮತ್ತು ಹರಿಚಂದ್ರನನ್ನು ಸಾಕಬೇಕೆಂದು ನಿಶ್ಚಯಿಸಿದೆ. ಅಪ್ಪನಿಗೆ ಸಮಾಧಾನ ಹೇಳಿ ಧನೇಗಾಂವಿಗೆ ಬಂದೆ. ಧನೇಗಾಂವಿನಲ್ಲಿ ಈಗ ನಮ್ಮವರು ಯಾರೂ ಇಲ್ಲ. ಯಾವ ಊರಿನಲ್ಲಿ ನಾನು ಭಿಕ್ಷುಕನಂತೆ ಉಪವಾಸವಿದ್ದು ಬಾಳುತ್ತಿದ್ದೆನೋ ಅವರಿಗೆ ನಾನೀಗ ಸುಸ್ಥಿತಿಯಲ್ಲಿ ಇದ್ದೇನೆಂದು ತೋರಿಸಬೇಕಾಗಿತ್ತು. ನಾನು ಊರಲ್ಲಿ ಶುಭ್ರ ಬಟ್ಟೆತೊಟ್ಟು ತಿರುಗಾಡತೊಡಗಿದೆ. ಹಾದಿಯಲ್ಲಿ ಭೆಟ್ಟಿಯಾದವರಿಗೆ ನಮಸ್ಕರಿಸುತ್ತಿದ್ದೆ. ಅವರು ಏಕ ವಚನ ಬಳಸುವುದನ್ನು ನೋಡಿ, ನಾನು ನನ್ನೂರು ಎಂಬ ಭಾವನೆಯಿಂದ ಇಲ್ಲಿಗೆ ಬಂದರೆ ಇವರ ಪ್ರವೃತ್ತಿಯೇ ಬದಲಾಗಲಿಲ್ಲವಲ್ಲ ಎಂದು ಕೆಡಕೆನಿಸುತ್ತಿತ್ತು.

ಅಂದು ಅಪ್ಪನನ್ನು ಕಂಡು ನೇರವಾಗಿ ತೋಟದ ಮಾಲಿಕನ ಮನೆಗೆ ಹೋದೆ. ಕೃಷ್ಣಾಬಾಯಿ ತೆಂಗಿನ ಗರಟೆಯಲ್ಲಿ ಚಹಾ ಕೊಟ್ಟರು. ನನ್ನ ನೌಕರಿ ಸುದ್ದಿ ಕೇಳಿ ಸಂತೋಷಪಟ್ಟರು. ಅಲ್ಲಿಂದ ಹಳೇ ಸ್ನೇಹಿತ ತುಕ್ಯಾನನ್ನು ಭೆಟ್ಟಿಯಾದೆ. ಈಗವನು ಮಂಗನಾಟದಿಂದ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದ. ನಾರ್‍ಯಾ ಮಾತ್ರ ಈಗಲೂ ಕಳ್ಳತನ ಮಾಡುತ್ತಿದ್ದ. ಹಾಗೆಯೇ ಅಣ್ಣಾ, ದಾದಾ, ವಾಸಿಸುತ್ತಿದ್ದ ಲಾತೂರಿಗೆ ಹೋದೆ. ಈಗವರಿಗೆ ಗಿರಣಿಯಲ್ಲಿ ಕೆಲಸ ಸಿಕ್ಕಿತ್ತು. ನೂಲಿನ ಗಿರಣಿಯ ಹಳೇ ಸ್ನೇಹಿತರನ್ನು ಕಂಡೆ. ಜಾಬರ್ ಕೆಲಸ ಮಾಡುತ್ತಿದ್ದ ಕೋಕಣೆಗೆ ಸಹಜವಾಗಿ ಕೇಳಿದೆ, "ಮಿಲ್ಲಿನಲ್ಲಿ ನನ್ನನ್ನು ಕೆಲಸಕ್ಕೆ ಸೇರಿಸಿಕೊಳ್ತೀರೇನು ?" "ನಿನಗ ಮಾಡೋ ಇಚ್ಛಾ ಅದ ಏನು ?" ಅವನು ಪ್ರಶ್ನಿಸಿದ. "ಅಪ್ಪ ಬಹಳ ಸೋತ ಹೋಗ್ಯಾನ. ಅದಕ್ಕ ಇಲ್ಲೇ ಬರಬೇಕಂತ ಮನಸ್ಸದ" ಅಂತೂ ಕೋಕಣೆಯ ಸಹಾಯದಿಂದ ಲಾತೂರ ಮಿಲ್ಲಿನಲ್ಲಿ ಕೆಲಸಕ್ಕೆ ಸೇರಿದೆ.

ಈಗ ಅಪ್ಪ, ತಮ್ಮನನ್ನು ಸಾಕುತ್ತೇನೆ, ಸಾಹೇಬರ ಜೊತೆ ತಲೆಯೆತ್ತಿ ನಿಲ್ಲುತ್ತೇನೆ ಎಂಬ ಸಮಾಧಾನವಾಯಿತು. ಅಪ್ಪನ ಹೆಸರನ್ನು ಮಾರುತಿ ಎಂದು ಬದಲಿಸಿದೆವು. 'ಮರಾಠಾ' ಎಂದು ಸುಳ್ಳು ಹೇಳಿ ಒಳ್ಳೆಯ ಮನೆ ಬಾಡಿಗೆ ಹಿಡಿದೆವು. ಆದರೂ ಕಳ್ಳತನ ಮಾಡುವವರ ಸಂಬಂಧ ನಮಗಿದ್ದೇ ಇತ್ತು. ನನ್ನ ಅಣ್ಣನ ಮಾವ ಕಳ್ಳತನ ಮಾಡಲು ಲಾತೂರಿಗೆ ಬಂದಾಗಲೆಲ್ಲ ನನ್ನಲ್ಲೇ ವಾಸ್ತವ್ಯ ಹೂಡುತ್ತಿದ್ದ. ಅವನ ಹೆಂಡತಿ ಎಲ್ಲವ್ವ ಕಳ್ಳತನದಲ್ಲಿ ತುಂಬಾ ಜಾಣೆ. ಗಂಡ ಹೆಂಡಿರಿಬ್ಬರೂ ಲಾತೂರಿಗೆ ಬಂದರೆ ನಾಲ್ಕೈದು ಸಾವಿರ ಗಳಿಸುತ್ತಿದ್ದರು. ಆಕೆಯಿಂದಾಗಿ ನಮಗೂ ಹೆಂಡ, ಹಂದಿ ಮಾಂಸದ ಮೇಜವಾನಿ. ಕೆಲವು ದಿನಗಳ ಬಳಿಕ ಹಳೆ ಸೈಕಲ್ ಖರೀದಿಸಿದೆ. ಮಿಲ್ಲಿನಲ್ಲಿ ನಿಷ್ಠೆಯಿಂದ

# ಉಚಲ್ಯಾ

ಕೆಲಸ ಮಾಡಲಾರಂಭಿಸಿದೆ. ಹೀಗಿರುವಾಗ ನನಗೂ ಮದುವೆಯ ವಯಸ್ಸಾಯಿತು. ಮದುವೆಯಾಗುವ ಮನಸ್ಸಾಯಿತು. ದಾದಾ, ಕವಠೆಯ ಕನ್ಯೆಯನ್ನು ನಿಶ್ಚಯಿಸಿದ. ಅಣ್ಣಾ ಜಾವಳಿಯ ಹುಡುಗಿಯನ್ನು ನಿಶ್ಚಯಿಸಿದ. ನಮ್ಮಲ್ಲಿ ಹಿರಿಯರೆಲ್ಲ ಸೇರಿ ಮದುವೆ ನಿಶ್ಚಯಿಸುವಾಗ ಮದುಮಗನನ್ನು ಕೇಳುವ ಪರಿಪಾಠವಿಲ್ಲ. ಕವಠೆಯ ಕನ್ಯೆ ನೋಡಲು ಸುಂದರವಾಗಿದ್ದಳು. ಅವರಿಗೆ ಹೊಲ-ಮನೆಯಿತ್ತು. ಅವಳನ್ನೇ ಮದುವೆಯಾಗಬಹುದಲ್ಲ? ಎಂದು ದಾದಾನ ವಿಚಾರ. ಜಾವಳಿಯವರು ಬೇಡಿದ್ದನ್ನು ಕೊಡುತ್ತಾರೆ. ಬೇಕಿದ್ದರೆ ಕಿರಾಣಿ ಅಂಗಡಿ ಹಾಕಿ ಕೊಡುತ್ತಾರೆ. ಆದ್ದರಿಂದ ಜಾವಳಿಯ ಕನ್ಯೆಯನ್ನೇ ಮದುವೆಯಾಗು ಎಂದು ಅಣ್ಣನ ಒತ್ತಾಯ. ನಾನು ಗೊಂದಲದಲ್ಲಿ ಬಿದ್ದೆ. ಕೊನೆಗೂ ಕವಠೆಯ ಹುಡುಗಿಯನ್ನೇ ಮದುವೆಯಾಗಲು ನಿಶ್ಚಯಿಸಿದೆ.

ಮದುವೆಯ ದಿನವೂ ಗಲಾಟೆ-ಜಗಳ. ಅಣ್ಣನ ಹೆಂಡತಿ ಬೇಕೆಂದೇ ಜಗಳಾಡುತ್ತಿದ್ದಳು. ಜಾವಳಿಯ ಸಂಬಂಧ ತಿರಸ್ಕರಿಸಿದ್ದರಿಂದ ಅವಳಿಗೆ ಸಿಟ್ಟು ಬಂದಿತ್ತು. ನನ್ನ ಮಿಲ್ಲಿನ ಸ್ನೇಹಿತರೆಲ್ಲ ಮದುವೆಗೆ ಬಂದಿದ್ದರು. ಮೊದಲೇ ನಿಶ್ಚಿತವಾದ ಸ್ಥಳಕ್ಕೆ ಬಂದ ನೆಂಟರು, ಪರಸ್ಪರ ಅಡಿಕೆ ಕೊಟ್ಟು ಅಪ್ಪಿಕೊಂಡರು. ನನಗೆ ಉಡುಗೊರೆ ಕೊಟ್ಟರು. ನಾನು ಬೂಟು, ಪ್ಯಾಂಟು-ಶರ್ಟು ಧರಿಸಿ ಆಕರ್ಷಕವಾಗಿ ಕಾಣುತ್ತಿದ್ದೆ. ಅಂತೂ ಸರಿಯಾದ ಕಾಲಕ್ಕೆ ಮದುವೆಯ ಶಾಸ್ತ್ರ ಮುಗಿಯಿತು.

ಮದುವೆಯ ನಂತರವೂ ಸಮಸ್ಯೆ ಬಗೆಹರಿಯಲಿಲ್ಲ. ನಾನು ಮಿಲ್ಲಿಗೆ ಹೋದಾಗ ಮನೆಯಲ್ಲಿದ್ದ ನನ್ನ ಹೆಂಡತಿ ಛಬೂಳಿಗೆ ವೈನಿ ಬಂದು ಏನೇನೊ ಚಾಡಿ ಹೇಳುತ್ತಿದ್ದಳು. ಹೆಂಡತಿ ಬಾಗಿಲಲ್ಲಿ ನಿಂತರೆ ನನಗೆ ಸಂಶಯ. ಸಿಟ್ಟಿನಿಂದ ಆಕೆಯನ್ನು ಥಳಿಸುತ್ತಿದ್ದೆ. ವೈನಿ, ಛಬೂಳ ನಡತೆ ಸರಿಯಾಗಿಲ್ಲವೆಂದು ನನ್ನ ತಲೆ ಕೆಡಿಸುತ್ತಿದ್ದಳು. ಒಮ್ಮೆ ನನ್ನ ಹೊಡೆತ ತಾಳಲಾರದೆ ಛಬೂ ತಾಯಿಯ ಮನೆಗೆ ಹೋದಳು. ಆ ಸಮಯದಲ್ಲಿ ಶಿವಾನಿಂದ ನನಗೆ ನಿಜ ಸಂಗತಿ ತಿಳಿಯಿತು. "ನಿನ್ನ ಹೆಂಡತಿ ಓಡಿಹೋಗಲು ವೈನಿಯೇ ಕಾರಣ. ನೀನು ಛಬೂಳನ್ನು ಬಿಟ್ಟರೆ ಜಾವಳಿ ಹುಡುಗಿಯನ್ನು ತರುವ ವಿಚಾರ ವೈನಿಯದು" ಎಂದಾಗ ನಾನು ಎಚ್ಚರಗೊಂಡೆ. ಅಂದಿನಿಂದ ನಮ್ಮ ಸಂಸಾರ ಸರಿಯಾಗಿ ನಡೆಯಲಾರಂಭಿಸಿತು.

ನನಗೆ ಬರುವ ಸಂಬಳ ತಿಂಗಳ ಖರ್ಚಿಗೆ ಸಾಕಾಗುತ್ತಿರಲಿಲ್ಲ. ಹರಿಚಂದ್ರ ಸರಿಯಾಗಿ ಕೆಲಸ ಮಾಡುತ್ತಿರಲಿಲ್ಲ. ಅವನ ಸೋಮಾರಿತನ ಕಂಡು ತಲೆ ಚಿಟ್ಟು ಹಿಡಿದು ಹೊಡೆಯುತ್ತಿದ್ದೆ. ದುಡಿಯದಿದ್ದರೆ ಅನ್ನ ಹಾಕಬೇಡವೆಂದು ಹೆಂಡತಿಗೆ ಹೇಳಿದ್ದೆ. ಇದರ ಪರಿಣಾಮವಾಗಿ ಹರಿಚಂದ್ರ ಪೇಟೆಯಲ್ಲಿ ಬಾಳೇಹಣ್ಣು ಕದ್ದು ತಿನ್ನುವುದನ್ನು ಆರಂಭಿಸಿದ. ನಾನು ಕೆರಳಿ, "ನಾಳೆಯಿಂದ ಲಾತೂರಿನ ಆಸುಪಾಸು ಎಲ್ಲಿದ್ದರೂ ಪೊಲೀಸರಿಗೆ ಹಿಡಿದುಕೊಡ್ತೀನಿ," ಎಂದು ಬೆದರಿಸಿದೆ. ಅಂದು ಮನೆ ಬಿಟ್ಟು ಹೋದವನು ಇಂದಿಗೆ ಹತ್ತು ವರ್ಷಗಳಾದರೂ ಮುಖ ತೋರಿಸಿಲ್ಲ. ಬಡತನದಿಂದಾಗಿ ಇರುವ ಒಬ್ಬ ತಮ್ಮನನ್ನೂ ಕಳೆದುಕೊಳ್ಳಬೇಕಾಯಿತಲ್ಲ ಎಂದು ಖೇದವೆನಿಸುತ್ತದೆ.

ಅಣ್ಣನ ಬಳಿಯಿದ್ದ ಅಪ್ಪನನ್ನು ಕರೆಸಿಕೊಂಡೆ. ನನಗೆ ಈ ನೌಕರಿಯ ಜೊತೆಗೆ ಇನ್ನೊಂದು ಉದ್ಯೋಗವನ್ನೇಕೆ ಮಾಡಬಾರದೆಂದು ಅನಿ

ಸಿತು. ಅಂತೆಯೆ ಮನೆಯೆದುರು ತರಕಾರಿ ಅಂಗಡಿಯನ್ನು ತೆರೆದು ಅದರಲ್ಲಿ ನನ್ನ ಹೆಂಡತಿಯನ್ನು ಕೂಡ್ರುವಂತೆ ಸೂಚಿಸಿದೆ. ಇದರಿಂದ ಸ್ವಲ್ಪ ಸ್ವಲ್ಪ ಲಾಭವಾಗುತ್ತಿತ್ತು. ಆದರೆ ಈಗೀಗ ಗಿರಣಿಯ ಕೆಲಸದ ಬಗ್ಗೆ ಬೇಸರ ಬರುತ್ತಿತ್ತು. ಗಂಡನಿಂದ ಹೊಡೆತ ತಿನ್ನುವ ಹೆಂಡತಿಯಂತೆ ನಮ್ಮ ಗತಿಯಾಯಿತು. ಸೂಪರ್‌ವೈಜರ್ ನಮ್ಮನ್ನು ಹೆಂಡತಿಗೆ ಹೊಡೆಯುವಂತೆ ಹೊಡೆಯುತ್ತಿದ್ದ. ಅಶ್ಲೀಲವಾಗಿ ಬೈಯುತ್ತಿದ್ದ. ಮಶೀನು ಹೊಲಸಾದರೆ ಬಡಿದು ಅರ್ಧಕ್ಕೆ ಕಳಿಸುತ್ತಿದ್ದ. ಊಟ ಮುಗಿಸಿ ಬರಲು ವೇಳೆಯಾದರೆ ಹಸಿ ಬರಲಿನಿಂದ ಥಳಿಸುತ್ತಿದ್ದ. ಇಂಥ ಎಷ್ಟೋ ಅನ್ಯಾಯಗಳು ನೂಲಿನ ಗಿರಣಿಯಲ್ಲಿ ನಡೆಯುತ್ತಿದ್ದವು. ಒಮ್ಮೆ ದೂರದ ಊರಿನಿಂದ ಒಬ್ಬ ಸೈಡರ್ ಬಂದಿದ್ದ. ಅವನ ಹೆಸರು ರಾಮಣ್ಣ. ಉಣ್ಣುವಾಗ ಅವನನ್ನು ಕೇಳಿದೆ, "ರಾಮಣ್ಣಾ, ನೀನು ಯಾವ-ಯಾವ ಕಡಿ ಕೆಲಸ ಮಾಡಿದ್ದೀ ?" ಅವನು ಹೇಳಿದ, "ಗೋಕಾಕ ಮಿಲ್ಲಿನ್ಯಾಗ ಕೆಲಸ ಮಾಡೇನಿ. ಹಾಂಗನೋಡಿದರೆ ಭಾಳಕಡಿ ಮಾಡೇನಿ. ಆದರೆ ಲಾತೂರ ಗಿರಣ್ಯಾಗ ಆಗುವಷ್ಟು ತ್ರಾಸ ಮತ್ತೆಲ್ಲೂ ಇಲ್ಲ."

"ಯಾಕಿಲ್ಲ ?" ಮತ್ತೆ ಪ್ರಶ್ನಿಸಿದೆ.

"ಅಲ್ಲಿ ಕಾಮಗಾರಿ ಪುಢಾರಿ ಇರ್ತಾನ. ಅಂವ ಹಿಂಗ ತ್ರಾಸ ಕೊಡಾಕ ಬಿಡೋದಿಲ್ಲ."

ಅದನ್ನು ಕೇಳಿ ನನಗೂ ಒಂದು ಸಂಘಟನೆ ಕಟ್ಟಿ ಈ ಅನ್ಯಾಯವನ್ನೇಕೆ ತಡೆಯಬಾರದು ಅನ್ನಿಸತೊಡಗಿತ್ತು. ಈಗ ನೌಕರಿಯ ಬಗ್ಗೆ ಇದ್ದ ಅಂಜಿಕೆ ದೂರವಾಯಿತು. ಹೀಗಿರುವಾಗ ಮೇ ಒಂದರ ಕಾರ್ಮಿಕರ ದಿನಾಚರಣೆ ಬಂತು. ಆ ದಿನ ಪ್ರದರ್ಶನ ಮುಗಿದ ಬಳಿಕ ಕ್ಯಾಂಟೀನಿನಲ್ಲಿ ಕಾರ್ಮಿಕರ ಸಭೆ ಸೇರಿತು. ಯಾರೂ ಮಾತನಾಡಲು ಸಿದ್ಧರಿರಲಿಲ್ಲ. ಕೊನೆಗೆ ನಾನೇ ಧೈರ್ಯ ಮಾಡಿ ಎದ್ದು ನಿಂತೆ. ಸಾಹೇಬರು ಕೂತ ಟೇಬಲ್ ಹತ್ತಿರ ಹೋದೆ. ಮತ್ತು ಭಾಷಣ ಮಾಡಲಾರಂಭಿಸಿದೆ: "ನಮಗೆ ಕೈಕಾಲು, ತಲೆ, ಹೊಟ್ಟೆಗಳಿವೆ. ಇವೆಲ್ಲ ಒಟ್ಟಿಗೆ ನಡೆದರೆ ಶರೀರ ಸರಿಯಾಗಿ ಕೆಲಸ ಮಾಡುತ್ತದೆ. ಅದೇ ರೀತಿ, ಮಿಲ್ಲಿನಲ್ಲಿ ಕಾರ್ಮಿಕರಿದ್ದರೇನೇ ಸಾಹೇಬರಿಗೆ ಪ್ರಾಮುಖ್ಯತೆ. ನಮ್ಮ ಕೆಲಸ ಬೇರೆ ಬೇರೆಯಾಗಿದ್ದರೂ ನಾವೆಲ್ಲ ಮನುಷ್ಯರೆ. ನಾವೆಲ್ಲರೂ ಸೇರಿ ಮಹಾತ್ಮಾ ಗಾಂಧೀಜಿಯ ಕನಸು ಸಾಕಾರಗೊಳಿಸೋಣ. ಭಾಷಣ ಮುಗಿಸಿ ಕುಳಿತಾಗ ಎಲ್ಲರೂ ಚಪ್ಪಾಳೆ ತಟ್ಟಿದರು. ಮ್ಯಾನೇಜರ ಮೆಚ್ಚಿ ಹನ್ನೊಂದು ರೂಪಾಯಿ ಬಹುಮಾನ ಕೊಟ್ಟರು. ಅಂದಿನಿಂದ ಯಾವುದೇ ಸಭೆ ನಡೆಯುವಾಗ, ನಾನು ಭಾಷಣ ಮಾಡುವಂತೆ ಮ್ಯಾನೇಜರ ಸಾಹೇಬರೇ ಹೇಳುತ್ತಿದ್ದರು. ನನ್ನ ಭಾಷಣವನ್ನು ಎಲ್ಲರೂ ಮೆಚ್ಚುತ್ತಿದ್ದರು.

ಹೀಗಿರುವಾಗ ಅಗಸ್ಟ್ ೧೪ ರಂದು, ನಾಳೆ ಬೆಳಿಗ್ಗೆ ಒಂಭತ್ತು ಗಂಟೆಗೆ ಬರಬೇಕು. ಅನಂತರ ರಜೆ ಎಂಬ ನೋಟೀಸು ಅಂಟಿಸಲಾಯಿತು. ಮರುದಿನ ಬೆಳಿಗ್ಗೆ ಎರಡು ಸಾವಿರ ಕಾರ್ಮಿಕರು ಧ್ವಜಕಟ್ಟೆಗೆ ಬಂದರು. ಮ್ಯಾನೇಜರ್ ಧ್ವಜಾರೋಹಣ ಮಾಡಿದರು. ಕಾರ್ಮಿಕರ ಪರವಾಗಿ ಮಾತಾಡಲು ಯಾರೂ ಮುಂದೆ ಬರಲಿಲ್ಲ. "ಗಾಯಕವಾಡ ಬಂದಾನೇನು ?" ಮ್ಯಾನೇಜರ್ ಕೇಳಿದರು.

"ಹೌದು ಸಾಹೇಬರೆ," ನಾನು ಉತ್ತರಿಸಿದೆ.

"ನಾಲ್ಕು ಮಾತಾಡು," ಅಂದರು. ನಾನು ಅವರ ಪಕ್ಕದಲ್ಲಿ ನಿಂತು ಮಾತಾಡಲಾರಂಭಿಸಿದೆ:

# ಊಚಕಲ್ಯಾ

"ನಮ್ಮ ದೇಶವನ್ನು ಗಾಂಧೀಜಿ, ನೆಹರು ಮುಂತಾದವರು ಬಹಳ ತ್ಯಾಗಮಾಡಿ ಸ್ವತಂತ್ರ ಗೊಳಿಸಿದ್ದಾರೆ. ಬಡವನಿಗೆ ಸುಖ ಸಿಗಬೇಕೆಂದು ಗಾಂಧೀಜಿ ಪ್ರಯತ್ನಿಸಿದರು. ಆದರೆ ಈಗಲೂ ಆಂಗ್ಲರಂತೆ ಹಸಿ ಬರಲಿನಿಂದ ಹೊಡೆಯುತ್ತಾರೆ. ಬಹುಶಃ ಮ್ಯಾನೇಜರ್ ಸಾಹೇಬರಿಗೆ ಗೊತ್ತಿರಲಿಕ್ಕಿಲ್ಲ. ಕಾರ್ಮಿಕ ಎರಡು ನಿಮಿಷ ತಡವಾಗಿ ಬಂದರೆ, ಗೈರು ಹಾಜರ ಹಾಕುತ್ತಾರೆ. ಎಂಟುಗಂಟೆ ದುಡಿದರೂ ನಾಲ್ಕೇ ಗಂಟೆ ಎಂದು ಬರೆಯುತ್ತಾರೆ. ಹದಿನಾಲ್ಕು ವರ್ಷದ ಎಳೆ ಹುಡುಗರಿಂದ ಎರಡು ತಿಂಗಳು ಪುಕ್ಕಟೆ ದುಡಿಸಿಕೊಳ್ಳಲಾಗುತ್ತದೆ. ಕಾರ್ಮಿಕರಿಗೆ ವ್ಯವಸ್ಥಿತವಾಗಿ ಸಂಬಳ ಕೊಡುತ್ತಿಲ್ಲ. ಬೋನಸ್ ಕೂಡ ಕಡಿಮೆಯೆ. ಕಾರ್ಮಿಕರಿಂದ ಕೆಲಸ ಮಾಡಿಸಿ, ಆದರೆ ಹೊಡೆಯುವುದು ಸರಿಯಲ್ಲ." ಜನ ಚಪ್ಪಾಳೆ ಹೊಡೆಯಲಾರಂಭಿಸಿದರು. ನಾನು ಮಕ್ಕಳಂತೆ ಬಿಕ್ಕಿ ಬಿಕ್ಕಿ ಅಳುತ್ತಲೇ ಭಾಷಣ ಮುಗಿಸಿದೆ. ಆಗ ಮ್ಯಾನೇಜರ್ ಭಾಷಣ ಮಾಡಲು ಎದ್ದು ನಿಂತರು. ಅವರಿಗೆ ಸಿಟ್ಟು ಬಂದಂತಿತ್ತು. "ಕಾರ್ಮಿಕ ಮಿತ್ರರೆ, ಲಕ್ಷ್ಮಣ ಗಾಯಕವಾಡ ಹೇಳಿದ ಮಾತೆಲ್ಲ ಸತ್ಯವಾಗಿದ್ದರೆಇದುನಿಜಕ್ಕೂದುಃಖದಸಂಗತಿ. ಇನ್ನು ಮುಂದೆ ಜಾಬರ್, ಸೂಪರ್‌ವೈಜರ ಹೊಡೆಯುವುದನ್ನು ನಿಲ್ಲಿಸಬೇಕು. ಪ್ರೀತಿಯಿಂದ ಕೆಲಸ ಮಾಡಿಸಿಕೊಳ್ಳಬೇಕು. ಆದರೆ ಕಾರ್ಮಿಕರೂ ಕೆಲಸ ತಪ್ಪಿಸಬಾರದು. ಮೊದಲಿನಂತೆ ಕೆಲಸ ಮಾಡಬೇಕು ಎಂದರು. ಕಾರ್ಮಿಕರಿಗೆಲ್ಲ ಸಿಹಿ ತಿಂಡಿ ಹಂಚಲಾಯಿತು. ಅನಂತರ ಸಭೆ ಮುಗಿಯಿತು.

ಕಾರ್ಮಿಕರಿಗೆಲ್ಲ ನನ್ನ ಬಗ್ಗೆ ಗೌರವ ಹುಟ್ಟಿತು. ನಾನು ಅವರನ್ನು ಸಂಘಟಿಸಿ ಯೂನಿಯನ್ ಸ್ಥಾಪಿಸಿದೆ. ಈಗ ನಾನು ಕಾರ್ಮಿಕ ನಾಯಕನಾಗಿದ್ದೆ. ಆದರೆ ಜಾಬರ್ ಮತ್ತು ಸೂಪರ್‌ವೈಜರಿಗೆ ಮಾತ್ರ ನನ್ನ ಮೇಲೆ ಸಿಟ್ಟು ಬಂದಂತಿತ್ತು.

ಮರುದಿನದಿಂದ ಮಿಲ್ ಆರಂಭವಾಯಿತು. ಆದರೆ ಕಾರ್ಮಿಕರ ಸ್ಥಿತಿ ಸ್ವಲ್ಪವೂ ಸುಧಾರಿಸಲಿಲ್ಲ. ಅವರಿಗೆ ವ್ಯವಸ್ಥಿತವಾಗಿ ಸಂಬಳ ಕೊಡುತ್ತಿರಲಿಲ್ಲ. ಹೀಗಾಗಿ ಅವರು ಸಾಲ ಮಾಡಬೇಕಾಗುತ್ತಿತ್ತು. ಹತ್ತು ದಿನಕ್ಕೆ ಹತ್ತರಿಂದ ಹದಿನೈದು ರೂಪಾಯಿ ಬಡ್ಡಿ. ಅಲ್ಲದೆ ಸಂಬಳದ ದಿನ, ಬಡ್ಡಿ ಸಾವುಕಾರ, ಅಂಗಡಿಯವ, ಸೆರೆಯಂಗಡಿಯವರು, ಹಣ ಕೊಡದಿದ್ದರೆ ಕಸಿದು ಕೊಳ್ಳುತ್ತಿ



ಪುಸ್ತಕ ವಿಭಾಗ

ದ್ದರು. ಪರಿಣಾಮವಾಗಿ ಹೊಡೆದಾಟವಾಗುತ್ತಿತ್ತು.

ನಮ್ಮಲ್ಲಿ ಬಹಳ ಜನಕ್ಕೆ ಟಿ.ಬಿ.ರೋಗ ಬಂತು. ಉಪವಾಸ, ಹಣದ ಕೊರತೆಯಿಂದ ಸತ್ತ ಎಷ್ಟೋ ಜನರನ್ನು ನಾನು ಕಂಡಿದ್ದೇನೆ. ಇದನ್ನು ಕಂಡು ನನ್ನ ತಲೆ ಗಿರ ಗಿರ ತಿರುಗುತ್ತಿತ್ತು. ನಾನೂ ಸಾಲ ಮಾಡಿದ್ದೆ. ಸಂಬಳದ ಅರ್ಧ ಹಣವೇ ಸಾಲ ತೀರಿಸಲು ಹೋಗುತ್ತಿತ್ತು. ಈ ಅನ್ಯಾಯ ಸಹಿಸುವುದು ಸಾಧ್ಯವಿರಲಿಲ್ಲ.

ಕೊನೆಗೆ ನಾನು ಸಂಗಾತಿಗಳಾದ ಜಗತಾಪ, ಶಿವಾಜಿ ಪಾಟೀಲ, ಜಗನ್ನಾಥ ಧುಳೆ ಇವರೊಂದಿಗೆ ಸೇರಿ, ಕೆಂಪು ಬಾವುಟದ ಯೂನಿಯನ್ ಲೀಡರ್, ವಕೀಲ ಭಗವಾನರಾವ್ ದೇಶಪಾಂಡೆಯವರನ್ನು ಭೇಟಿಯಾದೆವು. ಅವರು ತುಂಬಾ ಚಾಣಾಕ್ಷ. ಅವರಿಗೆ ಯಾವ ಮಿಲ್ಲಿನಲ್ಲಿ ಕಾರ್ಮಿಕರಿಗೆ ಎಷ್ಟು ಸಂಬಳವಿದೆ ಎನ್ನುವುದೆಲ್ಲಾ ಗೊತ್ತು. ಇಲ್ಲಿಯ ಸಂಬಳ ಏಳು ರೂಪಾಯಿಯಾದರೆ ಈಚಲಕರಂಜಿಯಲ್ಲಿ ಹದಿಮೂರು ರೂಪಾಯಿ. ಕೊನೆಗೆ ನನ್ನ ಸಂಗಡಿಗರೆಲ್ಲ ಸೇರಿ ನಮ್ಮ ಬೇಡಿಕೆಗಾಗಿ ಸಂಪು ಮಾಡಲು ನಿರ್ಧರಿಸಿದೆವು. ದೇಶಪಾಂಡೆ ವಕೀಲರು ಕಾರ್ಮಿಕರ ನಿವೇದನೆ, ಯೂನಿಯನ್ ಸಂಘಟನೆ ಬಗ್ಗೆ ವಿವರಿಸಿದರು. ನಾವು, ನಮ್ಮ ಸಂಬಳ, ಬೋನಸ್ ಹೆಚ್ಚು ಮಾಡಬೇಕು. ಓವರ್ ಟೈಂ-ಡಬ್ಬಲ್‌ರೇಟ್, ಮೂರು ವರ್ಷಗಳ ಬಳಿಕ ಖಾಯಂ ನೌಕರಿ, ಮೊದಲಾದ ಬೇಡಿಕೆಗಳ ಪಟ್ಟಿಯನ್ನು ಮ್ಯಾನೇಜರರಿಗೆ ನಿವೇದಿಸಿ ಸಂಪು ಪ್ರಾರಂಭಿಸಿದೆವು. ಆದರೆ ಚೇರಮನ್, ಮ್ಯಾನೇಜರ್ ಬಹಳ ಚಾಣಾಕ್ಷರು. ಕಾರ್ಮಿಕರ ಸಂಪು ಮುರಿಯುವ ಎಲ್ಲ ಪ್ರಯತ್ನವೂ ನಡೆಯಿತು. "ನೀವು ಮೊದಲು ಕೆಲಸಕ್ಕೆ ಹಾಜರಾಗಿ. ನಿಮ್ಮ ಬೇಡಿಕೆ ಈಡೇರಿಸುತ್ತೇವೆ," ಎಂದರು. ಆದರೆ ನಮ್ಮ ಬೇಡಿಕೆ ಈಡೇರುವವರೆಗೆ ನಾವು ಕೆಲಸಕ್ಕೆ ಹಾಜರಾಗಬಾರದೆಂದು ನಿರ್ಧರಿಸಿದೆವು.

ತಿಂಗಳುಗಳೇ ಕಳೆದವು. ಮಕ್ಕಳಿದ್ದ ಕಾರ್ಮಿಕರು, "ನೂಲು ಗಿರಣಿಯ ಕಾರ್ಮಿಕರಿಗೆ ಸಹಾಯ ಮಾಡಿ," ಎಂದು ಡಬ್ಬಿ ಹಿಡಿದು ತಿರುಗಾಡತೊಡಗಿದರು. ಆದರೆ ಚೇರಮನ್ನರ ಆದೇಶದಂತೆ ವ್ಯಾಪಾರಿಗಳು ನಮ್ಮ ಡಬ್ಬಿಯಲ್ಲಿ ಹಣ ಹಾಕುವುದನ್ನು ನಿಲ್ಲಿಸಿದರು. ನನ್ನ ಅವಸ್ಥೆಯೂ ಹೇಳುವಹಾಗಿರಲಿಲ್ಲ. ಹೆಂಡತಿ ಉಪವಾಸವಿರಲಾರಂಭಿಸಿದಳು. ಒಂದು ಕೈಚೀಲಕ್ಕೆ ಅವಳ ಬಟ್ಟೆ ತುರುಕಿ ಒತ್ತಾಯದಿಂದ ಅವಳನ್ನು ತವರಿಗೆ ಕಳುಹಿಸಿಕೊಟ್ಟೆ. ನಾವು ಹನ್ನೊಂದು ಜನ ಆಮರಣ ಉಪವಾಸ ಸತ್ಯಾಗ್ರಹ ಪ್ರಾರಂಭಿಸಿದೆವು. ಐದು ದಿನಗಳಾದವು. ಮೊದಲೇ ಉಪವಾಸದಿಂದ ಬಳಲಿದ್ದ ಅನೇಕ ಕಾರ್ಮಿಕರು ತಲೆತಿರುಗಿ ಬಿದ್ದುಬಿಟ್ಟರು. ಅವರಿಗೆ ಸಲೈನ್ ಕೊಟ್ಟು ದವಾಖಾನೆಗೆ ಸೇರಿಸಲಾಯಿತು.ಆದರೆ ಪ್ರತಿನಿಧಿಯಾದ ನಾನು, ಏನಾದರೂ ಸರಿ, ದವಾಖಾನೆಗೆ ಸೇರಬಾರದೆಂದು ನಿರ್ಧರಿಸಿದೆ. ಕೊನೆಗೊಮ್ಮೆ ಶಿಖ್ ಫೌಜುದಾರ ನಮ್ಮ ಬಳಿಗೆ ಬಂದ. "ನನ್ನ ತಪಾಸಣೆ-ಚಿಕಿತ್ಸೆ ಇಲ್ಲೇ ಮಾಡಿರಿ. ನಾನು ಮಾತ್ರ ಬರೋದಿಲ್ಲ." ಎಂದು ಅವರಿಗೆ ಹೇಳಿದೆ. ಆಗ ಫೌಜದಾರ ನನ್ನ ಕೈಹಿಡಿದು, "ನಹೀ ಭಾಯ್, ಜಿದ್ ಮತ್‌ಕರೋ, ಹಮಾರೆ ಡ್ಯೂಟಿ ಹೈ ತುಮಕೋ ಬಚಾನೆ ಕೀ," ಅಂದ. "ನಾವಿಲ್ಲೇ ಕುಂದ್ರತೀವಿ. ಮಂದಿಗೆ ನಮ್ಮ ಪರಿಸ್ಥಿತಿ ಗೊತ್ತಾಗಲಿ," ಎಂದು ಉತ್ತರಿಸಿದೆ. ಆಗ ಫೌಜದಾರ ಹೇಳಿದ, "ಗಾಯಕವಾಡಜೀ, ಸಿರ್ ಸಲಾಮತ ತೋ ಪಗಡಿ ಹಜಾರ್! ಕಾಯಕೋ ಜಾನ್ ಗವಾತೇ!" ಎಂದು ಹೇಳಿ, ಪೊಲೀಸರ ಸಹಾಯದಿಂದ ಜೀಪಿನಲ್ಲಿ ಎತ್ತಿ ಹಾಕಿ ದವಾಖಾನೆಗೆ ಕರೆತಂದ.

ನಾನು ದವಾಖಾನೆಯಿಂದ ಬಂದ ಬಳಿಕ, ಚೇರಮನ್, ಮ್ಯಾನೇಜರ್, ದೇಶಪಾಂಡೆ ವಕೀಲರು, ನಾವು ಒಟ್ಟಿಗೆ ಕೂತು ಚರ್ಚಿಸಿದೆವು. ಕೊನೆಗೂ ನಮ್ಮ ಬೇಡಿಕೆಗಳು ಮಾನ್ಯವಾದವು. ಮ್ಯಾನೇಜರರು ನಮಗೆ ಉಣಬಡಿಸಿ, "ಲಕ್ಷ್ಮಣ, ನೀನು ತುಂಬ ಹಠವಾದಿ, ನೀನು

## ಉಬಕಲ್ಯಾ

ಉಪವಾಸ ಮಾಡಿ ನಿನ್ನ ಇಚ್ಛೆಯನ್ನು ನೆರವೇರಿಸಿಕೊಂಡಿ. ನೀನೊಬ್ಬ ಗಾಂಧಿವಾದಿ. ಈ ಮಿಲ್ಲಿನ ಮಾಲೀಕನೆಂದರೂ ಅಡ್ಡಿಯಿಲ್ಲ. ಈವರೆಗೆ ಆದ ಲುಕ್ಸಾನ ತುಂಬಿಕೊಡಬೇಕು," ಅಂದರು. ಅಂತೂ ಕಾರ್ಮಿಕರಿಗೆ ಜಯವಾಯಿತು. ಮರುದಿನ ದೇಶಪಾಂಡೆ ವಕೀಲ ತೆಂಗಿನಕಾಯಿ ಒಡೆದು, "ಕೆಂಪು ಬಾವುಟಕ್ಕೆ ಜಯವಾಗಲಿ," ಎಂದು ಘೋಷಣೆ ಹಾಕಿ ಮಿಲ್ ಪ್ರಾರಂಭಿಸಿದರು. ಕಾರ್ಮಿಕರ ಸಂಬಳ ಹೆಚ್ಚಿತು. ಎಲ್ಲಾ ಕಡೆ ಆನಂದದ ವಾತಾವರಣ. ಮಿಲ್ಲಿನಲ್ಲೇ ನಮ್ಮ ಆಫೀಸ್ ತೆರೆದೆವು. ಮಿಲ್ಲಿನಲ್ಲೂ ನಮ್ಮ ವರ್ಚಸ್ಸು ಬೆಳೆಯಿತು. ಈಗ ಕಾರ್ಮಿಕರನ್ನು ಹೊಡೆಯುವ ಧೈರ್ಯ ಯಾರಿಗೂ ಇರಲಿಲ್ಲ. ದೇಶಪಾಂಡೆ ವಕೀಲರು ನನ್ನನ್ನು ಗೌರವಿಸುತ್ತಿದ್ದರು. ಅವರ ಕಮ್ಯುನಿಸ್ಟ್ ಪಕ್ಷದ ಶಿಬಿರಕ್ಕೆ ನಾನೊಮ್ಮೆ ಹೋದೆ. ಅಂದಿನಿಂದ ಕಮ್ಯುನಿಸ್ಟ್ ಪ್ರಣಾಳಿಕೆ ಹಿಡಿಸಲಾರಂಭಿಸಿತು. ಹಲವು ಗ್ರಂಥಗಳನ್ನು ಓದಿದೆ. ಕಾರ್ಮಿಕ ನಾಯಕ ಹೇಗಿರುತ್ತಾನೆಂಬ ತಿಳಿವಳಿಕೆ ದೇಶಪಾಂಡೆ ನೀಡಿದರು. ಆದರೆ ಚೇರಮನ್ ಮತ್ತು ಮ್ಯಾನೇಜರರು ಸೇಡು ತೀರಿಸಿಕೊಳ್ಳುವ ಹಂಚಿಕೆಯಲ್ಲಿದ್ದರು.

ಹೀಗಿರುವಾಗ ಗಣೇಶ ಉತ್ಸವ ಬಂತು. ಮ್ಯಾನೇಜರರು ಜಗತಾಪನನ್ನು ಕರೆದು ಈ ವರ್ಷ ಉತ್ಸವವನ್ನು ವಿಜೃಂಭಣೆಯಿಂದ ಆಚರಿಸುವಂತೆ ಹೇಳಿದರು. ಸ್ಟಾಫಿನವರ ಒಂದು ದಿನದ ಸಂಬಳವನ್ನು ನೀಡುವ ನಿರ್ಧಾರವೂ ಆಯಿತು. ನಾನು ಈ ಭಾನಗಡಿಯಲ್ಲಿ ಬೀಳಬಾರದೆಂದು ವಿರೋಧಿಸಿದೆ. ನನ್ನನ್ನು ಹೊರತುಪಡಿಸಿ ಎಲ್ಲರೂ ಒಪ್ಪಿದರು. ನಾನು ಸುಮ್ಮನಾದೆ. ಎಲ್ಲರ ಸಂಬಳದ ೧೫ ಸಾವಿರ ರೂಪಾಯಿಯ ವಂತಿಗೆ ಸಂಗ್ರಹವಾಯಿತು. ಗಣೇಶೋತ್ಸವವನ್ನು ವಿಜೃಂಭಣೆಯಿಂದ ಆಚರಿಸಲಾಯಿತು. ಉತ್ಸವ ಮುಗಿದ ಬಳಿಕ ಲೆಕ್ಕಪತ್ರದ ತಪಾಸಣೆ ನಡೆಯಿತು. ಲೆಕ್ಕದಲ್ಲಿ ಹೊಂದಾಣಿಕೆಯಾಗಲಿಲ್ಲ. ಇದೇ ಕಾಲಕ್ಕೆ ಜಗತಾಪ ಮೋಟರ ಸೈಕಲ್ ಖರೀದಿಸಿದ. ಅಧಿಕಾರಿ ವರ್ಗದವರೆಲ್ಲ ಕಾರ್ಮಿಕರ ಒಗ್ಗಟ್ಟನ್ನು ಮುರಿಯುವ ಪ್ರಯತ್ನ ನಡೆಸಿದರು. ನಾವೆಲ್ಲ ಸೇರಿ ಜಗತಾಪನ ಹತ್ತಿರ ಜಗಳಾಡಿದೆವು. ಕೆಲ ಕಾರ್ಮಿಕರಂತೂ ಮಿಲ್ಲಿನ ಪರವಾಗಿಯೇ ನಿಂತರು. ನೀವಿಗ ಕೇವಲ ನಾಲ್ಕೇ ಪ್ರತಿನಿಧಿಗಳೆಂದು ಅವರು ಹೇಳುತ್ತಿದ್ದರು. ಪ್ರತಿನಿಧಿಗಳ ಹೆಸರು ಹಾಳಾಗಲಿ, ಕಾರ್ಮಿಕರಲ್ಲಿ ಒಡಕು ನಿರ್ಮಾಣವಾಗಲಿ, ಎನ್ನುವುದೇ ಅವರ ಉದ್ದೇಶವಾಗಿತ್ತು. ಈ ಸಂಧಿಯನ್ನು ಉಪಯೋಗಿಸಿ, ಮ್ಯಾನೇಜಮೆಂಟಿನವರು ಒಬ್ಬೊಬ್ಬ ಪ್ರತಿನಿಧಿಗಳಿಗೆ ನೋಟೀಸು ನೀಡಲಾರಂಭಿಸಿದರು. ಅವರ ಕಣ್ಣಂತೂ ನನ್ನ ಮೇಲೆ ಮೊದಲಿನಿಂದಲೂ ಇತ್ತು. "ನೀವು ಕೆಲಸ ಸರಿಯಾಗಿ ಮಾಡುವುದಿಲ್ಲ. ಗೂಂಡಾಗಿರಿ ಮಾಡ್ತೀರಿ. ಅಧಿಕಾರಿಗಳಿಗೆ ಎದುರುತ್ತರ ಕೊಡ್ತೀರಿ." ಎಂಬ ಕಾರಣ ನೀಡಿ, ನನ್ನನ್ನೂ ಜಗತಾಪನನ್ನು ಕೆಲಸದಿಂದ ತಾತ್ಪೂರ್ತಿಕವಾಗಿ ತೆಗೆದುಹಾಕುವ ನೋಟೀಸ್ ಕೊಟ್ಟರು. ಮೂರು ದಿನವಾದರೂ ಮರಳಿ ತೆಗೆದುಕೊಳ್ಳುವ ಮಾತೇ ಇಲ್ಲ. "ನಮಗಾದ ಸ್ಥಿತಿಯೇ ನಿಮಗಾಗಬಾರದೆಂದಿದ್ದರೆ ಎಲ್ಲರೂ ಸಂಪು ಮಾಡೋಣ ನಡೆಯಿರಿ," ಎಂದು ಹೇಳಿದೆವು. ಕಾರ್ಮಿಕರೆಲ್ಲ ನಮಗಾಗಿ ಸಂಪು ಮಾಡಿದರು. "ನಾಯಕವಾಡ ಹಾಗೂ ಜಗತಾಪ ಇವರನ್ನು ಕೆಲಸಕ್ಕೆ ತೆಗೆದುಕೊಳ್ಳಿ" ಎಂದು ಘೋಷಣೆ ಹಾಕಿದರು. ಸಂಪು ಕೆರಳಿತು.

ಪೋಲೀಸರು ಲಾಠೀ ಚಾರ್ಜ್ ಮಾಡಿದರು. ಹೊಡೆದಾಟ, ಬಡಿದಾಟಗಳಾದವು. ಆದರೂ ನಮ್ಮನ್ನು ಕೆಲಸಕ್ಕೆ ತೆಗೆದುಕೊಳ್ಳಲಿಲ್ಲ. ಕೊನೆಗೆ ಕಾರ್ಮಿಕರು ಸೋತು ನಿರ್ವಿಣ್ಣರಾದರು. ಕ್ರಮೇಣ ಸಂಪು ಮುರಿಯಿತು. ನಾನು, ಜಗತಾಪ ಪುಣೆಯ ಕಾರ್ಮಿಕ ನ್ಯಾಯಾಲಯದಲ್ಲಿ ಕೇಸು ದಾಖಲು ಮಾಡಿದೆವು. ಆದರೆ ಕೋರ್ಟು ನಿರ್ಣಯವಾಗಲೇ ಇಲ್ಲ.

ಕೆಲಸ ಕಳೆದುಕೊಂಡರೂ ನಾನು ಹೆದರಲಿಲ್ಲ. ಹೆಂಡತಿಯೇ ಅಂಗಡಿಯನ್ನು ನಡೆಸುತ್ತಿದ್ದಳು. ಅನಂತರ ನಾನು ನಟರಾಜ ಟಾಕೀಸಿನ ಹತ್ತಿರ ತಗಡಿನ ಶೆಡ್ಡಿನ ಚಹಾದಂಗಡಿ ಆರಂಭಿಸಿದೆ. ಹೀಗೆ ಕಷ್ಟದಲ್ಲಿ ದಿನಗಳು ಕಳೆಯುತ್ತಿದ್ದವು. ಒಂದು ದಿನ ಮಿಲ್ಲಿನ ಅಧಿಕಾರಿಗಳೆಲ್ಲ ಸೇರಿ ಸಿನೆಮಾ ನೋಡಲು ಬಂದರು. ನನ್ನ ಹೋಟೆಲಿನಲ್ಲಿ ಚಹಾದ ಆರ್ಡರ್ ಬಂತು. ನಾನು ಸಪ್ಲೈ ಮಾಡಲು ಹೊರಟಾಗ ಬೇಕೆಂದೇ ಸೂಪರ್‌ವೈಜರ್ ಕೇಳಿದರು "ಏನಪ್ಪಾ ಲಕ್ಷ್ಮಣ ರಾವ್, ಹ್ಯಾಂಗ ನಡೆದದ ?"




"ಏನಿಲ್ಲ ಸಾಹೇಬರ, ಹೋಟೆಲು ಸುರು ಮಾಡೇನಿ. ದುಡಿದು ಹೊಟ್ಟೆ ತುಂಬಿಸಿಕೋಳ್ತೇನಿ." ಎಂದು ನಾನು ಉತ್ತರಿಸಿದೆ. ನನಗೆ ದುಃಖವಾಗಿತ್ತು. ನಾನು ಒಂದು ಕಾಲಕ್ಕೆ ಇವರನ್ನೆಲ್ಲ ಹೆದರಿಸುತ್ತಿದ್ದೆ. ಆದರೆ ಈಗ ನೌಕರಿ ಕಳಕೊಂಡ ನಾನು ಇವರ ಅಪಹಾಸ್ಯಕ್ಕೆ ಗುರಿಯಾಗಿದ್ದೆ. ಆ ನೋವು ನನ್ನನ್ನು ಸದಾ ಕಾಡುತ್ತಿತ್ತು. ಮತ್ತೊಮ್ಮೆ ಕಾರ್ಮಿಕರ ಸಂಘಟನೆ ಮಾಡಿ, ಯಾರು ನನ್ನನ್ನು ಅಪಮಾನಗೊಳಿಸಿದ್ದರೋ ಅವರೆದುರು ತಲೆಯೆತ್ತಿ ನಿಲ್ಲುವುದೆಂದು ಮನದಲ್ಲೇ ನಿರ್ಧರಿಸಿದೆ. ನಮ್ಮ ಮನೆಯ ಎದುರು 'ಶೇಖ' ಎಂಬ ಶಿಕ್ಷಕರಿದ್ದರು. ಅವರ ನೆರವಿನಿಂದ ಪಾಥರೂಟ ಜನರ (ಉಚಲ್ಯಾ) ಜಿಲ್ಲಾ ಮಟ್ಟದ ಸಂಘಟನೆ ಮಾಡಿದೆ. ಆಗಾಗ ಅಂಗಡಿ ಮುಚ್ಚಿ, ನಮ್ಮ ಜನರ-ಸಮಾಜದ ಸುಧಾರಣೆಗಾಗಿ ಅಲ್ಲಲ್ಲಿ ತಿರುಗಾಡಲಾರಂಭಿಸಿದೆ.

ಈ ನಡುವೆ ಅಪ್ಪನ ಆರೋಗ್ಯ ಹದಗೆಟ್ಟಿತು. ನನ್ನಲ್ಲಿ ಊಟದ ಕೊರತೆಯಿದ್ದಾಗ ಅಣ್ಣನ ಬಳಿ ಕಳುಹಿಸುತ್ತಿದ್ದೆ. ಅಣ್ಣನ ಹೆಂಡತಿ ಚುಚ್ಚು ಮಾತಿನಿಂದ ಹಂಗಿಸುತ್ತಿದ್ದಳು. ಹೀಗಾಗಿ ಅಪ್ಪನ ಪ್ರಕೃತಿ ಕೆಡುತ್ತ ಬಂತು. ಕೊನೆಗೊಮ್ಮೆ ಬೇಸತ್ತ ಅಪ್ಪ ನನ್ನ ಬಳಿ ಬಂದ.

ಅಪ್ಪನನ್ನು ನನ್ನ ಹೆಂಡತಿ ಚೆನ್ನಾಗಿ ನೋಡಿಕೊಳ್ಳುತ್ತಿದ್ದಳು. ಕಾಲಕಾಲಕ್ಕೆ ಊಟ ಕೊಡುತ್ತಿದ್ದಳು. ನಾನು ನನ್ನ ಗಳಿಕೆಯನ್ನು ಅವನ ಔಷಧಕ್ಕೋಸ್ಕರ ಖರ್ಚು ಮಾಡುತ್ತಿದ್ದೆ. ಆದರೂ ಅಪ್ಪನ ಆರೋಗ್ಯ ದಿನ ದಿನಕ್ಕೆ ಕೆಡುತ್ತಿತ್ತು. ಅನ್ನ ನೀರಿನ ಸೇವನೆಯೂ ನಿಂತು ಹೋಯಿತು. ನನ್ನ ಹೆಂಡತಿ ರಾತ್ರಿ ಮೂರು ಸಲ ಎದ್ದು ನೀರು ಕುಡಿಸುತ್ತಿದ್ದಳು. ಆದರೆ

ಅವತ್ತು ಆಕೆಗೂ ನಿದ್ದೆ ಹತ್ತಿತು. ಹೀಗಾಗಿ ನಸುಕಿನ ಮೂರು ಗಂಟೆಗೆ ಎಚ್ಚರವಾಯಿತು. ಸಹಜವಾಗಿ ಆಕೆ, "ಮಾಮಾ, ಮಾಮಾ," ಎಂದು ಕರೆದಳು. ಅಪ್ಪ ಓಗೊಡಲಿಲ್ಲ. ಮತ್ತೊಮ್ಮೆ ಕರೆದಳು. ನಾನು ಗಡಬಡಿಸಿ ಎದ್ದೆ. ಅಪ್ಪನ ಬಳಿ ಹೋಗಿ ಮೈ ಅಲುಗಾಡಿಸಿದೆ. ಅಪ್ಪನ ಕಣ್ಣು ತೆರೆದಿತ್ತು. ಮೈ ನಡುಗಿಸುವ ಚಳಿಯಲ್ಲಿ ಹರಕು ಹೊದಿಕೆ ಹೊದೆದು ಮಲಗಿದ ಅಪ್ಪನ ಮೈ ತಣ್ಣಗಾಗಿತ್ತು.

ನಾನು ಅಳತೊಡಗಿದೆ. ಹರಿಚಂದ್ರನ ಪತ್ತೆಯಿರಲಿಲ್ಲ. ಅಣ್ಣನಿಗೆ ಹೇಳಿ ಕಳುಹಿಸಿದೆ. ಅಣ್ಣ, ವೈನಿ, ದಾದಾ, ಭಾಭಿ ಎಲ್ಲರೂ ಬಂದರು. ನಾವು ಸಹೋದರರೆಲ್ಲ ತಬ್ಬಿಕೊಂಡು ಅತ್ತೆವು. ಅವ್ವನೂ ಈ ಬಡತನದಲ್ಲೇ ಸತ್ತಳು. ಬದುಕುವ ಇಚ್ಛೆ, ಸಾಧ್ಯತೆಗಳಿದ್ದರೂ ಹಸಿವೆಯಿಂದ, ಆರೈಕೆ, ಔಷಧಿಯ ಕೊರತೆಯಿಂದ ಅಪ್ಪ ಸತ್ತಿದ್ದರಿಂದ ಬಹಳ ಕೆಡಕೆನಿಸಿತು. ನೆಂಟರಿಷ್ಟರೆಲ್ಲ ಬಂದ ಬಳಿಕ ಅಪ್ಪನ ದೇಹಕ್ಕೆ ಸ್ನಾನ ಮಾಡಿಸಿ, ಹಲಗೆ ಬಾರಿಸುತ್ತ ಸ್ಮಶಾನಕ್ಕೆ ಹೊರಟೆವು. ಅಲ್ಲಿ ಕಟ್ಟಿಗೆಯ ರಾಶಿಯ ಮೇಲೆ ಅಪ್ಪನ ದೇಹವಿಟ್ಟು ಬೆಂಕಿಯ ಸ್ಪರ್ಶಮಾಡಿದೆವು. ದುಃಖವನ್ನು ಮರೆಸಲೆಂದು ನೆಂಟರಿಷ್ಟರಿಗೆಲ್ಲ ಹೆಂಡದ ಸಮಾರಾಧನೆಯೂ ಆಯಿತು. ಕೊನೆಗೂ ಅಪ್ಪ ನಮ್ಮನ್ನು ಬಿಟ್ಟು ಹೋಗಿದ್ದ.

** ** **

ನಾನು ಬಡಜನರ ಏಳಿಗೆಯ ಕುರಿತು ಕನಸು ಕಾಣುತ್ತಿದ್ದೆ. ಶೇಖ ಗುರೂಜಿ, ಗಾಯಕವಾಡರ ಸಹಾಯದಿಂದ ನಮ್ಮ ಜನರಿಗಾಗಿ ಒಂದು ಶಾಲೆ ಮತ್ತು ವಸತಿ ಗೃಹವನ್ನು ತೆರೆಯಲು ನಿಶ್ಚಯಿಸಿದೆ. ನಮ್ಮ ಜನರು ಹೊಟ್ಟೆಗಿಲ್ಲದೆ ಕಳ್ಳತನ ಮಾಡುತ್ತಾರೆ. ಸಿಕ್ಕಿಬಿದ್ದರೆ ಚಿತ್ರಹಿಂಸೆ ಅನುಭವಿಸುತ್ತಾರೆ. ಬಿಡಿಸಿಕೊಳ್ಳುವುದಕ್ಕೆ ಮನೆ ಸಾಮಾನೆಲ್ಲ ಮಾರಬೇಕಾಗುತ್ತದೆ. ಎಷ್ಟೋ ಜನರಿಗೆ ದುಡ್ಡಿಲ್ಲದೆ ಮಕ್ಕಳನ್ನೇ ಮಾರಬೇಕಾದ ಪ್ರಸಂಗ ಬರುತ್ತಿತ್ತು. ಕೆಲವೊಮ್ಮೆ ಎಲ್ಲೋ ಕಳ್ಳತನ ನಡೆದರೂ ಪೊಲೀಸರು ನಿರಪರಾಧಿಗಳ ಮೇಲೆ ದಾಳಿ ಮಾಡುತ್ತಾರೆ. ಪೊಲೀಸರೂ ಶ್ರೀಮಂತರ ಪಕ್ಷಪಾತಿಗಳಾಗಿರುತ್ತಾರೆ. ಕಳ್ಳತನ ಮಾಡಿ ಯಾರೂ ಶ್ರೀಮಂತರಾದುದಿಲ್ಲ. ಮುಂದೆ ಅವರ ಮಕ್ಕಳೂ ಕಳ್ಳರಾಗುತ್ತಾರೆ. ಇಲ್ಲವೆ ಭಿಕ್ಷೆ ಬೇಡುತ್ತಾರೆ. ಹೀಗಾಗಬಾರದು. ಮುಂದಿನ ಪೀಳಿಗೆಯವರೂ ಸುಶಿಕ್ಷಿತರಾಗಲಿ ಎಂಬ ಉದ್ದೇಶ ನನ್ನದು.

ಒಮ್ಮೆ ನಾನು ಕವಠೆಗೆ ಹೋದೆ. ಅಲ್ಲಿ ಬಿ.ಎಲ್.ಗಾಯಕವಾಡ ಮತ್ತು ಡಿ.ಎಸ್. ಗಾಯಕವಾಡರ ಸಂಗಡ ನಮ್ಮ ಜಮಾತಿಯ ಮಕ್ಕಳು ಕಳ್ಳತನದ ಮಾರ್ಗ ಹಿಡಿಯದೆ ಶಾಲೆ ಕಲಿಯುವುದರ ಬಗ್ಗೆ ಚರ್ಚೆ ಮಾಡಿದೆ. ಇದರ ಪರಿಣಾಮವಾಗಿ ೧೯೭೮ರಲ್ಲಿ ಅಲೆಮಾರಿ ಜನಾಂಗದವರನ್ನು ಸಂಘಟಿಸುವ ಮೊದಲನೆಯ ಸಮ್ಮೇಳನ ನಡೆಸಿದೆವು. ಈ ಹಿಂದೆ ಅಪ್ಪನ ಅಂತ್ಯ ಸಂಸ್ಕಾರಕ್ಕೆ ನನಗೆ ಒಬ್ಬ ಮರಾಠಾ ಹೆಂಗಸು ಸಹಾಯ ಮಾಡಿದ್ದಳು. ಅವಳು ಖಾಲಿಯಿದ್ದ ತನ್ನ ಮನೆಯ ಒಂದು ಭಾಗವನ್ನು ನನಗೆ ಬಾಡಿಗೆಗೆ ಕೊಟ್ಟಳು. ಅಲ್ಲೇ ಒಂದು ಸಣ್ಣ ಅಂಗಡಿಯನ್ನು ತೆರೆದೆ. ವ್ಯಾಪಾರ ಚೆನ್ನಾಗಿ ನಡೆಯಲಾರಂಭಿಸಿತು. ಹೆಂಡತಿ ಅಂಗಡಿ ನಡೆಸುತ್ತಿದ್ದಳು. ಹೀಗಾಗಿ ನನಗೆ ಅಲೆದಾಡಲು ಅನುಕೂಲವಾಯಿತು. ಕವಠೆಯಲ್ಲಿ ಅರ್ಧ ಜನ ನಮ್ಮವರೇ. ಅವರ ಮುಖ್ಯ

ಕಸುಬು ಕಳ್ಳತನ. ಅವರನ್ನು ಸುಧಾರಿಸುವ ವಿಚಾರ ನನ್ನದು. ಅವರ ಮಕ್ಕಳು ಶಾಲೆಗೆ ಹೋದರೂ ಸಾಕು, ಅವರ ಮುಂದಿನ ಪೀಳಿಗೆ ಯಾದರೂ ಸುಧಾರಿಸೀತು ಎಂಬ ವಿಚಾರ ನನ್ನದು.

** ** **

ನನ್ನ ಹೆಂಡತಿಯ ದೂರದ ಸಂಬಂಧಿಕಳೊಬ್ಬಳಿದ್ದಾಳೆ. ಆಕೆಯ ಹೆಸರು ಚಿಂಗೂ. ಆಕೆ ಕಳ್ಳತನಕ್ಕೆಹೋದರೆ ಎರಡು ಮೂರು ಚಟಾಕು ಏಕ ಸರ, ಲಾಕೆಟ್, ಮುತ್ತಿನ ಹಾರ, ಮಂಗಳ ಸೂತ್ರ ಇವುಗಳನ್ನೆಲ್ಲ ಕದ್ದು ತರುತ್ತಿದ್ದಳು. ಉಣ್ಣಲು ಕೂತರೆ ಅರ್ಧಕಿಲೊ ಮಟನ್, ಹತ್ತು ಕಪ್ಪು ಚಹಾ, ಹತ್ತಿಪ್ಪತ್ತು ಬ್ರೆಡ್ ತಿನ್ನುತ್ತಿದ್ದಳು. ಮನೆಗೆಲಸಕ್ಕೆ ಐದಾರು ಜನ ಹೆಂಗಸರನ್ನು ಸಾಕಿದ್ದಳು. ಇಂಥ ಹೆಂಗಸು ಒಮ್ಮೆ ಪೂಜಾ ಸಮಾರಂಭದಲ್ಲಿ ಐದಾರು ಗಡಿಗೆ ಹೆಂಡಕುಡಿದು ಬಿದ್ದವಳು ಮತ್ತೆ ಏಳಲೇ ಇಲ್ಲ. ಆಕೆ ಸಿಖ್ ಮನುಷ್ಯನನ್ನು ಇಟ್ಟುಕೊಂಡಿದ್ದಳು. ಅವನು ಚಿಂಗೂನ ಹೆಣಕ್ಕೆ ಹೊದಿಸಲು ಐನೂರು ರೂಪಾಯಿ ಪೈಠಣ ಸೀರೆ ತಂದಿದ್ದ. ಆದರೆ ಯಾವನು ಅವಳ ಹೆಣಕ್ಕೆ ಭಾರೀ ಸೀರೆ ತಂದನೋ, ಅವನು ಅವಳ ಪರದೇಶಿ ಮಕ್ಕಳನ್ನು ನೋಡಲು ಸಿದ್ಧನಿರಲಿಲ್ಲ. ಅವರಿಂದು ಹೊಟ್ಟೆಗಿಲ್ಲದೆ ಸಾಯುತ್ತಿದ್ದಾರೆ. ಮಕ್ಕಳ ಭವಿಷ್ಯಕ್ಕಾಗಿ ಏನೂ ಮಾಡದೆ ಚಿಂಗೂ ಸತ್ತಳು. ನಮ್ಮ ಸಮಾಜದಲ್ಲಿ ಇಂಥ ಎಷ್ಟೋ ಚಿಂಗೂಗಳಿದ್ದಾರೆ.

ಇನ್ನೋರ್ವ ಮಿಠಾಬಾಯಿ ಎಂಬ ಹೆಂಗಸು. ಆಕೆಗೆ ಮೂರು ಜನ ಗಂಡಂದಿರು. ಅವರಲ್ಲಿ ಒಬ್ಬ ಗಂಡ ಮುಸ್ಲಿಂ. ಇಬ್ಬರೂ ಕಳ್ಳತನ ಮಾಡುತ್ತಾರೆ. ಒಮ್ಮೆ ಅವರಿಬ್ಬರೂ ಕಳ್ಳತನಕ್ಕೆ ಹೋದಾಗ ಏನೂ ಸಿಗಲಿಲ್ಲ. ಆಳಂದಿಯಿಂದ ಪುಣೆಗೆ ಟಿಕೇಟಿಲ್ಲದೆ ಪ್ರಯಾಣ ಮಾಡಿದರು. ಮುಂದೆ ಹೋಗಲು ಹಣವಿರಲಿಲ್ಲ. ಉಣ್ಣಬೇಕೆಂದರೆ ದುಡ್ಡಿಲ್ಲ. ಕೊನೆಗೆ ಬೇಸತ್ತು ಒಂಭತ್ತು ತಿಂಗಳು ಹೊತ್ತು, ಹೆತ್ತು ಸಾಕಿದ ತಮ್ಮ ಮಗುವನ್ನೇ ಮಾರಿದರು.

ಸ್ವಾತಂತ್ರ್ಯಗಳಿಸಿ ಮೂವತ್ತೊಂಭತ್ತು ವರ್ಷ ಕಳೆದರೂ ನಮ್ಮ ಜನರು ಮಕ್ಕಳನ್ನು ಮಾರಿ ಹೊಟ್ಟೆ ತುಂಬಿಸಿಕೊಳ್ಳುವ ಸ್ಥಿತಿ ತಪ್ಪಲಿಲ್ಲ. ಇಂಥ ಸ್ವಾತಂತ್ರ್ಯದಿಂದ ಏನು ಪ್ರಯೋಜನ ? ಸ್ವಾಭಿಮಾನದಿಂದ ಬದುಕಲು ಏನು ಮಾಡಬೇಕು ? ಎಂಬ ಹಲವು ವಿಚಾರಗಳು ತಲೆ ತಿನ್ನುತ್ತಿದ್ದವು. ನಾನು ಹೋದಲ್ಲೆಲ್ಲ ಇಂಥ ಅನೇಕ ಘಟನೆಗಳನ್ನು ಕೇಳಿ ದಿಙ್ಮೂಢನಾಗುತ್ತಿದ್ದೆ. ಅಂತೂ ಸಾಕಷ್ಟು ಅಲೆದಾಡಿದ ಬಳಿಕ ೧೯೭೮ರಲ್ಲಿ ಕವಠೆಯಲ್ಲಿ ಅಲೆಮಾರಿಗಳಿಗಾಗಿ ನಿರ್ಮಿಸಿದ ಶಿಕ್ಷಣ ಸಂಸ್ಥೆಯ ರಿಜಿಸ್ಟ್ರೇಶನ್ ಆಯಿತು.

ಮತ್ತೆ ಮನೆಗೆ ಮರಳಿದೆ. ಆದಷ್ಟು ಬಡಜನರಿಗೆ, ಶೋಷಿತರಿಗೆ ನ್ಯಾಯ ದೊರಕಿಸಿಕೊಡಬೇಕೆಂದು ನಿರ್ಧರಿಸಿದೆ. ಜೋಪಡಪಟ್ಟಿಯ ನೂಲು ಗಿರಣಿಯ ಸಂಘಟನೆ ಮಾಡಿದೆ. ಗಿರಣಿಯ ಕಾರ್ಮಿಕರ ಸಂಘಟನೆಗೆ ಬೆಂಬಲ ನೀಡಿದ್ದಕ್ಕಾಗಿ, ಮ್ಯಾನೇಜರ್ ಕಳಿಸಿದ ಗೂಂಡಾಗಳಿಂದ ಪೆಟ್ಟು ತಿನ್ನಬೇಕಾಯಿತು. ಇದರಿಂದ ನನ್ನಲ್ಲಿ ಮತ್ತಷ್ಟು ಹಟ ಬೆಳೆಯಿತು. ರಾಜಕಾರಣದಲ್ಲಿ ಸಕ್ರಿಯವಾಗಿ ಭಾಗವಹಿಸಿ ಬೇರೆ ಬೇರೆ ಸಂಘಟನೆ ಕಟ್ಟಬೇಕೆಂದು ನಿರ್ಧರಿಸಿದೆ.

ಲಾತೂರಿನ ವ್ಯಾಪಾರಿಗಳು ಹಳ್ಳಿಯ ರೈತರನ್ನು ಮೋಸಪಡಿಸುವುದನ್ನು ನಾನು, ಪ್ರದೀಪ ಪಾಟೀಲ, ಇನಾಂದಾರ ಗಮನಿಸಿದೆವು. ಬಿತ್ತನೆ

# ಉಚಲ್ಯಾ


ಪುಸ್ತಕ ವಿಭಾಗ

ಕಾಲದಲ್ಲಿ ರೈತರಿಗೆ ಇಪ್ಪತ್ತೆರಡು ರೂಪಾಯಿಯ ಹೈಬ್ರಿಡ್ ಬೀಜದ ಚೀಲವನ್ನು ನಲವತ್ತೈದು ರೂಪಾಯಿಗಳಿಗೆ ಮಾರುತ್ತಿದ್ದರು. ನಾವೆಲ್ಲ ತಕ್ಷಣ ಧಾವಿಸಿ ಬಂದೆವು. ಅಲ್ಲಿಯೇ ಕ್ಯೂ ನಿಂತು ಬೀಜ ಖರೀದಿಸುತ್ತಿದ್ದ ರೈತರನ್ನೆಲ್ಲ ಕರೆದು, "ಇಲ್ಲಿ ಸಾಕಷ್ಟು ಚೀಲವಿದೆ. ಆದರೂ ತುಟ್ಟಿ ಮಾರುತ್ತಿದ್ದಾರೆ," ಎಂದು ತಿಳಿಸಿದೆವು. ನೋಡನೋಡುತ್ತಿದ್ದಂತೆ ಎರಡು ಸಾವಿರ ರೈತರು ಜಮಾಯಿಸಿದರು. ಆ ವ್ಯಾಪಾರಿಯನ್ನು ಹೊರಗೆಳೆದು ಗೋಡೌನಿನಲ್ಲಿದ್ದ ಹೈಬ್ರಿಡ್ ಬೀಜದ ಚೀಲಗಳನ್ನು ರೈತರಿಗೆ ಹಂಚಿದೆವು. ರೈತರೆಲ್ಲ ಕೆರಳಿ ವ್ಯಾಪಾರಿಯ ಮುಖಕ್ಕೆ ಮಸಿ ಬಳಿದು, ಕತ್ತೆಯ ಮೇಲೆ ಕೂಡ್ರಿಸಿ ಮೆರವಣಿಗೆ ಹೊರಟರು. ಅಂದಿನಿಂದ ವ್ಯಾಪಾರಿಗಳು ಯೋಗ್ಯ ಬೆಲೆಗೆ ಬೀಜ ಮಾರಲಾರಂಭಿಸಿದರು.

ಸಿಂಧವಾಡಿಯ ಜನರು ಸಾರ್ವಜನಿಕ ಬಾವಿಯಿಂದ ನೀರು, ಸೇದಿದ ಕಾರಣಕ್ಕಾಗಿ ಹನುಮಂತ ವಡಾರನ ಕೊಲೆ ಮಾಡಿದರು: ನಾನು ಉಸ್ಮಾನಾಬಾದ್ ಪೊಲೀಸರಿಗೆ ಸುದ್ದಿ ಮುಟ್ಟಿಸಿದೆ. ತಕ್ಷಣ ಪೊಲೀಸರು ಆಗಮಿಸಿ ಬಂಧಿಸಿದರು. ಇನ್ನೊಮ್ಮೆ ಕಾಳಂಬಾ ತಾಲೂಕಿನ ಮೋಹಾ ಎಂಬ ಊರಲ್ಲಿ ಪಾರಧಿ (ಬೇಡ) ಎಂಬ ಕುಟುಂಬದ ಮೇಲೆ ಪೊಲೀಸರ ಅತ್ಯಾಚಾರ ನಡೆಯಿತು. ಉಸ್ಮಾನಾಬಾದ್ ಜಿಲ್ಲೆಯಲ್ಲಿ ಪಾರಧಿ ಜನ ಕಳ್ಳತನ ಮಾಡುವ ಪರಿಸ್ಥಿತಿಯನ್ನು ಅಲ್ಲಿಯ ಜಮೀನುದಾರರೇ ಉಂಟು ಮಾಡುತ್ತಾರೆ. ನಾನು ಅಲ್ಲಿಯ ಜನರೊಡನೆ ಬೆರೆತು ಈ ವಿಷಯವನ್ನೆಲ್ಲ ಸಂಗ್ರಹಿಸಿದೆ. ಇಂತಹದೇ ಘಟನೆಗಳು ಇನ್ನೂ ಐದಾರು ತಾಲೂಕಿನಲ್ಲಿ ನಡೆದವು. ಜನ ಪರಿಸ್ಥಿತಿಗನುಗುಣವಾಗಿ ಕಳ್ಳತನ ಮಾಡುತ್ತಾರೆ. ಪಾರಿಧಿಗಳ ಮಾಲು ಜಪ್ತಿ ಮಾಡುವಾಗ ಉಪಯುಕ್ತ ಮಾಲು ಸಿಕ್ಕರೆ ಪೊಲೀಸರೇ ಹಂಚಿಕೊಳ್ಳುತ್ತಾರೆ. ರಕ್ಷಕರು ಭಕ್ಷಕರಾಗುತ್ತಾರೆ. ಪಾರಿಧಿಗಳ ಮನೆಯಲ್ಲಿ ನಾಲ್ಕಾರು ಅಲ್ಯೂಮಿನಿಯಂ ಪಾತ್ರೆ ಬಿಟ್ಟರೆ ಬೇರೇನೂ ಇರುವುದಿಲ್ಲ. ಆದರೂ ಅವರು ಕಳ್ಳರೆಂದೇ ಪರಿಗಣಿಸಲ್ಪಡುತ್ತಾರೆ. ಆದರೆ ಲಂಚ ತಿನ್ನುವ ಅಧಿಕಾರಿಗಳು ಮಾತ್ರ ಪ್ರತಿಷ್ಠಿತರಾಗುತ್ತಾರೆ. ಇಂಥ ಎಷ್ಟೋ ಅನ್ಯಾಯಗಳ ವಿರುದ್ಧ ಒಂದು ಪ್ರಚಂಡವಾದ ಮೋರ್ಚಾ ನಡೆಸಬೇಕೆಂದು ನಿರ್ಧರಿಸಿದೆ. ನಾನು ಇದಕ್ಕೆ "ಕತ್ತಿ-ಹತೋಡಾ ಮೋರ್ಚಾ" ಎಂದು ಹೆಸರಿಟ್ಟೆ. ಇನ್ನು ಮುಂದೆ ಅನ್ಯಾಯವನ್ನು ಕತ್ತಿ ಹತೋಡಾದಿಂದಲೇ ಎದುರಿಸುತ್ತೇವೆ ಎಂದು ಇದರರ್ಥ.

೨೬ ನವೆಂಬರ ೧೯೮೨ರಂದು ಲಾತೂರಿನ ನೆಹರೂ ಬ್ಯಾಂಕಿನಿಂದ ನಮ್ಮ ಪ್ರಚಂಡ ಮೋರ್ಚಾ ಹೊರಟಿತು. ಇಡೀ ಮರಾಠವಾಡದ ಜನರೆಲ್ಲ ಸೇರಿದ್ದರು. ಈ ಮೋರ್ಚಾದಲ್ಲಿ ಪರಂಪರಾಗತ ವೇಷ-ಭೂಷಣ ಧರಿಸಿ, ಹಲವು ಜಾತಿ ಜಮಾತಿಯ ಜನ ಭಾಗವಹಿಸಿ

ದ್ದರು. ಮಸಣ ಜೋಗಿ, ವಾಸುದೇವ, ಗೋಂಧಳಿ, ವಡ್ಡರ, ಉಚಲ್ಯಾ, ಗೋಸಾವಿ, ಕೈಕಾಡಿ, ವೈದೂ, ಪಾರಧಿ, ಮಾಂಗ ಗಾರುಡಿಗಳು, ಭಿಲ್ಲರು, ಲಮಾಣಿ, ಶಿಕ್ಕಲಿಗಾರರು-ಇಂಥವರೆಲ್ಲ, ಕತ್ತೆ, ನಾಯಿ, ಹಂದಿ, ಕೋಳಿ ಹಿಡಿದು, ಬಂದಿದ್ದರು. ಕೈಯಲ್ಲಿ ಕತ್ತಿ ಹತೋಡಾ ಝಳುಪಿಸುತ್ತಾ ಸುಮಾರು ಹತ್ತು ಸಾವಿರ ಜನ "ಮನೆ, ಕೆಲಸ, ಕೊಡಿ" "ನಾವು ಗುನ್ಹೇಗಾರ ಜಾತಿಯವರಲ್ಲ," "ನಮ್ಮ ಪುನರ್ವಸತಿಯ ನಿರ್ಮಾಣ ಮಾಡಿರಿ" ಎಂದು ಘೋಷಣೆ ಹಾಕುತ್ತಾ ಹೊರಟರು. ಈ ಮೋರ್ಚಾದಲ್ಲಿ ಲಕ್ಷ್ಮಣ ಮಾನೆ, ಬಾಲಕೃಷ್ಣ ರೇಣಕೆ ಇತ್ಯಾಗಿ ಮಹನೀಯರು ಉಪಸ್ಥಿತರಿದ್ದರು. ಕಲೆಕ್ಟರ ಸಾಹೇಬರಿಗೆ ನಿವೇದನೆ ಕೊಡಲು ಹೋದರೆ, ತಮಗೆ ಪುರುಸೊತ್ತಿಲ್ಲ ವೆಂದು ಹೇಳಿ ಮನೆಗೆ ಹೊರಟು ಹೋದರು. ಇಂಥ ಅಪೂರ್ವವಾದ, ಭವ್ಯವಾದ ಮೆರವಣಿಗೆ ಲಾತೂರಿನ ಇತಿಹಾಸದಲ್ಲೇ ನಡೆದಿರಲಿಲ್ಲ. ಕಲೆಕ್ಟರರ ವರ್ತನೆಯನ್ನು ಇಡೀ ಮಹಾರಾಷ್ಟ್ರದ ವಿಚಾರವಂತರು, ಪತ್ರಿಕೆಗಳು ಖಂಡಿಸಿದವು. ಆದರೆ ಒಂದು ಮಾತು ಮಾತ್ರ ನಿಜ. ಈ ಮೋರ್ಚಾದನಂತರ ಅಲೆಮಾರಿ ಜನರ ಮೇಲಾಗುವ ಅನ್ಯಾಯ ಕಡಿಮೆಯಾಯಿತು.

ನಾನು ಈಗ ನನ್ನ ಮಕ್ಕಳಾದ ಸಂಗೀತಾ, ಮಂಜೂಷಾ, ಪ್ರಫುಲ್ಲಕುಮಾರ ಮತ್ತು ನನ್ನ ಹೆಂಡತಿ ಇವರನ್ನೆಲ್ಲ ಸಾಕಬೇಕಾಗಿತ್ತು. ತುಂಬಾ ಆರ್ಥಿಕ ಸಂಕಟದಲ್ಲಿ ಸಿಲುಕಿದ್ದೆ. ಆದರೂ ನನಗೆ ನನ್ನ ಅನೇಕ ಚಳುವಳಿಯ ಮಿತ್ರರು ಸಹಾಯ ಮಾಡಿದರು. ನಾನು ಸಂಘಟನೆಗಾಗಿ ಉಪಯೋಗಿಸುತ್ತಿದ್ದ ಮೋಟಾರು ಸೈಕಲ್ಲು ಮಾರಿದೆ. ಬ್ಯಾಂಕಿನಿಂದ ಸಾಲ ತೆಗೆದು ಹೆಂಡತಿಗೆ ಅಂಗಡಿ ಹಾಕಿಕೊಟ್ಟಿದ್ದೇನೆ. ಅವಳು ನಿರಕ್ಷರಿಯಾಗಿದ್ದರೂ ನನ್ನ ಸಂಘಟನೆಯ ಕಾರ್ಯದಲ್ಲಿ ಸಹಕರಿಸಿದ್ದಾಳೆ. ನನ್ನ ಮಕ್ಕಳು ಸದ್ಯ ಲಾತೂರಿನಲ್ಲಿ ಕಲಿಯುತ್ತಿದ್ದಾರೆ. ನನ್ನ ಅಣ್ಣಂದಿರು ಹೊಟ್ಟೆಪಾಡಿಗಾಗಿ ಅಲ್ಲಿ ಇಲ್ಲಿ ಅಲೆಯುತ್ತಿದ್ದಾರೆ. ನಾನು ಅಲೆಮಾರಿಗಳ ಸಾಮಾಜಿಕ ಪರಿವರ್ತನೆಗಾಗಿ, ನ್ಯಾಯ-ಹಕ್ಕಿಗಾಗಿ ಚಳುವಳಿ ನಡೆಸುತ್ತ ಸಂಚಾರ ಮಾಡುತ್ತಿರುತ್ತೇನೆ.

ಇಷ್ಟಾದರೂ ನನ್ನ ಜನರ ಸಮಸ್ಯೆಗೆ ಪೂರ್ಣ ಪರಿಹಾರ ಇನ್ನೂ ಸಿಕ್ಕಿಲ್ಲ. ಪುಢಾರಿಗಳು ಸವಿಸವಿಯಾಗಿ ಮಾತನಾಡಿ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಾರೆ. ಇನ್ನೊಂದು ಅರ್ಥದಲ್ಲಿ ಬಡಜನರ ಶೋಷಣೆ ಮಾಡುತ್ತಿದ್ದಾರೆ. ಏನೇ ಆಗಲಿ, ವೈಚಾರಿಕ ಚಳುವಳಿಯ ಮೂಲಕ ದಲಿತರ, ಪೀಡಿತರ, ಶೋಷಿತರ ಪರಿವರ್ತನೆ ಮಾಡಲು, ಅವರನ್ನು ಈ ವಿಷವರ್ತುಲದಿಂದ ಪಾರು ಮಾಡಲು ಸತತ ಪ್ರಯತ್ನ ಮಾಡಬೇಕೆಂಬ ಧೃಡಸಂಕಲ್ಪ ನನ್ನದು.

---

*❋ ಬಹುತೇಕ ಜನರು ಆಲ್ಬರ್ಟ್ ಐನ್‌ಸ್ಟೈನರಿಗೆ ಅವರ ಪ್ರಖ್ಯಾತ 'ಸಾಪೇಕ್ಷತಾ ಸಿದ್ಧಾಂತಕ್ಕೆ' ನೋಬೆಲ್ ಬಹುಮಾನ ಬಂತೆಂದು ತಿಳಿದಿದ್ದಾರೆ. ಆದರೆ ಅವರಿಗೆ ನೋಬೆಲ್ ಬಹುಮಾನ ಬಂದದ್ದು ಅವರ ಇನ್ನೊಂದು ಪ್ರಸಿದ್ಧ ಸಂಶೋಧನೆಯಾದ 'ದ್ಯುತಿವಿದ್ಯುತ್ ಪರಿಣಾಮ' (Photoelectric effect)ಕ್ಕಾಗಿ.*

**❋ ಹಾಲಸ್ವಾಮಿ ಮ. ಮಲ್ಲನಗೌಡರ**

ಆರೋಗ್ಯ ದಂಗಳ

# ಆಯುರ್ವೇದದ ದೃಷ್ಟಿಯಲ್ಲಿ ಏಡ್ಸ್ ರೋಗ



(ಶೋಷ ರೋಗ)

✡ ಲೇ: ಡಾ. ಧನ್ಯಕುಮಾರ ಇಜಾರಿ

ಆಯುರ್ವೇದ ತಜ್ಞ

೧೦-A, ಎರಡನೆ ಮಹಡಿ

ಯುರೇಕಾ ಟಾವರ್ಸ

ಟ್ರಾಫಿಕ್ ಐಲಂಡ, ಹುಬ್ಬಳ್ಳಿ



# ಆಯುರ್ವೇದದ ದೃಷ್ಟಿಯಲ್ಲಿ ಏಡ್ಸ್‌ರೋಗ (ಶೋಷ ರೋಗ)

ಮನುಷ್ಯನ ಸ್ವಚ್ಛಂದ ಪ್ರವೃತ್ತಿ, ಲೈಂಗಿಕತೆ, ಮಾದಕ ದ್ರವ್ಯ ಸೇವನೆ ಹಾಗೂ ವ್ಯಭಿಚಾರಗಳಿಗೆ ನಿಸರ್ಗ ಇತ್ತಿರುವ ಶಾಪವೇ ಏಡ್ಸ್‌ರೋಗ. ಈ ಶತಮಾನದ ಆದಿಭಾಗದಲ್ಲಿ ಜನ ಸಮುದಾಯದ ದೊಡ್ಡಭಾಗವನ್ನೇ ಸಮೂಲವಾಗಿ ನಾಶಮಾಡುತ್ತಿದ್ದ ಮೈಲಿ ಬೇನೆ, ಕಾಲರಾ, ಪ್ಲೇಗುಗಳು ಇದೀಗ ದೂರವಾಗಿವೆ. ಮಲೇರಿಯಾ, ಕ್ಷಯರೋಗ, ಕುಷ್ಠರೋಗಗಳು ನಿಯಂತ್ರಣದಲ್ಲಿವೆ. ಸಾಕಷ್ಟು ಪ್ರಗತಿ ಹೊಂದುತ್ತಿರುವ ವೈದ್ಯಕೀಯ ಕ್ಷೇತ್ರದಲ್ಲಿ ಮೊದಲು ಅಸಾಧ್ಯವೆಂದು ಭಾವಿಸಲ್ಪಟ್ಟ ಅನೇಕ ರೋಗಗಳಿಗೆ ಈಗ ಪರಿಹಾರ ಸಿಕ್ಕಿದೆ.

ಆದರೆ ಹೊಸ ಹೊಸ ರೋಗಗಳೂ ಹುಟ್ಟುತ್ತಿವೆ. ಅವುಗಳಿಗೆ ತಕ್ಕ ಔಷಧಿಗಳ ಅನ್ವೇಷಣೆಯೂ ನಡೆಯುತ್ತಿದೆ. ಅನೇಕ ಹೊಸ, ಬಲಿಷ್ಠವಾದ ಜೀವ ನಿರೋಧಕ ಔಷಧಗಳಿಗೆ ಬಗ್ಗದ ರೋಗಕ್ರಿಮಿಗಳು, ವೈರಸ್ಸುಗಳು ಅಪ್ರತಿಮ ವೇಗದಲ್ಲಿ ಮಾನವನ ಬುದ್ಧಿಬಲಕ್ಕೊಂದು ಸವಾಲಾಗಿ ಬೆಳೆಯುತ್ತಲಿವೆ. ಇವುಗಳ ಫಲವೇ ಇಂದಿನ ಏಡ್ಸ್ (Acquired Immuno Deficiency Syndrome) ಹಾಗೂ ಹೆಪಟೈಟಿಸ್-ಬಿ ವೈರಸ್ಸುಗಳು. ಹೆಪಟೈಟಿಸ್ ಬಿ ವೈರಸನ್ನುನಿರೋಧಿಸಲು ಈಗಾಗಲೇ ವ್ಯಾಕ್ಸೀನ್ ದೊರಕುತ್ತಿರುವುದರಿಂದ ಅದರಿಂದಾಗುವ ಸಾವನ್ನು ತಡೆಹಿಡಿಯಬಹುದಾಗಿದೆ. ಅರ್ಬುದ ರೋಗಕ್ಕಿಂತಲೂ ಭೀಕರವಾದ, ಪ್ರಾಣಾಂತಿಕವಾದ, ಈವರೆಗಿನ ಯಾವ ಚಿಕಿತ್ಸೆಗೂ ಮಣಿಯದ ರೋಗಗಳಿವು. ಒಮ್ಮೆ ಅಂಟಿತೆಂದರೆ ಸಾವು ಖಂಡಿತ ಎಂಬ ಅಂಶವೀಗ ಜನಸಾಮಾನ್ಯರಿಗೂ ಮುಟ್ಟುತ್ತಿದೆ.

ಜನಪದವನ್ನೇ ಧ್ವಂಸಗೊಳಿಸುವ ತೀವ್ರ ಸಾಂಕ್ರಾಮಿಕ ರೋಗಗಳು ಮುಖ್ಯವಾಗಿ ಮಾನವನ ಅನಾಚಾರಗಳಿಂದಲೇ ಬಂದಿದ್ದು. ವಾಸ್ತವವಾಗಿ ಪಂಚ ಮಹಾಭೂತಗಳು ಮಾನವನ ದುರಾಚಾರದಿಂದ ಕೋಪಗೊಂಡು ಅವನ ವಿರುದ್ಧ ತೆಗೆದುಕೊಳ್ಳುವ ಸೇಡಿನ ಕ್ರಮಗಳಾಗಿವೆ ಈ ರೋಗಗಳು. ನಾವು ವಾಸಿಸುವ ಭೂಮಿ, ಸೇವಿಸುವ ಗಾಳಿ, ಕುಡಿಯುವ ನೀರುಗಳೇ ದೋಷಿತವಾದಾಗ ನಾವಿನ್ನು ಹೋಗುವುದಾದರೂ ಎಲ್ಲಿಗೆ? ಈ ರೋಗಗಳಿಗೆ ಕ್ರಿಮಿಗಳು ಕಾರಣವಾಗುತ್ತವೆ ಎಂಬ ಸ್ಪಷ್ಟ ಮಾತು ನಮ್ಮ ಪೂರ್ವಜರಿಗಿರಲಿಲ್ಲವೆಂತಲ್ಲ. ಈ ರೋಗಕಾರಕ ಕ್ರಿಮಿಗಳು ಪರ್ವತ, ವನ, ಔಷಧಿಸಸ್ಯಗಳು, ಪಶುಗಳು, ನೀರು ಹಾಗೂ ನಮ್ಮ ಶರೀರದಲ್ಲಿ ಪಸರಿಸಿವೆ ಎಂಬ ಮಾತು ಅಥರ್ವವೇದದಲ್ಲಿಯೇ ಬಂದಿದೆ. (೧) ಕಣ್ಣಿಗೆ ಕಾಣಿಸುವ ಹಾಗೂ ಕಾಣಿಸದಿರುವ ಈ ರೋಗಕಾರಕ ಸೂಕ್ಷ್ಮ ಕ್ರಿಮಿಗಳ ಬಗೆಗೆ ಚರಕ, ಸುಶ್ರುತರು ಸ್ಪಷ್ಟವಾದ ಮಾತುಗಳಲ್ಲಿ ಹೇಳಿದ್ದಾರೆ. ಈ ಕ್ರಿಮಿಗಳು ವಿಷಾಣುಯುಕ್ತವಾಗಿ, ರಾಕ್ಷಸರಂತೆ ಮಾನವನಿಗೆ ಹಾನಿಕಾರಕವಾಗಿವೆ ಎಂಬ ಮಾತನ್ನು ಚಕ್ರಪಾಣಿ ಹೇಳಿದ್ದಾನೆ. ಪದೆ ಪದೆ ಇನ್ನೊಬ್ಬರ ಶರೀರವನ್ನು ತಾಕುತ್ತಿರುವುದರಿಂದ, ಹತ್ತಿರವಿರುವ ಇನ್ನೊಬ್ಬರ ಉಸಿರಾಟದಿಂದ, ಇನ್ನೊಬ್ಬರ ಜೊತೆಗೆ ಒಂದೇ ತಟ್ಟೆಯಲ್ಲಿ ಊಟ ಮಾಡುವುದರಿಂದ, ಇತರರು ಉಪಯೋಗಿಸಿದ ಹೊದಿಕೆ, ವಸ್ತ್ರ, ಆಭರಣಗಳನ್ನು ಉಪಯೋಗಿಸುವುದರಿಂದ ಹಾಗೂ ಪರಸ್ಪರರು ಒಂದೇ ಹಾಸಿಗೆಯಲ್ಲಿ ಮಲಗಿಕೊಳ್ಳುವುದರಿಂದ ರೋಗಗಳು ಒಬ್ಬರಿಂದ ಒಬ್ಬರಿಗೆ ಹರಡುತ್ತವೆ ಎಂದು ಸುಶ್ರುತ

ಹೇಳಿದ್ದಾನೆ. ಕುಷ್ಠ (ಎಲ್ಲ ವಿಧದ ಚರ್ಮರೋಗಗಳು) ಜ್ವರ, ಶೋಷ (ಕ್ಷಯ) ನೇತ್ರಾಭಿಷ್ಯಂದ ಮೊದಲಾದ ಔಪಸರ್ಗಿಕ (Communicable) ರೋಗಗಳು ಒಬ್ಬನಿಂದ ಇನ್ನೊಬ್ಬನಿಗೆ ಹರಡುತ್ತವೆ ಎಂಬ ಮಾತು ಇಲ್ಲಿ ಸ್ಪಷ್ಟವಾಗಿದೆ.

ಏಡ್ಸ್‌ರೋಗ ಮೂಲತ ಲೈಂಗಿಕಸಂಪರ್ಕದಿಂದ ಬರುವುದು ಹಾಗೂ ಹರಡುವುದು ಎಂಬ ಮಾತು ಎಲ್ಲರಿಗೂ ಗೊತ್ತು. ಲೈಂಗಿಕವಾಗಿ ಒಬ್ಬರಿಂದ ಇನ್ನೊಬ್ಬರಿಗೆ ಅಂಟುವ ಉಪದಂಶ, ಫಿರಂಗೋಪದಂಶಗಳ ಬಗೆಗೆ ಮೊದಲಿನ ಆಯುರ್ವೇದ ಗ್ರಂಥಗಳಲ್ಲಿ ವಿವರಣೆ ಇಲ್ಲ. ಪಾಶ್ಚಾತ್ಯರಿಂದ ಬಂದ ಈ ರೋಗಗಳ ಬಗ್ಗೆ ನಂತರದ ಗ್ರಂಥಗಳಲ್ಲಿ ವಿವರಗಳು ದೊರಕುತ್ತವೆ. ಹಾಗೆಯೇ ಇಂದು ಈ ಏಡ್ಸ್ ಕೂಡ. ಸ್ವಚ್ಛಂದ ಕಾಮಕೇಳಿಯ ಪರಿಣಾಮ ಇದು. ಭಾರತದಲ್ಲಿ ಪುರಾತನ ಕಾಲದಿಂದಲೂ ಈ ರೀತಿಯ ಅನಿರ್ಬಂಧ ಲೈಂಗಿಕತೆಗೆ ಆಸ್ಪದವಿಲ್ಲ. ಅದಕ್ಕೆ ಧರ್ಮ, ನೀತಿ, ಸಾಮಾಜಿಕ ಕಟ್ಟಳೆ ಪಾಪ-ಪುಣ್ಯಗಳ ಬಂಧನಗಳನ್ನು ಹಾಕಿ ನಿಯಂತ್ರಿಸಲಾಗಿದೆ. ಹೀಗಾಗಿ ಭಾರತದಲ್ಲಿ ಲೈಂಗಿಕ ಮೂಲದಿಂದ ಹರಡುವ ರೋಗಗಳು ಬ್ರಿಟಿಷರು ನಮ್ಮ ದೇಶದಲ್ಲಿ ನೆಲೆವೂರುವ ಮುನ್ನ ಅಷ್ಟಾಗಿ ಇರಲಿಲ್ಲ.

## ಭಾರತೀಯರ ದೃಷ್ಟಿಕೋನ

ಭಾರತೀಯರು ಪುರಾತನ ಕಾಲದಿಂದಲೇ ಕಾಮವನ್ನು ಮೋಕ್ಷಸಾಧನದ ಒಂದು ಮೆಟ್ಟಲೆಂದು ತಿಳಿಯುತ್ತ ಬಂದಿದ್ದಾರೆ. ಗೃಹಸ್ಥಾಶ್ರಮದಲ್ಲಿ ಕಾಮದ ಉಪಶಮನಕ್ಕಾಗಿ, ಸಂತಾನ ಪ್ರಾಪ್ತಿಗಾಗಿ ಅವಕಾಶ ಕಲ್ಪಿಸಲಾಗಿದೆ. ಪುರುಷ ೨೫ ವರ್ಷಗಳವರೆಗೆ ತನ್ನ ಆರೋಗ್ಯ, ವೀರ್ಯವಂತಿಕೆಗಳನ್ನು ಕಾಪಾಡಿಕೊಳ್ಳಲೋಸುಗ ಬ್ರಹ್ಮಚರ್ಯವನ್ನು ಪಾಲಿಸಬೇಕಾಗುವುದು ಎಂಬ ನಿಯಮವಿದೆ. ಇಲ್ಲಿ ಸ್ತ್ರೀ-ಪುರುಷ ಸಮಾಗಮಕ್ಕೆ ವಿವಾಹ ಬಂಧನದ ಒಂದು ಚೌಕಟ್ಟಿದೆ. ಇದನ್ನು ಮೀರಿ ಹೋಗುವಂತಿಲ್ಲ. ಇದೊಂದು ಸ್ತ್ರೀ-ಪುರುಷರ ಧಾರ್ಮಿಕ, ನೈತಿಕ, ಸಾಮಾಜಿಕ ಕಟ್ಟುಪಾಡುಗಳಿಗೆ ಒಳಪಟ್ಟ ಜೀವನವೆಂದು ಅರ್ಥಮಾಡಬಹುದು. ವ್ಯಾವಯದ (ಸಂಭೋಗದ) ಇಚ್ಛೆಯು ಪ್ರತಿಯೊಬ್ಬರಿಗೆ ನಿತ್ಯದಲ್ಲಿ ಇರುತ್ತದೆ ಎಂಬ ಮಾತನ್ನು ನಿಘಂಟು ರತ್ನಾಕರದಲ್ಲಿ ಹೇಳಲಾಗಿದೆ. ಆದರೆ ನಿಯತಕಾಲಿಕ, ಶಾಸ್ತ್ರರೀತ್ಯ ಅನುಸರಿಸಿದ ಸಂಭೋಗದಿಂದ ಮಾನವನ ಆರೋಗ್ಯ-ತೇಜಸ್ಸುಗಳು ಬೆಳಗುವವು. ಈ ವಿಷಯದಲ್ಲಿ ಮಿತವಾಗಿದ್ದವರು ಆಯುಷ್ಮಂತರು, ಶರೀರವರ್ಣ ಕೆಡದವರು, ವೃದ್ಧಾಪ್ಯವನ್ನು ಬೇಗ ಪಡೆಯದವರು ಹಾಗೂ ಸ್ಥಿರವಾದ ಮಾಂಸಖಂಡವುಳ್ಳವರು ಆಗಿರುತ್ತಾರೆ. ಅತಿ ಸಂಭೋಗದಿಂದ ಮೈಶೂಲೆ, ಕೆಮ್ಮು, ಜ್ವರ, ಉಬ್ಬುಸ, ಕೃಶತ್ವ (ಶೋಷ) ಪಾಂಡುರೋಗ, ಕ್ಷಯರೋಗ, ಆಕ್ಷೇಪಕ ಮೊದಲಾದ ರೋಗಗಳು ಬರುವವು ಎಂದು ಸುಶ್ರುತ ಹೇಳಿದ್ದಾನೆ.

ನಮ್ಮ ಪೂರ್ವಜರು ವಿವಾಹಿತ ಸ್ತ್ರೀ-ಪುರುಷರ ಸಂಯೋಗಕ್ಕೆ ಅನೇಕ ನಿಯಮಗಳನ್ನು ವಿಧಿಸಿದ್ದಾರೆ. ಸಂಧ್ಯಾಕಾಲ, ನಿಷಿದ್ಧ ತಿಥಿಗಳು, ಸ್ತ್ರೀ ಋತುಮತಿಯಾದಾಗ, ಗರ್ಭಿಣಿಯಾದಾಗ, ಪರಸ್ತ್ರೀ, ನಿಷಿದ್ಧ ಸ್ತ್ರೀ, ಬ್ರಹ್ಮಚಾರಿಣಿಯರು, ಗುರುಪತ್ನಿಯರನ್ನು ವರ್ಜಿಸಬೇಕೆಂದಿದ್ದಾರೆ. ಬಾಲ್ಯವಯಸ್ಕರು, ವೃದ್ಧರು ವ್ಯವಾಯಮಾಡಬಾರದು. ಪೂಜ್ಯ ಹಾಗೂ ಅಶುದ್ಧ ಸ್ಥಾನಗಳಲ್ಲಿ, ಜನ ಸಮುದಾಯವಿರುವಲ್ಲಿ, ಪಶುಗಳೊಡನೆ ಹಾಗೂ ಯೋನಿ ಹೊರತಾಗಿ ಇನ್ನಿತರ ಅಂಗಗಳಲ್ಲಿ ಸಂಭೋಗ ಮಾಡಬಾರದು. ಇದಲ್ಲದೆ 'ಅತಿ ಸ್ತ್ರೀ ಸಂಪ್ರಯೋಗಾಚ್ಚ ರಕ್ಷೇದಾತ್ಮಾನ ಮಾತ್ಮವಾನ್'

ಎಂದರೆ ಮಾನವನು ಅತಿಯಾಗಿ ಸ್ತ್ರೀ ಸಂಭೋಗ ಮಾಡದಂತೆ ತನ್ನನ್ನು ವಿಚಾರ ಬುದ್ಧಿಯಿಂದ ಕಾಪಾಡಿಕೊಳ್ಳಬೇಕೆಂದು ಸುಶ್ರುತ ಹೇಳಿದ್ದಾನೆ.

### ಬದಲಾದ ಲೈಂಗಿಕ ದೃಷ್ಟಿ

ಈ ೨೦ನೇ ಶತಮಾನದ ಉತ್ತರಾರ್ಧದಲ್ಲಿ ಭಾರತದಲ್ಲಿ ಇನ್ನಿತರ ಕ್ಷೇತ್ರಗಳಲ್ಲಿ ಬದಲಾವಣೆಗಳಾದಂತೆ ಲೈಂಗಿಕ ವಿಷಯದಲ್ಲೂ ಸಾಕಷ್ಟು ಕ್ರಾಂತಿ (?) ಯಾಗಿದೆ. ಪಾಶ್ಚಾತ್ಯರು ತೋರಿದ ಮುಕ್ತ ಲೈಂಗಿಕ ಜೀವನ ಅನೇಕರಿಗೆ ಅಪ್ಯಾಯಮಾನವಾಯಿತು. ಎಲ್ಲ ಸಾಮಾಜಿಕ, ನೈತಿಕ, ಧಾರ್ಮಿಕ ಕಟ್ಟಳೆಗಳು ಸಡಿಲಾದವು. ಆಚಾರ್ಯ ರಜನೀಶರಂಥವರು ಮುಕ್ತ ಕಾಮಕೇಳಿಯಿಂದಲೂ ಪರಮಾತ್ಮ ಸಂತುಷ್ಟನಾಗುವನೆಂದು ಸಾರಿದರು. ದೇಶ-ವಿದೇಶಗಳಲ್ಲಿ ಈ ತತ್ವ ಪ್ರಚಾರವಾಗಿ ಲಕ್ಷಾನವಧಿ ಜನ ಅವರ ಅನುಯಾಯಿಗಳಾದರು. ವೇಶ್ಯೆಯರ, ಕರೆವೆಣ್ಣುಗಳ ಸಂಖ್ಯೆ ವಿಪರೀತವಾಗಿ ಬೆಳೆಯಿತು. ಇವಲ್ಲದೆ ಕ್ಲಬ್ಬುಗಳು, ಕ್ಯಾಬರೆ ನೃತ್ಯಮಂದಿರಗಳು, ಸ್ನೇಹಿತರ ಕೂಟಗಳು ಸ್ವಚ್ಛಂದ ಕಾಮಕೇಳಿಯ ತಾಣಗಳಾದವು. ಮದ್ಯಸೇವನೆ, ಮಾದಕದ್ರವ್ಯಗಳು, ವಿಕೃತ ಲೈಂಗಿಕ ಚಲನಚಿತ್ರ, ಸಾಹಿತ್ಯಗಳಿಂದ ಮಾನವ ಬುದ್ಧಿಯ ನಿಯಂತ್ರಣ ತಪ್ಪಿತು.

ತಮ್ಮ ಬಡತನ ಸ್ವಲ್ಪ ಮಟ್ಟಿಗಾದರೂ ನೀಗಲೆಂದು ತಮ್ಮ ಅಲ್ಪವಯಿ ಹೆಣ್ಣು ಮಕ್ಕಳನ್ನು ಕಾಮುಕ ವೃದ್ಧರಿಗೆ, ವೇಶ್ಯಾವಾಟಿಕೆಗಳಿಗೆ ಮಾರುವ ಕುಟುಂಬಗಳು ಒಂದೆಡೆಯಾದರೆ ಶಾಲಾ ವಯಸ್ಸಿನ ಎಳೆತನದಲ್ಲಿಯೇ ಲೈಂಗಿಕ ರುಚಿ ನೋಡಬೇಕೆನ್ನುವ ಶಾಲಾ ಬಾಲಕರ ಸಂಖ್ಯೆ ಇನ್ನೊಂದೆಡೆ. ಸಮುದ್ರಯಾನ-ವಿಮಾನಯಾನಗಳ ಮೂಲಕ ದೇಶ-ದೇಶಗಳು ಒಂದಕ್ಕೊಂದು ತೀರ ಹತ್ತಿರವಾದುದರಿಂದ ಜನ ಅತ್ತಿಂದಿತ್ತ ಓಡಾಡುವುದು ಹೆಚ್ಚಾಗಿದೆ. ಪೌರಸ್ತ್ಯ ಜೀವನ-ಸಂಸ್ಕೃತಿ-ಸಂಪ್ರದಾಯ-ಸಾಹಿತ್ಯ-ಸಂಗೀತ-ಶಿಲ್ಪನೃತ್ಯಗಳ ಗೀಳನ್ನು ಹಚ್ಚಿಕೊಂಡು ಬರುವ ಪಾಶ್ಚಿಮಾತ್ಯರು ಒಂದೆಡೆಯಾದರೆ ಪಾಶ್ಚಿಮಾತ್ಯರೇ ಆದರ್ಶರು, ಅನುಕರಣೀಯರಾಗಿದ್ದಾರೆ ಎಂದು ಭಾವಿಸುವ ನಮ್ಮ ಯುವ ಪೀಳಿಗೆಯಜನ ಇನ್ನೊಂದೆಡೆ. ಮಾದಕ ವ್ಯಸನ ಪ್ರಿಯರೂ, ಮುಕ್ತಿ ಕಾಮಜೀವನಕ್ಕೆ ಹೆಸರಾದ ಹಿಪ್ಪಿಗಳ ಸಂಖ್ಯೆ ನಮ್ಮವರೂ ಆದ ದೇಶದಲ್ಲಿ ಹೆಚ್ಚುತ್ತಿರುವುದರ ಪರಿಣಾಮವಾಗಿ ಲೈಂಗಿಕ ರೋಗಗಳು ದಿನೆ ದಿನೆ ಬೆಳೆಯುತ್ತಿವೆ. ಅದರದೊಂದು ಪ್ರತಿರೂಪವೇ ಏಡ್ಸ್ ಎಂಬ ಮಹಾಮಾರಿ ನರಕಾಸುರ.

## ಏಡ್ಸ್ ಪ್ರಾರಂಭವಾದದ್ದು ಹೇಗೆ?

ಒಂದು ಪೂರ್ಣವಿರಾಮದಷ್ಟು ಜಾಗೆಯಲ್ಲಿ ಸುಮಾರು ೨೩ ಕೋಟಿಯಿಂದ ಒಂದು ನೂರುಕೋಟಿಗಳಷ್ಟು ಸಂಖ್ಯೆಯಲ್ಲಿ ನೆಲಸುವ ಈ ಅತಿ ಸೂಕ್ಷ್ಮ ಸಾದಾ ಮೈಕ್ರೋಸ್ಕೋಪಿನಲ್ಲಿ ಕಾಣಲಾಗದ ಏಡ್ಸ್ ರೋಗದ ವೈರಸ್ಸುಗಳ ಮೂಲ ಮಧ್ಯ ಆಫ್ರಿಕದ ಹಸಿರು ಮಂಗಗಳು. ಇತರ ಕೆಲವು ಪ್ರಾಣಿಗಳಲ್ಲೂ ಈ ವೈರಸ್ಸುಗಳು ಕಂಡು ಬರುವವು ಎಂದೂ ಈ ವೈರಸ್ಸುಗಳ ವಿಕಾರ ಪಶುವೈದ್ಯಕೀಯ ಕ್ಷೇತ್ರದಲ್ಲಿ ಸಾಮಾನ್ಯ ಎಂದೂ ಕೆಲವರು ಅಭಿಪ್ರಾಯಪಟ್ಟಿದ್ದರೂ ನಿಶ್ಚಿತವಾಗಿ ಇದರಿಂದ ಏಡ್ಸ್ ಬಂದುದು ಈ ವರೆಗೆ ದೃಢಪಟ್ಟಿಲ್ಲ. ಆಫ್ರಿಕದ ಈ ಹಸಿರು ಮಂಗಗಳು ಮನುಷ್ಯನ ನಿಕಟವರ್ತಿಗಳಾಗಿವೆ. ಅವುಗಳ ಜೊಲ್ಲು, ಕಚ್ಚುವಿಕೆಗಳಿಂದ ಈ ವೈರಸ್ಸುಗಳು ಮಾನವನ ಸಂಪರ್ಕಕ್ಕೆ ಬಂದವು. ಬರುಬರುತ್ತ ಗೊತ್ತಾಗದ, ಗುಣವಾಗದ, ಜ್ವರ, ಭೇದಿ, ನಿಃಶಕ್ತಿ

ಗಂಟುಗಳ ಬಾಧೆ ಹೆಚ್ಚತೊಡಗಿ ನೂರಾರು, ಸಹಸ್ರಾರು ಜನ ಬಳಲತೊಡಗಿದರು. ಸಾವಿಗೀಡಾಗತೊಡಗಿದರು. ಇವರೊಡನೆ ಸ್ತ್ರೀಯರು-ಮಕ್ಕಳು ಕೂಡ ಈ ರೋಗದ ಬಾಧೆಗೆ ಒಳಗಾದರು. ರೋಗ ಯಾವುದೆಂಬುದು ಗೊತ್ತಾಗದೆ ಹೋಯಿತು. ಇಂದು ಕೂಡ ಈ ದೇಶದಲ್ಲಿ ಏಡ್ಸ್ ರೋಗದಿಂದಲೇ ನರಳುವವರ, ಸಾಯುವವರ ಸಂಖ್ಯೆ ಹೆಚ್ಚಾಗಿದೆ ಎಂದರೆ ಅತಿಶಯೋಕ್ತಿಯಲ್ಲ. ೧೯೮೦ರ ಸುಮಾರು ಪಾಶ್ಚಾತ್ಯ ದೇಶಗಳಲ್ಲಿಯ ಲಕ್ಷಾವಧಿ ಜನ ಚಿರಕಾರಿ ರೋಗದೊಡನೆ ಅಕಾಲಮರಣಕ್ಕೆ ತುತ್ತಾದರು. ಅನೇಕ ಸಹಸ್ರ ಮಕ್ಕಳು ಎಚ್‌ಐವಿ ಯೊಡನೆ ಹುಟ್ಟಿ ೨-೩ ವರ್ಷದೊಳಗೆ ಮೇಲಿಂದ ಮೇಲೆ ಬರುವ ರೋಗಸಾಂಕರ್ಯ, ಅಶಕ್ತತೆಗಳಿಗೆ ತುತ್ತಾಗಿ ಸಾವಿಗೀಡಾದವು. ಇವರಿಗೆಲ್ಲ ಆ ದೇಶಗಳಲ್ಲಿ ವೈದ್ಯಕೀಯ ನೆರವು ಕೊಡಲು ಕೂಡ ಸಾಧ್ಯವಾಗಲಿಲ್ಲವೆಂದ ಮೇಲೆ ರೋಗದ ಭೀಕರತೆಯನ್ನು ಅರ್ಥಮಾಡಿಕೊಳ್ಳಬಹುದು.

ಸುಮಾರು ೨೦ ವರ್ಷಗಳ ಹಿಂದೆ ಹೈತಿ ಮತ್ತು ಜಾಯಿರಾ ರಾಷ್ಟ್ರಗಳಲ್ಲಿ ಸಂಸ್ಕೃತಿಯು ವಿನಿಮಯಕ್ಕೆಂದು ಹತ್ತು ಸಹಸ್ರ ಜನ ವರ್ಗಾವಣೆಯಾದಾಗ ಏಡ್ಸ್ ವೈರಸ್ಸುಗಳು ಅಟ್ಲಾಂಟಿಕ್ ಸಮುದ್ರವನ್ನು ದಾಟಿ ಹೈತಿ ದೇಶದ ಮುಖಾಂತರ ಏಡ್ಸ್ ರೋಗ ಲೈಂಗಿಕ ಸ್ವೇಚ್ಛಾಚಾರಿಗಳ ಸ್ವರ್ಗವಾಗಿದ್ದ ನ್ಯೂಯಾರ್ಕಿಗೆ ಬಂದಿತೆನ್ನಲಾಗಿದೆ. ಹೀಗೆ ಒಬ್ಬರಿಂದ ಇನ್ನೊಬ್ಬರಿಗೆ ಹರಡುತ್ತ ಈ ರೋಗ ಅಲ್ಲಿಂದ ಬೇರೆ-ಬೇರೆ ದೇಶಗಳಿಗೆ ಹರಡುತ್ತಿದ್ದು ನಿತ್ಯ ೫೦೦ ಯುವತಿಯರು ಈ ರೋಗಕ್ಕೆ ಬಲಿಯಾಗುತ್ತಿದ್ದಾರೆ. ಅವರಲ್ಲಿ ೧೫ ರಿಂದ ೨೫ ವರ್ಷದೊಳಗಿನ ಯುವತಿಯರೇ ಹೆಚ್ಚು ಎಂದು ತಿಳಿದುಬಂದಿದೆ. ಈಗ ಭಾರತದಲ್ಲಿ ಸುಮಾರು ಒಂದೂವರೆಯಿಂದ ಎರಡುಕೋಟಿ ಏಡ್ಸ್ ರೋಗಿಗಳಿರುವರೆಂದು ಒಂದು ಅಂದಾಜಿದ್ದು ಈ ಸಂಖ್ಯೆ ದಿನೆ ದಿನೆ ಹೆಚ್ಚಾಗುತ್ತಿದೆ. ಮುಂಬೈ ನಗರವೊಂದನ್ನೇ ಉದಾಹರಣೆಗೆ ತೆಗೆದುಕೊಂಡರೆ ಅಲ್ಲಿಯ ಕಾಮಾಟಿಪುರದಲ್ಲಿರುವ ಸಹಸ್ರಾವಧಿ ವೇಶ್ಯೆಯರಲ್ಲಿ ಶೇಕಡಾ ೬೦ರಷ್ಟು ಏಡ್ಸ್ ರೋಗಿಗಳಿದ್ದಾರೆ ಎಂದು ರಕ್ತಪರೀಕ್ಷೆಯಿಂದ ಗೊತ್ತಾಗಿದೆ. ಇವರೊಡನೆ ಲೈಂಗಿಕ ಸಂಪರ್ಕವಿಯುವ ಲಕ್ಷಾವಧಿ ಜನರಿಗೆ ನಿತ್ಯ ಏಡ್ಸ್‌ರೋಗ ತಗಲುತ್ತಿದೆ ಎಂದರೆ ಈ ರೋಗ ಎಷ್ಟು ತೀವ್ರವಾಗಿ ಬೆಳೆದೀತೆಂಬುದು ಎಂಥವರ ಎದೆಯನ್ನೂ ನಡುಗಿಸೀತು.

೧೯೮೧ರಲ್ಲಿ ಮೊಟ್ಟಮೊದಲು ಅಮೆರಿಕದ ಲಾಸ್ ಏಂಜಲಿಸ್ ಮತ್ತು ನ್ಯೂಯಾರ್ಕ್ ಪಟ್ಟಣಗಳಲ್ಲಿ ಪತ್ತೆಯಾದ ಈ ಏಡ್ಸ್ ರೋಗದ ಬಗ್ಗೆ ೩-೪ ಸಾವಿರವರ್ಷಗಳಷ್ಟು ಹಳೆಯದಾದ ಆಯುರ್ವೇದ ಏನು ತಾನೆ ಹೇಳೀತು? ಎಂದು ನೀವೆನ್ನಬಹುದು. ಆಯುರ್ವೇದದಲ್ಲಿ ಏಡ್ಸ್ ಎಂಬ ಹೆಸರಿನಿಂದ ಈ ರೋಗವನ್ನು ಗುರುತಿಸುವ ಸಾಧ್ಯತೆ ಇರದಿದ್ದರೂ ಈ ರೋಗದ ಲಕ್ಷಣಗಳನ್ನು ಹೋಲುವ 'ಶೋಷ' (ಪ್ರತಿಲೋಮ ಕ್ಷಯ) ಹಾಗೂ 'ಓಜೋಕ್ಷೀಣತೆ'ಗಳನ್ನು ಆಯುರ್ವೇದ ಪಂಡಿತರು ಸಾವಿರಾರು ವರ್ಷಗಳಷ್ಟು ಹಿಂದೆಯೆ ಹೇಳಿದ್ದಾರೆ. ಇವು ಚಿಕಿತ್ಸೆಗೆ ಅಸಾಧ್ಯವೆಂಬ ಮಾತನ್ನೂ ಸ್ಪಷ್ಟಪಡಿಸಿದ್ದಾರೆ ಎನ್ನುವುದು ಗಮನಿಸಬೇಕು.

ಆಯುರ್ವೇದದಲ್ಲಿ ರೋಗದ ಹೆಸರಿಗೆ ಯಾವತ್ತೂ ಹೆಚ್ಚಿನ ಆದ್ಯತೆಯಿರುವುದು ಕಂಡು ಬರುವುದಿಲ್ಲ. ರೋಗಿಯಲ್ಲಿ ಕಂಡುಬರುವ ದೋಷ (ತ್ರಿದೋಷಗಳು) ಧಾತು (ಸಪ್ತಧಾತುಗಳು) ಮಲಾಂಶಗಳ ಅಸ್ವಾಭಾವಿಕ ಸ್ಥಿತಿಗಳನ್ನು ಸಮಸ್ಥಿತಿಗೆ ತರುವ ಚಿಕಿತ್ಸೆಯನ್ನೇ ಮಾಡಬೇಕೆಂದಿದ್ದಾರೆ ನಮ್ಮ ಪೂರ್ವಜರು. ಹೀಗಾಗಿ ಹೊಸ ಹೊಸ ಲಕ್ಷಣ ಸಮೂಹಗಳ ಹೆಸರನ್ನು ಹೊತ್ತು ಬರುತ್ತಿರುವ ರೋಗಗಳ ಬಗ್ಗೆ ಹೆದರಬೇಕಿಲ್ಲ. ಆ ರೋಗಕ್ಕೆ ಕೊಡಲ್ಪಡುವ ಚಿಕಿತ್ಸೋಪಕ್ರಮಗಳಿಂದ ರೋಗವು ಗುಣವಾದರೆ ಆಯಿತಲ್ಲ, ರೋಗದ ಹೆಸರಿಗೇಕೆ ಮಹತ್ವ ಕೊಡಬೇಕು?

ಹೆಪಟೈಟಿಸ್-ಬಿ (ಅಸಾಧ್ಯ ಕಾಮಣಿಗೆ ಕಾರಣವಾಗುವ) ವೈರಸ್ಸುಗಳ ನಿರ್ಮೂಲನೆಗೆ ಕೇರಳದಲ್ಲಿ ಯಶಸ್ವಿಯಾಗಿ ಚಿಕಿತ್ಸೆ ಮಾಡಲಾಗುತ್ತದೆ. (ಈ ರೋಗ ಸಮೂಲವಾಗಿ ನಾಶವಾಗುವುದೋ ಇಲ್ಲವೋ ಎಂಬುದರ ಬಗೆಗೆ ಭಿನ್ನಾಭಿಪ್ರಾಯಗಳಿವೆ) ಏಡ್ಸ್ ರೋಗವನ್ನು ಸಂಪೂರ್ಣ ಗುಣಮಾಡಲು ಸಾಧ್ಯವಾಗದಿದ್ದರೂ ರೋಗಲಕ್ಷಣಗಳ ತೊಂದರೆಗಳನ್ನು ಕಡಿಮೆ ಮಾಡಲು, ಹಸಿವು, ದೈಹಿಕ ತೂಕ, ರೋಗ ನಿರೋಧಕ ಶಕ್ತಿಗಳನ್ನು ಹೆಚ್ಚಿಸಿ ಸಾವನ್ನು ಮುಂದೂಡಲು ಸಾಧ್ಯವಾಗುತ್ತಿದೆ ಎಂಬುದು ಪ್ರಯೋಗಗಳಿಂದ ಸಿದ್ಧವಾಗಿದೆ. ಸುಲಭವಾಗಿ ಸಿಕ್ಕುವ, ನಿರಪಾಯಕರ ವಾದ, ಆಧುನಿಕ ಎಚ್‌ಐವಿ ನಿರೋಧಕ ಔಷಧಿಗಳಿಗೆ ಹೋಲಿಸಿದರೆ ಅಷ್ಟೊಂದು ದುಬಾರಿಯಲ್ಲದ ಈ ಔಷಧಗಳನ್ನು ಏಕೆ ಬಳಸಬಾರದು?

## ರಾಷ್ಟ್ರೀಯ-ಅಂತಾರಾಷ್ಟ್ರೀಯ ಸಮಸ್ಯೆ

ನಾವು ಸಾಕಷ್ಟು ಸುರಕ್ಷಿತರಾಗಿರುವಾಗ ಏಡ್ಸ್‌ಗೊಡವೆ ನಮಗೇಕೆ ಎಂದು ಬಹುಜನ ನಿಶ್ಚಿಂತರಾಗಿದ್ದು ಬಿಡುವುದು ಸ್ವಾಭಾವಿಕ. ಆದರೆ ಈಗ ಇದು ನಮ್ಮ-ನಿಮ್ಮ ಸಮಸ್ಯೆಯಾಗಿ ಉಳಿಯದೆ ರಾಷ್ಟ್ರೀಯ-ಅಂತಾರಾಷ್ಟ್ರೀಯ ಸಮಸ್ಯೆ ಆಗಿದೆ. ಆದ್ದರಿಂದ ನಮಗೆ ಈ ರೋಗದ ಬಗ್ಗೆ ಸರಿಯಾದ ತಿಳಿವಳಿಕೆ ಇರಲೇಬೇಕಾಗುತ್ತದೆ. ನಾವು ಎಲ್ಲ ಸುರಕ್ಷಿತ ಕ್ರಮಗಳನ್ನೂ ಕಾಪಾಡಿಕೊಂಡು ಬರುವುದಲ್ಲದೆ ನಮ್ಮ ಪತ್ನಿ, ಸಹೋದರರು, ಸ್ನೇಹಿತರು, ಆಪ್ತರು, ಮಕ್ಕಳು-ಇವರಿಗೆಲ್ಲ ತಿಳಿಹೇಳಬೇಕು. ಮುಖ್ಯವಾಗಿ ಮಾದಕ ದ್ರವ್ಯಗಳ ಸೇವನೆ, ಸಲಿಂಗಕಾಮ, ವಿಕೃತಕಾಮ, ವೇಶ್ಯಾಸಂಪರ್ಕಗಳಿಂದ ಹರಡುವ ಈ ರೋಗ ಹೆಂಡತಿ, ಗಂಡ ಅವರಿಂದ ಹುಟ್ಟುವ ಮಕ್ಕಳು, ಗೊತ್ತಾಗದೆ ರೋಗಿಯಿಂದ ಪಡೆದುಕೊಂಡ ರಕ್ತ, ವೀರ್ಯದಾನ ಹಾಗೂ ಸರಿಯಾಗಿ ಶುದ್ಧೀಕರಿಸಲ್ಪಡದ ಸಿರಿಂಜುಗಳು, ಚಾಕು, ಕತ್ತರಿ, ಸೂಜಿ ಹಾಗೂ ಶಸ್ತ್ರಚಿಕಿತ್ಸಾ ಸಾಧನಗಳಿಂದಲೂ ಈ ರೋಗ ಇನ್ನೊಬ್ಬರಿಗೆ ಅಂಟಿಕೊಳ್ಳುವ ಸಾಧ್ಯತೆ ಇದೆ. ನಾಪಿತನು ಸರಿಯಾದ ಶುದ್ಧತೆ ಕಾಪಾಡಿಕೊಳ್ಳದಿದ್ದರೆ ಅವನಿಂದಲೂ ಅನೇಕರಿಗೆ ಈ ರೋಗ ಹಬ್ಬುವುದು. ಕಾರಣ ನಮ್ಮ ಸುತ್ತು ಮುತ್ತಲೂ ಈ ಏಡ್ಸ್ ರೋಗಿಗಳು ಹೆಚ್ಚಾದಾಗ ಅವರಿಂದ ನಾವು ಬಚಾವಾಗುವುದು ಅಷ್ಟೊಂದು ಸುಲಭವಾಗುವುದಿಲ್ಲ. ಆದ್ದರಿಂದ ಈ ಸಮಸ್ಯೆ ಕೇವಲ ನಮ್ಮ-ನಿಮ್ಮ ಸಮಸ್ಯೆಯಾಗಿ ಉಳಿದಿಲ್ಲ; ಒಟ್ಟಾರೆ ಸಮಾಜದ, ರಾಷ್ಟ್ರದ, ಅಂತಾರಾಷ್ಟ್ರದ ಸಮಸ್ಯೆಯೆ ಆಗಿದೆ. ಕಾರಣ ಪ್ರತಿಯೊಬ್ಬನಿಗೆ ಈ ರೋಗದ ಬಗ್ಗೆ ಸರಿಯಾದ ತಿಳಿವಳಿಕೆ ಇರಬೇಕಾದುದು ಹಾಗೂ ಈ ರೋಗದ ವಿರುದ್ಧ ಎಲ್ಲರೂ ಸೇರಿ ಹೋರಾಡುವುದು ಅನಿವಾರ್ಯವಾದ ಅವಶ್ಯಕತೆಯಾಗಿದೆ.

## ಶಾಲಾ ಮಕ್ಕಳಲ್ಲೂ ಏಡ್ಸ್

ಇತ್ತೀಚೆಗೆ ಚೆನ್ನೈ (ಮದ್ರಾಸ್) ದಿಂದ ಬಂದ ವರದಿಯ ಪ್ರಕಾರ ಕೆಲ ಶಾಲಾ ಮಕ್ಕಳಲ್ಲಿ ಏಡ್ಸ್ ರೋಗವಿರುವುದು ಪತ್ತೆಯಾಗಿದೆ. ದೆಹಲಿಯ ಎ.ಐ.ಐ.ಎಂ.ಎಸ್. ಕಮ್ಯುನಿಟಿ ಮೆಡಿಸಿನ್ ಕೇಂದ್ರದವರು ಅಲ್ಲಿಯ ೧೧ ಶಾಲೆಗಳಲ್ಲಿ ನಡೆಸಿದ ಸರ್ವೇಕ್ಷಣೆಯ ಪ್ರಕಾರ ಅನೇಕ ವಿದ್ಯಾರ್ಥಿಗಳು ಲೈಂಗಿಕ ಚಟುವಟಿಕೆಗಳಲ್ಲಿ ತೊಡಗಿದ್ದುದು ಕಂಡು ಬಂದಿತು. ಅಲ್ಲದೆ ಈ ಮಕ್ಕಳಲ್ಲಿ ಚಿಕ್ಕ ವಯಸ್ಸಿನಲ್ಲೂ ಈ ಲೈಂಗಿಕ ರೋಗಗಳು ಅಂಟುವವೆಂಬ ಜ್ಞಾನ ಅವುಗಳಿಗೆ ಇಲ್ಲದಿರುವುದು ವ್ಯಕ್ತವಾಗಿದೆ.

ಪುಣೆಯ ಮಾಧ್ಯಮಿಕ ಶಾಲಾ ಮಕ್ಕಳಲ್ಲಿ ನಡೆಸಿದ ಸರ್ವೇಕ್ಷಣೆಯ ಪ್ರಕಾರ ಶೇಕಡಾ ೭೦ರಷ್ಟು ವಿದ್ಯಾರ್ಥಿಗಳು ತಮಗೆ ಲೈಂಗಿಕ ಆಸಕ್ತಿಯಿರುವುದನ್ನು ಬಹಿರಂಗಪಡಿಸಿದ್ದಾಗಿ ವರದಿ ಬಂದಿದೆ.

ಶಾಲಾ-ಕಾಲೇಜುಗಳ ವಿದ್ಯಾರ್ಥಿ ವಿದ್ಯಾರ್ಥಿನಿಯರು ಪರಸ್ಪರರಲ್ಲಿ ಆಕರ್ಷಿತರಾಗುವುದು, ಸ್ವೇಚ್ಛೆಯಿಂದ ವರ್ತಿಸುವುದು ಸಾಮಾನ್ಯವಾಗುತ್ತಿದೆ. ಇದೇ ಮುಂದುವರಿದು ಇವರನ್ನು ವೇಶ್ಯೆಯರಲ್ಲಿಗೆ ಕರೆದೊಯ್ದಾಗ ಏಡ್ಸ್ ಅಥವಾ ಲೈಂಗಿಕ ರೋಗಗಳು ಅಂಟಿಕೊಳ್ಳುವ ಸಾಧ್ಯತೆ ಇಲ್ಲದಿಲ್ಲ.

ನಾವು ಮಕ್ಕಳಿಗೆ ಆರೋಗ್ಯ, ಆಟ, ವಿಜ್ಞಾನ, ಭೂಗೋಲ, ಗಣಿತ, ಕಂಪ್ಯೂಟರ್ ಎಲ್ಲ ಕಲಿಸುತ್ತೇವೆ. ಆಹಾರ ಪಚನವಾಗುವ ಬಗೆ, ರಕ್ತಪರಿಚಲನ, ಉಸಿರಾಟ, ದೇಹರಚನೆ ಹೀಗೆಲ್ಲ ಹೇಳಿಕೊಟ್ಟರೂ ಲೈಂಗಿಕ ವಿಷಯಗಳ ಬಗೆಗೆ, ಗುಹ್ಯ ರೋಗಗಳ ಬಗೆಗೆ ಎಂದಾದರೂ ತಿಳಿಹೇಳಿದ್ದೇವೆಯೆ? ನಾವು ಈ ವಿಷಯಗಳನ್ನು ಎಷ್ಟು ಮುಚ್ಚಿಡಲು ಪ್ರಯತ್ನಿಸುತ್ತೇವೆಯೋ ಅಷ್ಟೇ ಬಲಯುತವಾಗಿ ಅವು ಹೊರಬರಲು ಪ್ರಯತ್ನಿಸುತ್ತವೆ. ಮಕ್ಕಳು ನಾವು ನೇರವಾಗಿ ಕೊಡದ ತಿಂಡಿಗಳನ್ನು ಕದ್ದು ಮುಚ್ಚಿ ತಿನ್ನುವಂತೆ ಈ ವಿಷಯಗಳನ್ನು ಸಂಗ್ರಹಿಸಲು, ತಿಳಿಯಲು, ಅನುಭವಿಸಲು ಕಾತುರರಾಗುತ್ತವೆ. ಆಗ ಇವರಿಗೆ ಅಸ್ಪಷ್ಟವಾದ, ಅವೈಜ್ಞಾನಿಕವಾದ ತಿಳಿವಳಿಕೆ ಉಂಟಾಗಬಹುದು. ಎಳೆ ವಯಸ್ಸಿನಲ್ಲೆ ಒಮ್ಮೆ ಈ ರೋಗವಂಟಿತೆಂದರೆ ಅವರ ಜೀವನ ಮೊಟಕಾದಂತೆಯೆ. ಅದಕ್ಕಾಗಿ ಮಕ್ಕಳಿಗೆ ಶಾಲಾ-ಕಾಲೇಜುಗಳಲ್ಲಿ ಲೈಂಗಿಕ ವಿಷಯಗಳ ಬಗೆಗೆ ಸರಿಯಾದ, ಸರಳವಾದ, ವೈಜ್ಞಾನಿಕವಾದ ವಿವರಣೆಗಳನ್ನು ಕೊಡಬೇಕು. ಹೀಗೆ ಮಾಡಿದರೆ ಮಕ್ಕಳನ್ನು ಈ ಭಯಂಕರ ರೋಗದಿಂದ ರಕ್ಷಿಸಲು ಎಷ್ಟೋ ಅನುವಾಗುವುದು.

### ಈ ಅಂಶಗಳನ್ನು ಗಮನಿಸಿ

* ಮಕ್ಕಳ ಮುಂದೆ ಉದ್ದುದ್ದ ಭಾಷಣ ಬಿಗಿಯದೆ ವಿಷಯವನ್ನು ಸರಳವಾಗಿ, ಅವರಿಗೆ ತಿಳಿಯುವಂತೆ ಹೇಳಿ; ಆದರೆ ಭಯ ಹುಟ್ಟಿಸಬೇಡಿ.
* ವೈಜ್ಞಾನಿಕ, ತಾಂತ್ರಿಕ ಶಬ್ದಗಳನ್ನು ಬಳಸಿ ಹೇಳಬೇಡಿ. ಗ್ರಹಿಸಲು ಕಷ್ಟವಾದೀತು.
* ಲೈಂಗಿಕ ಜೀವನದ ಬಗೆಗೆ ಅವರು ಅತಿಯಾದ ಕುತೂಹಲ ಬೆಳೆಸಿಕೊಳ್ಳದಂತೆ, ಅದೊಂದು ದೈಹಿಕ ಸಹಜಕ್ರಿಯೆ ಎನ್ನುವಂತೆ ಹೇಳಬೇಕು.
* ಮಕ್ಕಳು ಲೈಂಗಿಕ ವಿಷಯವಾಗಿ ಕೇಳುವ ಪ್ರತಿ ಪ್ರಶ್ನೆಗೂ ಸಮರ್ಪಕ ಉತ್ತರ ಕೊಡಬೇಕು. ಒಂದು ವೇಳೆ ನಿಮಗೆ ಉತ್ತರ ಗೊತ್ತಿರದಿದ್ದರೆ ನಿಮ್ಮ ವೈದ್ಯರೊಡನೆ ಸಮಾಲೋಚಿಸಿ ಅವರಿಗೆ ಸರಿಯಾಗಿ ತಿಳಿಹೇಳಬೇಕು. ಇದರಿಂದ ನೀವು ನಿಮ್ಮ ಮಕ್ಕಳ ಆರೋಗ್ಯ, ಭವಿಷ್ಯಗಳ ಬಗೆಗೆ ಕಾಳಜಿವಹಿಸಿದಂತಾಗುತ್ತದೆ.

### ಏಡ್ಸ್ ರೋಗದ ವೈರಸ್

ಇವು ರೋಗಿಯ ರಕ್ತ, ವೀರ್ಯ, ಮಿದುಳಿನ ದ್ರವದಲ್ಲಿ ಮುಖ್ಯವಾಗಿ ಕಂಡುಬರುತ್ತವೆ. ಕಣ್ಣೀರು, ಲಾಲಾರಸ, ತಾಯಿಯ ಎದೆಹಾಲು, ಮೂತ್ರ, ಗರ್ಭಾಶಯ ದ್ವಾರ ಹಾಗೂ ಯೋನಿಸ್ರಾವಗಳಲ್ಲಿ ಸ್ವಲ್ಪ ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತವೆ. ಈ ವೈರಸ್ಸುಗಳನ್ನು ಮಿದುಳು, ರಸಗ್ರಂಥಿಗಳು, ಎಲುಬಿನ ಮಜ್ಜಾಭಾಗ, ಚರ್ಮಗಳಲ್ಲೂ ಕಾಣಬಹುದಾಗಿದೆ. ಆದರೆ ರೋಗ ರಕ್ತ ಹಾಗೂ ವೀರ್ಯಗಳಿಂದಲೇ ವಿಶೇಷವಾಗಿ ಇನ್ನೊಬ್ಬರಿಗೆ ಅಂಟುವುದು.

ಈ ಹೆಚ್.ಐ.ವಿ.-೧ ಹಾಗೂ ಎಚ್.ಐ.ವಿ-೨ ವೈರಸ್ಸುಗಳು ೧/೧೦,೦೦೦ ಮಿಲಿಮೀಟರಿನಷ್ಟು ಚಿಕ್ಕದಾಗಿರುತ್ತವೆ. ಒಂದು ಕೂದಲಿನ ದಪ್ಪಕ್ಕೆ ಹೋಲಿಸಿದರೆ ಇವುಗಳ ಗಾತ್ರ ಸಾವಿರಪಾಲು ಸಣ್ಣದು. ಹಾವಿನಾಕಾರದ, ದಾರದಂತಿರುವ ಆರ್.ಎನ್.ಎ. ದಿಂದ ರಚಿಸಲ್ಪಟ್ಟಿರುವವು. ಈ

ವೈರಸ್ಸಿಗೆ ಸ್ಪೈಕ್ ಪ್ರೋಟಿನ್ ಇದ್ದು ಅದು CDY ಎನ್ನುವ ಹೆಲ್ಪರ್ ಟಿ ಕೊಲ್ಲಿಗೆ ಅಂಟಿಕೊಳ್ಳುತ್ತದೆ. ನಮ್ಮ ದೇಹದ ಬಿಳಿರಕ್ತಕಣಗಳು ರೋಗನಿರೋಧಕ ಶಕ್ತಿಯನ್ನು ಹೊಂದಿವೆ. ಆದರೆ ಈ ವೈರಸ್ಸುಗಳು ಟಿ-ಕೊಲ್ಲುಗಳನ್ನು ತಿಂದುಹಾಕಿಬಿಡುವುದರಿಂದ ಏಡ್ಸ್ ರೋಗ ತಗಲಿ ರೋಗನಿರೋಧಕ ಶಕ್ತಿ ಕುಸಿಯತೊಡಗುವುದು.

ಈ ಏಡ್ಸ್ ರೋಗದ ವೈರಸ್ಸುಗಳ ಅಸ್ತಿತ್ವವು ಸುಮಾರು ೧೯೫೦ರಿಂದಲೇ ಅಗೋಚರವಾಗಿ, ನಿರ್ದಿಷ್ಟವಾಗಿ ಗೊತ್ತಾಗದೆ ಉಳಿದಿತ್ತು. ಆದರೆ ಅದು ನಿಶ್ಚಿತವಾಗಿ ಗೊತ್ತಾದದ್ದು ಮಾತ್ರ ೩೫ ವರ್ಷಗಳ ನಂತರ. ೧೯೫೯ರಲ್ಲಿ ನಾವಿಕನೊಬ್ಬನಿಗಾದ ಶೋಷರೋಗವು ಯಾವ ಚಿಕಿತ್ಸೆಯೂ ಫಲಕೊಡದೆ ಅವನು ಮೃತ್ಯುವಶನಾದ. ಆಗ ಅವನ ಕೆಲ ಅಂಗಾಂಗ ಅವಶೇಷಗಳನ್ನು ಮ್ಯಾಂಚೆಸ್ಟರಿನಲ್ಲಿ ಮುಂದಿನ ಪರೀಕ್ಷೆಗಾಗಿ ಪ್ರಯೋಗಾಲಯದಲ್ಲಿ ಕಾಯ್ದಿಡಲಾಗಿತ್ತು. ಹೆಚ್.ಐ.ವಿ. ವೈರಸ್ಸುಗಳನ್ನು ಕಂಡುಹಿಡಿದ ಬಳಿಕ ಆ ರೋಗಿಯ ಅಂಗಾವಶೇಷಗಳನ್ನು ಪರೀಕ್ಷಿಸಲಾಗಿ ಅದರಲ್ಲಿ ಹೆಚ್.ಐ.ವಿ. ವೈರಸ್ಸುಗಳಿದ್ದುದು ಕಂಡುಬಂದಿತು. ಇದರಿಂದ ಉತ್ಸಾಹಿತರಾದ ವಿಜ್ಞಾನಿಗಳು ಸಾವಿರಾರು ವರ್ಷಗಳ ಹಿಂದೆ ಇಜಿಪ್ತಿನಲ್ಲಿ ಕೆಡದಂತೆ ಇಡಲ್ಪಟ್ಟ ಕೆಲ ಮಮ್ಮಿಗಳನ್ನು ಪರೀಕ್ಷಿಸಿದಾಗ ಅವುಗಳಲ್ಲಿ ಈ ವೈರಸ್ಸು ಕಂಡುಬರಲಿಲ್ಲ. ಕಾರಣ ಈ ವೈರಸ್ಸುಗಳು ಆಧುನಿಕ ಜಗತ್ತಿನ ಲೈಂಗಿಕ ಅಪರಾಧದ ಕುರುಹುಗಳಾಗಿವೆ ಎಂಬ ಮಾತು ನಿಶ್ಚಿತವಾಯಿತು.

ಈ ಹೆಚ್.ಐ.ವಿ. ವೈರಸ್ಸುಗಳನ್ನು ಮೊಟ್ಟ ಮೊದಲು ಕಂಡುಹಿಡಿದವರು ಯಾರು ಎಂಬ ಬಗ್ಗೆ ವಿವಾದ ಹುಟ್ಟಿಕೊಂಡಿತು. ಏಕೆಂದರೆ ನ್ಯಾಶನಲ್ ಇನ್‌ಸ್ಟಿಟ್ಯೂಟ್ ಆಫ್ ಯುನೈಟೆಡ್ ಸ್ಟೇಟ್ಸ್‌ನ ಡಾ. ರಾಬರ್ಟ್ ಗ್ಯಾಲೋ ಎಂಬಾತ ಈ ವೈರಸ್ಸುಗಳನ್ನು HTLV-III ಎಂದು ಹೆಸರಿಸಿದ. ಪ್ಯಾರಿಸ್ಸಿನ ಪ್ಯಾಶ್ಚರ್ ಇನ್‌ಸ್ಟಿಟ್ಯೂಟ್‌ನ ಡಾ. ಲ್ಯೂಕ್ ಮಾಂಟೇನೀರ್ ಈ ವೈರಸ್ಸುಗಳಿಗೆ LAV ಎಂದು ಹೆಸರಿಸಿದ. ಇವರೀರ್ವರೂ ನ್ಯಾಯಾಲಯದ ಕಟ್ಟೆ ಹತ್ತಿ ಡಾ. ಮಾಂಟೇನೀರ್‌ರವರೇ ೧೯೮೩ರಲ್ಲಿ HIV ವೈರಸ್ಸುಗಳನ್ನು ಪ್ರಪ್ರಥಮವಾಗಿ ಕಂಡುಹಿಡಿದ ಎಂದು ತೀರ್ಮಾನಿಸಲಾಯಿತು.

ಹೆಚ್.ಐ.ವಿ. ವೈರಸ್ಸುಗಳು ಆಯುರ್ವೇದ ರೀತ್ಯಾ ಯೋನಿ, ಗರ್ಭಾಕಂಠ, ಗುದ, ಶಿಶ್ನಗಳ ಮೂಲಕ ಶ್ಲೇಷ್ಮಕಲಾದಿಂದ ದೇಹ ಪ್ರವೇಶ ಪಡೆಯುತ್ತವೆ. ಈ ವೈರಸ್ಸುಗಳು ಮಾನವ ದೇಹದಲ್ಲಿ ಹೆಚ್ಚು ಸಾಂದ್ರತೆಯುಳ್ಳ ರಕ್ತ, ಶುಕ್ರ, ಯೋನಿಸ್ರಾವ, ಸುಷುಮ್ನಾಜಲ, ಸಂಧಿಗತ ದ್ರವ, ಉದರ ಜಲ, ಪುಪ್ಪುಸ ಜಲ, ಹೃದ್ಯಜಲ, ಗರ್ಭವೇಷ್ಟಿತ ದ್ರವಗಳನ್ನು ಆಶ್ರಯಿಸುತ್ತವೆ.

### ರೋಗ ಹರಡುವ ಬಗೆ

೧. ಸಲಿಂಗ ಕ್ರೀಡೆ.

೨. ಸ್ತ್ರೀ-ಪುರುಷರಿಬ್ಬರೊಡನೆ (Bi-sexuality) ಭೋಗಿಸುವುದರಿಂದ.

೩. ರೋಗಿಯಿಂದ ಪಡೆದ ರಕ್ತದಾನ, ವೀರ್ಯದಾನಗಳಿಂದ.

೪. ರೋಗಪೀಡಿತರೊಡನೆ ಕಾಂಡೋಮ್ (ನಿರೋಧ್) ಇಲ್ಲದೆ ಲೈಂಗಿಕ ಸಂಪರ್ಕ ಹೊಂದುವುದರಿಂದ.

೫. ಮಾದಕವ್ಯಸನಿಗಳು ಒಂದೇ ಸಿರಿಂಜಿನಿಂದ ೧೫-೨೦ ಜನ ಸಾಮೂಹಿಕವಾಗಿ ತಾವೆ ಚುಚ್ಚುಮದ್ದು ತೆಗೆದುಕೊಳ್ಳುವುದರಿಂದ.

೬. ಏಡ್ಸ್ ಸ್ತ್ರಿ ರೋಗಿ ಹೆತ್ತಮಗುವಿನ ಮೂಲಕ.

# ಏಡ್ಸ್ ಬಗ್ಗೆ ಕೆಲ ಮಹತ್ವದ ವಿಷಯಗಳು

* ಆಧುನಿಕ ಜಗತ್ತಿನ ಮಾರಣಾಂತಿಕ ರೋಗ. ಇಂದು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಸಾವಿಗೆ ಪ್ರಮುಖ ಕಾರಣವಾಗಿದೆ.
* ಈ ಜಗತ್ತಿನಲ್ಲಿ ಅಂತಾರಾಷ್ಟ್ರೀಯ ಮಹತ್ವ ಪಡೆದದ್ದು ಏಡ್ಸ್ ಮಾತ್ರ. ಇಂದಿನವರೆಗೆ ವೈದ್ಯ ಜಗತ್ತು ಪ್ರತಿಸಾರೆ ಈ ರೋಗದ ವಿರುದ್ಧ ಸಮರ ಸಾರಿ ಸೋಲುತ್ತಿದೆ.
* ಇದರಲ್ಲಿ ಮುಖ್ಯವಾಗಿ ರೋಗದ ವಿರುದ್ಧ ಹೋರಾಡುವ ದೇಹದ ನೈಸರ್ಗಿಕ ಶಕ್ತಿಯೇ ಕುಗ್ಗಿ ಹೋಗುವುದರಿಂದ ನೆಗಡಿ, ಕೆಮ್ಮು, ಜ್ವರ, ಭೇದಿಗಳಂತಹ ಸಣ್ಣ-ಪುಟ್ಟ ರೋಗಗಳೂ ಬೇಗ ವಾಸಿಯಾಗದೆ ಅನೇಕ ಉಪದ್ರವಗಳನ್ನುಂಟು ಮಾಡುವವು. (ಔಷಧಿಗಳಿಗಿಂತ ದೇಹದ ನೈಸರ್ಗಿಕ ಶಕ್ತಿಯೇ ರೋಗದ ವಿರುದ್ಧ ಹೋರಾಡುವುದು).
* ಒಮ್ಮೆ ಈ ರೋಗ ಅಂಟತೆಂದರೆ ಅದು ಜೀವನ ಪರ್ಯಂತವೆಂದೇ ಅರ್ಥ. ರೋಗ ಲಕ್ಷಣ ಕಾಣಿಸದಿದ್ದವರೂ ರೋಗವನ್ನು ಇತರರಿಗೆ ಹರಡಲು ಕಾರಣರಾಗುವರು.
* ಭಾರತದಲ್ಲಿ ಈಗಾಗಲೇ ಹದಿನೇಳೂವರೆ ಲಕ್ಷಕ್ಕಿಂತ ಹೆಚ್ಚು ಜನ ಏಡ್ಸ್ ರೋಗಿಗಳಿದ್ದು ಈ ಸಂಖ್ಯೆ ಇನ್ನು ಮೂರೇ ವರ್ಷಗಳಲ್ಲಿ ನಾಲ್ವತ್ತು ಲಕ್ಷಕ್ಕೇರಬಹುದು ಎಂದು ಅಂದಾಜಿಸಲಾಗಿದೆ.
* ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಏಡ್ಸ್ ಸಲಿಂಗ ಕಾಮಿಗಳಾದ ಪುರುಷರಲ್ಲಿ ಹೆಚ್ಚಾಗಿದ್ದರೆ ಏಶಿಯದ ದೇಶಗಳಲ್ಲಿ ಹೆಣ್ಣು ಮಕ್ಕಳಿಗೆ ಈ ರೋಗ ಬರುವುದು ಹೆಚ್ಚು. ಏಕೆಂದರೆ ಈ ರಾಷ್ಟ್ರಗಳಲ್ಲಿ ಸಲಿಂಗಕಾಮ ವಿಶೇಷವಾಗಿಲ್ಲ. ಸಲಿಂಗ, ದ್ವಿಲಿಂಗ ಕಾಮಿಗಳಲ್ಲಿ ಇದು ಬರುವ ಸಂಭವ ಶೇಕಡಾ ೭೨ರಷ್ಟು.
* ದಿಲ್ಲಿಯಲ್ಲಿ ನಡೆದ ಒಂದು ಸಮೀಕ್ಷೆಯ ಪ್ರಕಾರ ನಮ್ಮ ದೇಶದಲ್ಲಿ ೩೬,೦೦೦ ಮಾದಕ ವ್ಯಸನಿಗಳು ಇದ್ದಾರೆಂದೂ ಅವರಲ್ಲಿ ಶೇಕಡಾ ೪೭ ಜನರಿಗೆ ಏಡ್ಸ್ ತಗಲಿದೆ ಎಂದೂ ತಿಳಿದುಬಂದಿದೆ.
* ಒಮ್ಮೆ ಏಡ್ಸ್ ರೋಗಿ ಎಂದು ಗೊತ್ತಾದರೆ ಕುಟುಂಬದ ಜನ, ಸ್ನೇಹಿತರು ಆಪ್ತೇಷ್ಟರೆಲ್ಲ ಇವರಿಂದ ದೂರವಾಗುತ್ತಾರೆ. ಸಮಾಜ ಬಹಿಷ್ಕರಿಸುತ್ತದೆಲ. ಅನೇಕ ವೇಳೆ ವೈದ್ಯರೂ ಚಿಕಿತ್ಸಿಸಲು ಹಿಂಜರಿಯುತ್ತಾರೆ. ಹೀಗಾಗಿ ರೋಗಿ ಮಾನಸಿಕವಾಗಿ ಹತಾಶನಾಗುವನು. ಆದ್ದರಿಂದ ಈ ರೋಗಿಗೆ ಒಳ್ಳೆ ಆಹಾರ, ಚಿಕಿತ್ಸೆಗಳೊಡನೆ ಎಲ್ಲರ ಸಹಾನುಭೂತಿ ಬೇಕು.

೭. ತಮ್ಮ ಪತ್ನಿಯಿಂದ ದೂರವಿದ್ದು ಕೆಲಸದ ಮೇಲೆ ವಲಸೆ ಹೋದವರು, ವೇಶ್ಯಯರ ಸಂಪರ್ಕಮಾಡಿ ಬಂದು ತಮ್ಮ ಹೆಂಡತಿಯೊಂದಿಗೆ ರಮಿಸಿದಾಗ ಈ ರೋಗ ಅಂಟುವುದು.

೮. ಯಾವ ನಿರ್ಬಂಧವೂ ಇಲ್ಲದೆ ಯಾರು ಯಾರೊಡನೆ ಬೇಕಾದರೂ ಸ್ವೇಚ್ಛೆಯಿಂದ ಲೈಂಗಿಕ ಸಂಬಂಧ ಮಾಡುತ್ತಲಿದ್ದರೆ.

೯. ಕೇಶಕರ್ತನಾಲಯಗಳಲ್ಲಿ ಒಬ್ಬರಿಗೆ ಉಪಯೋಗಿಸಿದ ಬ್ಲೇಡು ಇಲ್ಲವೆ ಕತ್ತಿಯನ್ನು ಸರಿಯಾಗಿ ಶುದ್ಧಗೊಳಿಸದೆ ಉಪಯೋಗಿಸುವುದರಿಂದ ನೂರಾರು ಜನರಿಗೆ ಏಡ್ಸ್ ಹಬ್ಬುವ ಅಪಾಯವಿದೆ.

೧೦. ಚಿಕಿತ್ಸಾಲಯ, ಆಸ್ಪತ್ರೆಗಳಲ್ಲಿ ಏಡ್ಸ್ ರೋಗವಿದೆಯೆಂದು ಇನ್ನೂ ಗುರುತಿಸಲ್ಪಡದವರ ಸಣ್ಣ-ಪುಟ್ಟ ಗಾಯಗಳಿಂದ ಹೊರಬರುವ ರಕ್ತದ ಸಂಪರ್ಕ ಆಕಸ್ಮಿಕವಾಗಿ ಆದರೆ.

೧೧. ಫ್ರೆಂಚ್ ಪದ್ಧತಿಯ ಆಳವಾದ ಚುಂಬನದಿಂದ.

೧೨. ಅವಿವಾಹಿತ ಸ್ತ್ರೀ, ವಿಧವೆ, ಲೈಂಗಿಕ ದಾಹ ಹೆಚ್ಚಿಗಿದ್ದವರು, ಪತಿಯಿಂದ ದೂರವಿರುವವರು ಏಡ್ಸ್ ಬಾಧೆಗೊಳಗಾಗಿದ್ದರೆ ಅದು ಇತರರಿಗೂ ಹರಡಲು ಶಕ್ತವಾಗುವದು.

**ರೋಗ ಸಾಂಕರ್ಯ ಕಾಲ:** ಹೆಚ್.ಐ.ವಿ. ವೈರಸ್ಸುಗಳು ವ್ಯಕ್ತಿಯ ದೇಹ ಪ್ರವೇಶಿಸಿದ ನಂತರ ಆರು ತಿಂಗಳುಗಳಿಂದ ಏಳು ವರ್ಷಗಳ ವೇಳೆಯನ್ನು ರೋಗವ್ಯಕ್ತಗೊಳಿಸಲು ತೆಗೆದುಕೊಳ್ಳುವವು. ಕೆಲ ಸಂದರ್ಭಗಳಲ್ಲಿ ಅದು ಹತ್ತು ವರ್ಷಗಳವರೆಗೂ ವಿಸ್ತರಿಸಿದ ಉದಾಹರಣೆಗಳಿವೆ. ಆದರೆ ರೋಗ ನಿರೋಧಕ ಶಕ್ತಿ ಕಡಿಮೆ ಇರುವ ಮಕ್ಕಳಲ್ಲಿ ೧೨ ತಿಂಗಳುಗಳಾದರೆ ದೊಡ್ಡವರಲ್ಲಿ ೨೯ ತಿಂಗಳುಗಳ ನಂತರ ರೋಗ ಲಕ್ಷಣಗಳು ವ್ಯಕ್ತವಾಗುವವೆಂದು ಸಮೀಕ್ಷೆಯ ಪ್ರಕಾರ ಕಂಡುಬಂದಿದೆ.

**ಪ್ರಯೋಗಾಲಯ ತಪಾಸಣೆ:** ಏಡ್ಸ್ ಬಂದಿದೆಯೆಂದು ಸಂಶಯಿಸಲ್ಪಟ್ಟ ವ್ಯಕ್ತಿಯ ರಕ್ತದ ಪ್ರಾಥಮಿಕ ಪರೀಕ್ಷೆಯನ್ನು ಎಲಿಸಾ ವಿಧಾನದಿಂದ ಮಾಡಿ ರೋಗದ ಪತ್ತೆ ಹಚ್ಚಬಹುದು. ಆದರೆ ಇದು ಸಂಪೂರ್ಣ ನಂಬಲರ್ಹವಾದ ವಿಧಾನವಲ್ಲ. ಹೀಗೆ ಸಂಶಯಿತ ರೋಗಿಗಳ ಪರೀಕ್ಷೆಯನ್ನು ವೆಸ್ಟರ್ನ್ ಬ್ಲಾಟ್ ಪರೀಕ್ಷೆಗೊಳಪಡಿಸಿ ನಿರ್ಧರಿಸಬೇಕಾಗುತ್ತದೆ.

## ಏಡ್ಸ್ ರೋಗದ ಹಂತಗಳು

**ಮೊದಲಹಂತ-** ಈ ಹಂತವು ಕೆಲವು ತಿಂಗಳು ಇಲ್ಲವೆ ಕೆಲವು ವರ್ಷಗಳವರೆಗೆ ಇರಬಹುದು. ಈ ಹಂತದಲ್ಲಿ ಯಾವುದೇ ಲಕ್ಷಣಗಳು ತೋರಿ ಬರಲಿಕ್ಕಿಲ್ಲ. ಇಲ್ಲವೆ ಅಲ್ಲಲ್ಲಿ ರಸಗ್ರಂಥಿಗಳ ಊತವು ಕುತ್ತಿಗೆ, ಬಗಲು, ಗೆಜ್ಜೆ ಭಾಗಗಳಲ್ಲಿ ಕಾಣಿಸಿಕೊಳ್ಳಬಹುದು.

**ಎರಡನೆ ಹಂತ-** ಅನೇಕ ಜನರಲ್ಲಿ ರೋಗ ಲಕ್ಷಣಗಳು ಕೆಲ ವರ್ಷಗಳಾದರೂ ಏನೂ ಕಾಣಿಸಲಿಕ್ಕಿಲ್ಲ, ಕೆಲವರಲ್ಲಿ ರಸಗ್ರಂಥಿಗಳು ಊದಿಕೊಳ್ಳಬಹುದು. ಹೆಚ್.ಐ.ವಿ. ಸಾಂಕರ್ಯದಿಂದ ವ್ಯಕ್ತಿಯ ರೋಗನಿರೋಧಕ ಶಕ್ತಿಯು ಕುಂಠಿತವಾಗಿ ತತ್ಪರಿಣಾಮವಾಗಿ ಈ ಕೆಳಕಂಡ ಲಕ್ಷಣಗಳು ಕಾಣಿಸಿಕೊಳ್ಳುವವು.

I) ಯಾವುದೆ ಬಲವತ್ತರವಾದ ಕಾರಣಗಳಿಲ್ಲದೆ ದೇಹದ ತೂಕವು ಸುಮಾರು ಶೇಕಡಾ ಹತ್ತರಷ್ಟು ಕಡಿಮೆಯಾಗುವುದು.

II) ಕಾರಣ ಗೊತ್ತಾಗದೆ ಒಂದು ತಿಂಗಳಾದರೂ ಕಡಿಮೆಯಾಗದ ಜ್ವರ.

III) ಇಂಥ ಕಾರಣದಿಂದಲೇ ಎಂದು ಹೇಳಲಾಗದ, ಚಿಕಿತ್ಸೆಗೂ ನಿಲ್ಲದ ಭೇದಿ.

*IV)* ಕ್ಯಾಂಡಿಡಾ ಆಲ್ಬಿಕಾನ್ಸ ಫಂಗಸ್ ಕ್ರಿಮಿಗಳ ಸಾಂಕರ್ಯದಿಂದಾಗುವ ಮುಖಪಾಕ. ಇದರಲ್ಲಿ ಬಾಯಿತುಂಬ ಹಾಗೂ ನಾಲಿಗೆಯ ಹಿಂಭಾಗಕ್ಕೆ ದಪ್ಪವಾದ ಪೊರೆ ಕಾಣಿಸಿಕೊಳ್ಳುವುದು.

*V)* ಬಾಯಿ, ಮುಖ, ಚರ್ಮ ಹಾಗೂ ಕುತ್ತಿಗೆಯ ಹಿಂಭಾಗದಲ್ಲಿ ಕಾಣಿಸಿಕೊಳ್ಳುವ ತುಂಬ ನೋವುಳ್ಳ ವಿಸರ್ಪ (ಸರ್ಪಹುಣ್ಣು) ಇದರಲ್ಲಿ ಕಲೆಗಳು ಕೂಡ ಬೀಳುವವು.

*VI)* ಕೂದಲೆಳೆಯಂತೆ ಬಿಳಿಯಾಗಿ ಕಂಡುಬರುವ ಲ್ಯೂಕೋಪ್ಲೇನಿಯಾ. ಇದು ನಾಲಿಗೆಯ ಮೇಲೆ ಕಂಡು ಬರುವುದು.

*VII)* ಮೂರು ತಿಂಗಳುಗಳಿಗೂ ಹೆಚ್ಚು ಅವಧಿಯವರೆಗೆ ಕಂಕುಳ, ಕುತ್ತಿಗೆ, ಗೆಜ್ಜೆ ಪ್ರದೇಶಗಳಲ್ಲಿ ಕಂಡುಬರುವ ರಸಗ್ರಂಥಿಗಳ ಬಾವು.

ಈ ಮೇಲ್ಕಂಡ ಲಕ್ಷಣಗಳು ಬೇರೆ ರೋಗಗಳಲ್ಲಿಯೂ ಇರಬಹುದು. ಆದ್ದರಿಂದ ಪರೀಕ್ಷೆಯ ಮೂಲಕ ಖಚಿತಪಡಿಸಿಕೊಳ್ಳುವುದು.

**೩ನೇ ಹಂತ:** ಈ ಹಂತದಲ್ಲಿ ರೋಗಿಗೆ ಅರ್ಬುದರೋಗ ಕ್ಯಾನ್ಸರ್ *(Koposi's sarcoma)*, ಬಾಯಿ ಹುಣ್ಣು, ಪುಪ್ಪುಸ ಕ್ಷಯಗಳು ಕಾಣಿಸಿಕೊಳ್ಳುವವು. ನಮ್ಮ ದೇಶದಲ್ಲಿ ಕ್ಷಯ ವಿಕಾರ ಅಂಟಿಕೊಳ್ಳುವುದರಿಂದಲೇ ಅನೇಕ ಏಡ್ಸ್‌ರೋಗಿಗಳು ಬೇಗ ಸಾವನ್ನಪ್ಪುವರು. ಈ ಸ್ಥಿತಿಯಲ್ಲಿ ಕಡಿಮೆಯಾಗದ ಜ್ವರ, ಭೇದಿ ಹಾಗೂ ತೂಕದ ಇಳಿತಗಳು ಮುಂದುವರಿಯುವವು.

**೪ನೇ ಹಂತ:** ಈ ಹಂತದಲ್ಲಿ ರೋಗಿಯ ಒಲವು ಇನ್ನಷ್ಟು ಕಡಿಮೆ ಆಗುವುದರಿಂದ ಸಾಂಕರ್ಯರೋಗಗಳ ಪ್ರಾಬಲ್ಯ ಹೆಚ್ಚುವುದು. ಪುಪ್ಪುಸಬಾವು, ಬಾಯಿಹುಣ್ಣು, ರಸಗ್ರಂಥಿಗಳಲ್ಲಾದ ಗಂಟುಗಳು ಹೆಚ್ಚುತ್ತ ಹೋಗುವವು. ಬಹುಶಃ ಏಡ್ಸ್‌ರೋಗಿ ಈ ಹಂತದಲ್ಲಿ ಸಾವನ್ನಪ್ಪುವನು.

ಏಡ್ಸ್‌ರೋಗ ನರಮಂಡಲಕ್ಕೂ ಪಸರಿಸಿ ಸ್ಮರಣ ಶಕ್ತಿಯನ್ನು ಕುಂದಿಸುವುದು. ಚಿತ್ತವೈಕಲ್ಯದ ಲಕ್ಷಣ ಕೂಡ ೧/೩ ರೋಗಿಗಳಲ್ಲಿ ಕಾಣಿಸಿಕೊಳ್ಳುವುದು. ಮೆದುಳಿನ ಬಾವು ಕೂಡ ಅನೇಕ ರೋಗಿಗಳಲ್ಲಿ ಕಂಡುಬರುವುದು. ನೇತ್ರ ಪಟಲದ ಬಾವು, ಮಕ್ಕಳಲ್ಲಿ ಪ್ಲೀಹವೃದ್ಧಿ, ಹೃದ್ರೋಗ, ತೀವ್ರಸ್ವರೂಪದ ಬಾವು ಹೀಗೆ ಇತರ ಲಕ್ಷಣಗಳೂ ತೋರಿ ಬರುವವು.

### ಆಯುರ್ವೇದದ ಪ್ರಕಾರ

ಅತಿ ಸ್ತ್ರೀ ಸಂಭೋಗದಿಂದ ಕಂಡುಬರುವ ವ್ಯವಾಯಿಯ ಶೋಷದ ಬಹುತೇಕ ಲಕ್ಷಣಗಳು ಈ ಏಡ್ಸ್ ಲಕ್ಷಣಗಳಿಗೆ ಸರಿಹೊಂದುವವು. ಅತಿಯಾದ ಸಂಭೋಗದಿಂದ ಮೊದಲು ಶುಕ್ರಧಾತು ಕ್ಷೀಣವಾಗಿ ಅಲ್ಲಿ ವಾತದೋಷ ಬೆಳೆದು, ಪ್ರಕೋಪವಾಗಿ, ಇನ್ನಿತರ ಮೇಲಿನಿಂದ ಕೆಳಗಿನ ಧಾತುಗಳನ್ನು ಕ್ಷೀಣಿಸುತ್ತ ಬರುವುದು. ಇದನ್ನೇ ಆಯುರ್ವೇದ ಪಂಡಿತರು ಪ್ರತಿಲೋಮಕ್ಷಯ ವೆಂದೂ ಕರೆದಿದ್ದಾರೆ. ಇಲ್ಲಿ ಕ್ಷಯ ರೋಗವೆಂದರೆ ಕ್ಷೀಣಿಸುವುದು, ಶೋಷ ಎಂದರ್ಥ ಮಾಡಬೇಕು. ದೇಹ ಧಾರಣೆಗೆ ಕಾರಣವಾಗುವ ಈ ರಸ, ರಕ್ತ, ಮಾಂಸ, ಅಸ್ಥಿ, ಮಜ್ಜಾ, ಮೇದಸ್ಸು, ಶುಕ್ರ ಧಾತುಗಳು ಕ್ಷೀಣಗೊಂಡರೆ ದೇಹದಲ್ಲಿ ದೌರ್ಬಲ್ಯವುಂಟಾಗಿ ರೋಗನಿರೋಧಕ ಶಕ್ತಿ ಕುಂದುತ್ತ ಹೋಗುವುದು. ಇದರಿಂದ ರೋಗಿ ನೆಗಡಿ, ಕೆಮ್ಮು, ಜ್ವರ, ಭೇದಿಯಂತಹ ಸಣ್ಣ-ಪುಟ್ಟ ಸಾಂಕರ್ಯ ರೋಗಗಳನ್ನೂ ಎದುರಿಸಲಾರದೆ ಹೋಗುವನು. ಅವು ಚಿಕಿತ್ಸೆಗೆ ಬಗ್ಗದೆ ಎಳೆಯುತ್ತ ಹೋಗಿ ಇನ್ನಿತರ ಉಪದ್ರವಗಳಿಗೆ ದಾರಿಮಾಡಿಕೊಡುವವು. ಹೀಗಾದಾಗ ರೋಗಗಳ ರಾಜನೆಂದು ಆಯುರ್ವೇದದಲ್ಲಿ ವರ್ಣಿತವಾದ ರಾಜಯಕ್ಷ್ಮ (ಪುಪ್ಪುಸ ಕ್ಷಯ)ವೂ ಬಾಧಿಸುವುದು.

ಶುಕ್ರಧಾತು ಆಹಾರರಸದಿಂದ, ಉತ್ಪನ್ನವಾದ ಸಪ್ತಧಾತುಗಳ ಪರಿಪಾಕಸ್ವರೂಪವಾಗಿರುವ ಕೊನೆಧಾತುವಾಗಿದೆ. ಅದು ಕ್ಷಯಿಸಿದರೆ ಶುಕ್ರಜನ್ಯವಾದ, ಜೀವನಕ್ಕೆ ಆಧಾರವಾದ ಓಜಸ್ಸು ಕ್ಷಯಿಸುವುದು. ಓಜಸ್ಸಿನ ಕ್ಷಯವನ್ನು ಶಾಸ್ತ್ರದಲ್ಲಿ 'ಯನ್ನಾಶೇ ನಿಯತಂ ನಾಶಃ' ಎಂದರೆ ಅದರ ನಾಶದಿಂದ ಜೀವನವೇ ನಾಶವಾಗುವುದು ಎನ್ನಲಾಗಿದೆ. ಅಲ್ಲದೆ ಶುಕ್ರವು ಕ್ಷಯಿಸುತ್ತ ಹೋದಂತೆ ಅದು ವಿಲೋಮಗತಿಯಿಂದ ತನ್ನ ಪುಷ್ಟಿಗಾಗಿ ಹಿಂದುಹಿಂದಿನ ಧಾತುಗಳನ್ನು ಕ್ಷಯಿಸಿ ಮರಣವನ್ನುಂಟುಮಾಡುವುದು ಎಂದು ಚರಕ ಹೇಳಿದ್ದಾನೆ.

ಏಡ್ಸ್‌ರೋಗತ್ತೂ ಈ ಶೋಷರೋಗತ್ತೂ ಹೋಲಿಕೆ ಮಾಡುವಾಗ ಇಲ್ಲಿ ಒಂದು ಸಂದೇಹ ಬರುವುದು ಸ್ವಾಭಾವಿಕ. ಏಡ್ಸ್ ರೋಗ ವೈರಸ್ಸುಗಳ ಸಾಂಕರ್ಯದಿಂದ ಬರುವಂಥಾದ್ದು. ಆದರೆ ಈ ಶೋಷವು ಅತಿ ವ್ಯವಾಯದಿಂದ, ಶುಕ್ರಧಾತು-ಓಜಸ್ಸುಗಳ ಕ್ಷೀಣತೆಯಿಂದ ಬರುವುದು. ಹೀಗೆ ಇಲ್ಲಿ ಕ್ರಿಮಿಸಾಂಕರ್ಯದ ಸಾಧ್ಯತೆ ಇಲ್ಲವಲ್ಲ ಎಂಬುದು. ಆದರೆ ಅತಿ ವ್ಯವಾಯಿ ಅಭಿಲಾಷೆಯ ಪುರುಷ ತನ್ನ ಪತ್ನಿಯನ್ನಲ್ಲದೆ ಬೇರೆ ಸ್ತ್ರೀಯರನ್ನು ಇದಕ್ಕಾಗಿ ಆಶ್ರಯಿಸುವ ಸಾಧ್ಯತೆಗಳಿವೆ. ವಿಕೃತಕಾಮಿಯಾದ ಪುರುಷನು ಯೋನಿಯಲ್ಲದೆ ಗುದ, ಬಾಯಿ, ಮುಷ್ಟಿ ಭಾಗಗಳಲ್ಲೂ ಸಂಭೋಗಸುಖ ಪಡೆಯುವನು.

ರಜಸ್ವಲೆಯಾದ, ಅಸ್ವಚ್ಛಳಾದ ಸ್ತ್ರೀಯೊಡನೆ ಲೈಂಗಿಕ ಕ್ರಿಯೆ ಮಾಡಬಾರದು ಎಂದು ಶಾಸ್ತ್ರದಲ್ಲಿ ಹೇಳಲಾಗಿದೆ. ಅದರಂತೆ ರೋಗಿಷ್ಠಳಾದ (ಗುಹ್ಯರೋಗಗಳಿದ್ದ) ಸ್ತ್ರೀಯೊಡನೆ ಸಂಭೋಗಿಸಬಾರದೆಂದು ಆಯುರ್ವೇದ ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಯಾವುದೇ ಚತುಷ್ಪಾದ ಪ್ರಾಣಿಗಳೊಡನೆಯೂ ಸಂಭೋಗ ಮಾಡಬಾರದು ಎನ್ನಲಾಗಿದೆ. ಮಾನವ ತನ್ನ ಕ್ಷಣಿಕ ಸುಖಕ್ಕಾಗಿ ಶಾಸ್ತ್ರದಲ್ಲಿ ಹೇಳಿದ ಆರೋಗ್ಯ ನಿಯಮಗಳನ್ನು ಬದಿಗೊತ್ತಿದರೆ ಇದರ ಪರಿಣಾಮವಾಗಿ ಅವನಿಗೆ ಗುಹ್ಯರೋಗಗಳು ಅಂಟಿಕೊಳ್ಳುತ್ತವೆ. ಅಂತೆಯೇ ಏಡ್ಸ್ ಕೂಡ. ಆಗ ಅವರಿಗೆ ಈ ರೋಗಗಳು ಯಾವ ಮಾಧ್ಯಮಗಳಿಂದ (ರೋಗಕಾರಕ ಸೂಕ್ಷ್ಮ ಕ್ರಿಮಿಗಳು-ವೈರಸ್ಸುಗಳು) ಹರಡುತ್ತವೆ ಎಂಬುದು ಸ್ಥೂಲವಾಗಿ ತಿಳಿದಿತ್ತು. ಈ ಕ್ರಿಮಿಗಳಲ್ಲಿ ನಾಲ್ಕು ವಿಭಾಗ ಮಾಡಿ ಪುರೀಷಜ, ಶ್ಲೇಷ್ಮಜ, ರಕ್ತಜ ಹಾಗೂ ಮಲಜ ಕ್ರಿಮಿಗಳು ಇರುವವು ಎಂದಿದ್ದಾರೆ. ಆದರೆ ಅತಿ ಸೂಕ್ಷ್ಮ ಕ್ರಿಮಿಗಳ ಬಗ್ಗೆ ಆಗ ಸಾಧನಗಳಿಲ್ಲದ್ದರಿಂದ ಅವರಿಗೆ ಗೊತ್ತಿರಲಿಲ್ಲ. ರೋಗಿಯನ್ನು ಪ್ರತ್ಯಕ್ಷ ನೋಡಿಯಲ್ಲದೆ ಅನುಮಾನ, ಆಪ್ತೋಪದೇಶ ಹಾಗೂ ಯುಕ್ತಿಗಳಿಂದ ರೋಗನಿದಾನ ಮಾಡುತ್ತಿದ್ದರು. ರೋಗಕ್ಕೆ ತಕ್ಕ ಹಾಗೆ ಚಿಕಿತ್ಸೆ ಮಾಡಿ ರೋಗಿಯನ್ನು ಗುಣಪಡಿಸುತ್ತಿದ್ದರು.

ಏಡ್ಸ್‌ರೋಗ ಪ್ರಾರಂಭಿಕ ಹಂತದಲ್ಲಿ ಕೆಲ ವರ್ಷಗಳವರೆಗೆ ಗೊತ್ತಾಗದೆ ಹೋಗುವುದು ಎನ್ನುವುದನ್ನು ಈಗಾಗಲೇ ಹೇಳಿದ್ದೇವೆ. ಆ ಅವಧಿಯಲ್ಲಿ ರೋಗದ ಬೆಳವಣಿಗೆ ಅಗೋಚರವಾಗಿ ದೇಹದಲ್ಲಿ ಆಗುತ್ತಲೇ ಇರುವುದು. ಅದರಂತೆ ಶೋಷರೋಗವೂ ಒಮ್ಮೆಲೇ ಪ್ರಾರಂಭವಾಗುವುದಿಲ್ಲ. ಆಯುರ್ವೇದದ ಪ್ರಕಾರ ತ್ರಿದೋಷಗಳ ಅಸಮಾನತೆ ಹಾಗೂ ಸ್ರೋತೋದುಷ್ಟಿಗಳುಂಟಾಗಿ ರೋಗ ಹುಟ್ಟುವುದು. ಇದರಿಂದ ರೋಗ ಪ್ರತಿರೋಧಕ ಶಕ್ತಿ ಕಡಿಮೆಯಾಗುತ್ತ ಹೋಗುವುದು. ಇದರಲ್ಲಿ ಉಂಟಾಗುವ ವಾತಪ್ರಕೋಪದಿಂದ ಟಿ-೪ ಬಿಳಿ ರಕ್ತಕಣಗಳು ವಿಚ್ಛಿನ್ನಗೊಳ್ಳುವವು ಹಾಗೂ ಅದರಿಂದ ಹೊರಬರುವ ರಸದಿಂದ ಸ್ರೋತೋರೋಧ (*Obstruction*) ಉಂಟಾಗುವುದು. ದೋಷಗಳ ಅಸಮತೋಲನದಿಂದ ಅಗ್ನಿದುಷ್ಟಿ ಹಾಗೂ ಓಜಕ್ಷಯಗಳುಂಟಾ

ಗುವವು. ಸ್ರೋತೋರೋಧದಿಂದಲೇ ವಾತವು ಮತ್ತೆ ಪಿತ್ತಶ್ಲೇಷ್ಮಗಳು ದೇಹವನ್ನು ಒಣಗಿಸುವುದು.

ಕ್ಷಯರೋಗ (ಶೋಷ) ಪ್ರಾರಂಭವಾಗುವ ಮೊದಲು ಸ್ವಲ್ಪ ಶ್ರಮಪಟ್ಟರೂ ಆಯಾಸ, ಪಕ್ಕೆ ನೋವು, ಕಫವನ್ನು ಕೆಕರಿಸುತ್ತಿರುವಿಕೆ, ಗಂಟಲು ಒಣಗುವುದು, ವಾಂತಿ, ಅಗ್ನಿಮಾಂದ್ಯ, ನೆಗಡಿ, ಅತಿ ನಿದ್ರೆ, ರಕ್ತಹೀನತೆಯಿಂದ ಕಣ್ಣುಗಳು ಬಿಳಿಚಿಕೊಳ್ಳುವುದು, ಮಾಂಸ ತಿನ್ನುವ ಇಚ್ಛೆ ಹಾಗೂ ವ್ಯವಾಯದಲ್ಲಿ ಆಸಕ್ತಿ ಈ ಲಕ್ಷಣಗಳು ಕಂಡುಬರುವವು.

ಸ್ವರಭೇದ, ಬಾಹು, ಪಕ್ಕೆಗಳಲ್ಲಿ ನೋವು ಹಾಗೂ ಸೆಳೆತ, ಜ್ವರ, ದಾಹ, ಅತಿಸಾರ, ರಕ್ತಷ್ಠೀವನ, ತಲೆಭಾರ, ಆಹಾರ ರುಚಿಸದಿರುವುದು, ಕೆಮ್ಮು, ಗಂಟಲಿನಲ್ಲಿ ಕೆರೆತದ ಲಕ್ಷಣಗಳು ಪೂರ್ಣ ಪ್ರಮಾಣದಲ್ಲಿ ರೋಗ ವ್ಯಕ್ತವಾದಾಗ ಕಂಡುಬರುವವು.

ರೋಗವು ಆದೇ ಆಗ ಪ್ರಾರಂಭವಾಗಿದ್ದು ರೋಗಲಕ್ಷಣಗಳು ಅಲ್ಪವಿದ್ದು, ರೋಗಿಯ ಪಚನಕ್ರಿಯೆ ಚೆನ್ನಾಗಿದ್ದರೆ ಮತ್ತು ರೋಗಿ ಬಲಯುತನಾಗಿದ್ದರೆ ಚಿಕಿತ್ಸೆ ಬೇಗನೆ ಫಲಪ್ರದವಾಗುವುದು.

ರೋಗ ಬಂದ ಒಂದು ವರ್ಷದ ಬಳಿಕ ರೋಗವು ಯಾಪ್ಯ (Chronic)ವಾಗುವುದು. ಆಗ ರೋಗದ ಎಲ್ಲ ಲಕ್ಷಣಗಳು ಪೂರ್ಣವಾಗಿ ಕಂಡುಬಂದರೆ ಗುಣವಾಗುವುದು ಅಸಾಧ್ಯವೆಂದು ಚರಕ ಹೇಳಿದ್ದಾನೆ. ಅದರಂತೆ ಸರಿಯಾಗಿ ಊಟಮಾಡಿದರೂ ನಿರಂತರ ಅಶಕ್ತನಾಗಿದ್ದು ಅತಿಸಾರ ಪೀಡಿತನಾದ ಹಾಗೂ ಅಂಡಾಶಯದಲ್ಲಿ ಅಥವಾ ಹೊಟ್ಟೆಯಲ್ಲಿ ಬಾವು ಇದ್ದರೆ ರೋಗಿಗೆ ಚಿಕಿತ್ಸೆ ಉಪಯುಕ್ತವಾಗುವುದಿಲ್ಲ ಎನ್ನಲಾಗಿದೆ. ರಕ್ತಹೀನತೆಯಿಂದ ಬಳಲುವ, ಅನ್ನಸೇರದ, ಸ್ವಲ್ಪ ಓಡಾಡಿದರೂ ಏದುಸಿರು ಬಿಡುವ, ಅತಿ ತೊಂದರೆಯಿಂದ ಸ್ವಲ್ಪ ಮಾತ್ರ ಮೂತ್ರ ವಿಸರ್ಜಿಸುವ ಶೋಷ ರೋಗಿ ಬದುಕುವುದಿಲ್ಲ.

ಈ ಮೇಲ್ಕಂಡ ಮಾತುಗಳಿಂದ ವ್ಯಕ್ತವಾಗುವುದೇನೆಂದರೆ ಹೊಸದಾಗಿರುವ, ಬಲ ಹಾಗೂ ಮಾಂಸಕ್ಷೀಣತೆಗಳುಂಟಾಗದ ಶೋಷರೋಗಿಗಳನ್ನು ಮಾತ್ರ ಚಿಕಿತ್ಸೆಗೆ ತೆಗೆದುಕೊಳ್ಳಬೇಕು. ಅಂಥವರು ಮಾತ್ರ ಗುಣವಾಗುವುದು ಸಾಧ್ಯ ಎಂಬುದು.

**ಓಜೋ ಕ್ಷೀಣತೆ:** ಇದರಂತೆ ಓಜೋಕ್ಷೀಣತೆಗಳನ್ನು ಕೂಡ ಮೂರು ಹಂತಗಳಲ್ಲಿ ವಿಂಗಡಿಸಲಾಗಿದೆ. (ಸುಶ್ರುತ ಸೂತ್ರಸ್ಥಾನ ೧೫-೨೪)

೧. ವಿಸ್ರಂಸ- ಸಂಧಿ ಶಿಥಿಲತೆ, ಸರ್ವಾಂಗಸಾದ, ದೋಷಗಳ ಸ್ಥಾನಚ್ಯುತಿ, ತ್ರಿಕರಣ ಪೂರ್ವಕ ಮಾಡುವ ಸ್ವಾಭಾವಿಕ ಕಾರ್ಯಗಳು ಕಡಿಮೆಯಾಗುವುದು ಅಥವಾ ಅವುಗಳಲ್ಲಿ ಬಲಹೀನತೆ ಕಂಡುಬರುವುದು.

೨. ವ್ಯಾಪನ್ನ- ಕ್ರಿಯಾಹಾನಿ, ಗಾತ್ರಗೌರವ, ವಾತಿಕ ಶೋಷ, ವಿವರ್ಣತೆ, ಗ್ಲಾನಿ ಹಾಗೂ ತಂದ್ರಾ (ಅರೆ ನಿದ್ರಾವಸ್ಥೆ)

೩. ಕ್ಷಯ- ಮೂರ್ಛೆ, ಮಾಂಸಕ್ಷಯ, ಮೋಹ, ಪ್ರಲಾಪ ಕೊನೆಯದಾಗಿ ಮೃತ್ಯು.

ರೋಗಚಿಕಿತ್ಸೆಗಾಗಿ ಎಚ್.ಐ.ವಿ. ಸಾಂಕರ್ಯವಾದ, ಆದರೆ ಪೂರ್ಣಪ್ರಮಾಣದಲ್ಲಿ ಏಡ್ಸ್‌ರೋಗ ಲಕ್ಷಣಗಳು ಬೆಳೆಯದ, ಯುವಕನಾದ ಹಾಗೂ ಬಲಿಷ್ಠನಾದ ರೋಗಿಯನ್ನು ಮಾತ್ರ ಚಿಕಿತ್ಸೆಗೆ ಆರಿಸಿಕೊಳ್ಳಬೇಕು.

೧. ರೋಗಿಗೆ ಸಂಪೂರ್ಣ ವಿಶ್ರಾಂತಿ ಅವಶ್ಯ.

೨. ನಿತ್ಯ ಸತ್ವಪೂರ್ಣವಾದ ಹಗುರ ಆಹಾರ, ತೈಲಾಭ್ಯಂಗ, ಘೃತಸೇವನೆ, ಮಾಂಸರಸ ಸೇವನೆ ಅಗತ್ಯ. ಕುಡಿಯಲು ನಿತ್ಯ ಆಡಿನಹಾಲು ಕೊಡಬೇಕು.

೩. ಈ ರೋಗಕ್ಕೆ ಆಧುನಿಕ ವೈದ್ಯಕೀಯದಲ್ಲೂ ನಿರ್ದಿಷ್ಟವಾದ ಚಿಕಿತ್ಸೆ ಇಲ್ಲ. ಝಿಡೋವುಡಿನ್ ಎಂಬ ರಾಸಾಯನಿಕ ಔಷಧಿಯು ರೋಗದ ತೊಂದರೆಗಳನ್ನು ಕಡಿಮೆಮಾಡಿ ಜೀವನವನ್ನು ಮುಂದುವರಿಸಲು ಶಕ್ತವಾಗಿದೆ. ಆದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಇದರ ದುಷ್ಪರಿಣಾಮಗಳು ಹಾಗೂ ಜನಸಾಮಾನ್ಯರಿಗೆ ಎಟುಕದ ಬೆಲೆ. ಇದೇ ಕೆಲಸವನ್ನು ಆಯುರ್ವೇದ ಔಷಧಿಗಳು ಕಡಿಮೆಬೆಲೆಯಲ್ಲಿ ಹಾಗೂ ದುಷ್ಪರಿಣಾಮಗಳಿಲ್ಲದೆ ಮಾಡುವವು. ಅಲ್ಲದೆ ಸುಲಭವಾಗಿಯೂ ದೊರೆಯುವವು.

೪. ರೋಗಿಯ ಬಲವನ್ನು ರಕ್ಷಿಸಬೇಕು ಹಾಗೂ ಅವನ ರೋಗನಿರೋಧಕ ಶಕ್ತಿಯು ತೀರ ಅಲ್ಪವಿರುವುದರಿಂದ ತಗಲಬಹುದಾದ ನೆಗಡಿ, ಫ್ಲೂಜ್ವರ, ನ್ಯುಮೋನಿಯ, ಕ್ಷಯ ಮುಂತಾದ ರೋಗಗಳಿಂದ ರಕ್ಷಿಸಬೇಕು.

೫. ಈ ರೋಗವು ಚಿಕಿತ್ಸೆಗೆ ಅಸಾಧ್ಯವೆನಿಸಿದುದರಿಂದ ಶಾಸ್ತ್ರದಲ್ಲಿ ಅಸಾಧ್ಯ ರೋಗಗಳಿಗೆ ಹೇಳಿದ ರಸಾಯನ ಚಿಕಿತ್ಸೆಯನ್ನು ನೀಡಬೇಕಾಗುವುದು.

೬. ರೋಗದ ಆರಂಭಿಕ ಅವಸ್ಥೆಯಲ್ಲಿ ರೋಗಿಯು ಬಲಿಷ್ಠನಾಗಿರುವುದರಿಂದ ಮುಂದಿನ ರಸಾಯನಗಳ ಪ್ರಯೋಗಕ್ಕಾಗಿ ಅಣಿಗೊಳಿಸಲು ಸ್ನೇಹನ, ಸ್ವೇದನ ಕ್ರಿಯೆಗಳನ್ನು ಮೊದಲು ಮಾಡಿಸಬೇಕು. ಇದರಿಂದ ವಾತದೋಷವು ಶಾಂತವಾಗಿ ಮೈ ಒಣಗಿಸುವುದನ್ನು ನಿಲ್ಲಿಸುವದು. ಈ ರೋಗಗಳಲ್ಲಿ ವಾಂತಿಕ್ರಿಯೆಯನ್ನು ಯಾವ ಕಾಟಕ್ಕೂ ಮಾಡಿಸಬಾರದು. ಮೃದುವಿರೇಚನ, ಶೋಧನಬಸ್ತಿ, ಬೃಂಹಣ ಬಸ್ತಿ ಕೊಡುವುದರಿಂದ ದೋಷಗಳು ಹೊರಹೋಗಲು ಹಾಗೂ ಧಾತು (ಸಪ್ತಧಾತು) ಪುಷ್ಟಿಯಾಗಲು ಸಹಾಯವಾಗುವುದು. ಈ ರೋಗಿಗಳಿಗೆ ರಕ್ತಮೋಕ್ಷಣ ಕ್ರಿಯೆಯನ್ನು ಮಾಡಿಸಬೇಕೆಂದು ಕೆಲವರು ವಾದಿಸಿದರೆ ಇನ್ನು ಕೆಲವರು ಮೊದಲೇ ಅಶಕ್ತನಿದ್ದ ರೋಗಿಗೆ ರಕ್ತಮೋಕ್ಷಣ ಮಾಡಿಸಬಾರದು ಹಾಗೂ ಆ ರಕ್ತವು ರೋಗವನ್ನು ಹರಡಲು ಕಾರಣವಾಗುವುದರಿಂದ ಮತ್ತು ಅದರ ವಿಸರ್ಜನೆಗೆ ಕೂಡ ಸಮಸ್ಯಾತ್ಮಕವಾದ್ದರಿಂದ ಕೂಡದು ಎನ್ನುವರು. ಹೀಗೆ ಪಂಚಕರ್ಮ ವಿಧಾನಗಳಿಂದ ದೇಹವನ್ನು ಶುದ್ಧಗೊಳಿಸಿದ ನಂತರ ರಸಾಯನಗಳನ್ನು ಪ್ರಯೋಗಿಸಿದರೆ ಅವುಗಳು ರೋಗಪ್ರತಿರೋಧಕ ಶಕ್ತಿಯನ್ನು ಹೆಚ್ಚಿಸಲು ಶಕ್ತವಾಗುವವು.

೭. ನಿತ್ಯ ನೆಲ್ಲಿಕಾಯಿಯ ಚೂರ್ಣವನ್ನು ಬೆಳಿಗ್ಗೆ ಇಲ್ಲವೆ ಸಾಯಂಕಾಲ ಕೊಡಬೇಕು. ಇದರಿಂದ ಸೌಮ್ಯ ವಿರೇಚನವಾಗಿ ಅಶುದ್ಧಾಂಶಗಳು ಹೊರಹೋಗಲು ಸಾಧ್ಯವಾಗುವುದು.

೮. ಅಮೃತಸತ್ವ ೫೦೦ ಮಿಲಿಗ್ರಾಂ-ನಿತ್ಯ ೩ ಸಾರೆ ತೆಗೆದುಕೊಳ್ಳುವುದು ಒಳ್ಳೆಯದು.

೯. ಶತಾವರಿ ಇಲ್ಲವೆ ಕೂಷ್ಮಾಂಡ ಪಾಕವನ್ನು ನಿತ್ಯ ರಾತ್ರಿ ಹಾಲಿನೊಡನೆ ಕೊಡಬೇಕು.

೧೦. ವಂಗಭಸ್ಮವನ್ನು ೧೦೦ ಮಿಲಿಗ್ರಾಂನಂತೆ ದಿನಕ್ಕೆ ೨ ಸಾರೆ ಕೊಡಬೇಕು. ಇದು ಲೈಂಗಿಕ ರೋಗಗಳಲ್ಲಿ ಚೆನ್ನಾಗಿ ಕೆಲಸಮಾಡುವುದಲ್ಲದೆ ರಸಾಯನವೂ ಹೌದು.

೧೧. ಅಭ್ರಕ ಭಸ್ಮ (ಶತಪುಟಿ) ೧೦೦ ಮಿಲಿಗ್ರಾಂ ದಿನಕ್ಕೆ ೨ ಸಾರೆ. ಇದು ಪುಪ್ಪುಸ ಕ್ಷಯಬಾರದಂತೆ ತಡೆಯುವುದು ಹಾಗೂ ಶಕ್ತಿದಾಯಕ.

೧೨. ಸುವರ್ಣಯುಕ್ತ ಮಕರಧ್ವಜ, ಸುವರ್ಣ ಮಾಲಿನಿ ವಸಂತ, ವಸಂತ ಕುಸುಮಾಕರ ಮೊದಲಾದ ಸ್ವರ್ಣಭಸ್ಮಯುಕ್ತ ಔಷಧಗಳನ್ನು ರೋಗಿಯ ಬಲವನ್ನೂ ರೋಗ ನಿರೋಧಕ ಶಕ್ತಿಯನ್ನೂ ಹೆಚ್ಚಿಸುವುದಕ್ಕಾಗಿ ಅವರವರ ಪ್ರಕೃತಿಯನ್ನು ನೋಡಿ ಯೋಜಿಸಬೇಕು.

ಜೀವನೀಯಗಣದಲ್ಲಿ ಹೇಳಿದ ಔಷಧಿಗಳು, ವಯಃ ಸ್ಥಾಪನದ್ರವ್ಯಗಳು, ಬಲ್ಯ ಹಾಗೂ ವೃಷ್ಯ ಔಷಧಿಗಳಾದ ಬಲಾ, ವಿದಾರಿಕಂದ, ಯಷ್ಟಿಮಧು, ಅಶ್ವಗಂಧ, ಜೀವಂತಿ, ಶಿಲಾಜಿತು ಮುಂತಾದವುಗಳನ್ನು ಕೊಡಬಹುದು.

ಭೈಷಜ್ಯ ರತ್ನಾವಳಿಯಲ್ಲಿ ಹೇಳಿದ ಶಿಲಾಜತ್ವಾದಿ ಲೋಹ, ಕ್ಷಯಕೇಸರಿ, ಹೇಮಗರ್ಭ ಪೋಟಲಿ ರಸಗಳನ್ನು ಮತ್ತು ಪ್ರವಾಳ, ಮುಕ್ತಾಭಸ್ಮ ವಜ್ರ ಭಸ್ಮಗಳನ್ನು ಅವಶ್ಯಕತೆಗನುಸರಿಸಿ ಕೊಡಬೇಕು.

## ಪಥ್ಯಾಪಥ್ಯ

೧. ಆಹಾರ- ಸಾತ್ವಿಕ ಮಿತಾಹಾರ ಸೇವನೆ, ಅನ್ನ, ಪೇಯಗಳು, ಹಣ್ಣುಗಳು, ಹಸಿರು ಕಾಯಿಪಲ್ಯಗಳು, ಬೇಯಿಸಿದ ಮಾಂಸ ಹೀಗೆ ಸಮತೋಲನದ ಆಹಾರ ಪದಾರ್ಥಗಳನ್ನು ಕೊಡಬೇಕು. ಬೇಯಿಸದ ತತ್ತಿ, ಮಾಂಸ, ಮೀನು ಕೊಡಬಾರದು. ಶುದ್ಧೀಕರಿಸಿದ ಹಾಲನ್ನು ಕುಡಿಯಲು ಕೊಡಬಾರದು. ಅಶುಚಿಯಾದ ಸ್ಥಳದಲ್ಲಿ ಏನೂ ತಿನ್ನಬಾರದು. ಪ್ರವಾಸ ಇಲ್ಲವೆ ಬೇರೆಡೆಗೆ ಹೋದಾಗ ತುಂಬ ಎಚ್ಚರಿಕೆಯಿಂದ ನೀರು-ಆಹಾರಗಳನ್ನು ಸೇವಿಸಬೇಕು. ಪ್ರೋಟೀನ್‌ಯುಕ್ತ ಆಹಾರ ಪದಾರ್ಥಗಳನ್ನೇ ಹೆಚ್ಚಾಗಿ ಸೇವಿಸಬೇಕು. ಪುರುಷರಿಗೆ ೨೭೦೦ ಕ್ಯಾಲರಿ ನಿತ್ಯ ಆಹಾರಬೇಕಾದರೆ ಸ್ತ್ರೀಯರಿಗೆ ೨೩೦೦ ಕ್ಯಾಲರಿಗಳು ಬೇಕು.

**ವಿಹಾರ:** ಮನಸ್ಸಿಗೆ ಕ್ಷೋಭೆಯಾಗದಂತೆ ಇರಬೇಕು. ಸದಾಚಾರ, ಬ್ರಹ್ಮಚರ್ಯ (ಅಷ್ಟಮೈಥುನ ತ್ಯಾಗ) ಪಾಲನೆ ಮಾಡಬೇಕು. ಸ್ವಸ್ಥವೃತ್ತದಲ್ಲಿ ಹೇಳಿದಂತೆ ಆಹಾರ-ವಿಹಾರಗಳನ್ನು ಅನುಸರಿಸ ಬೇಕು. ಜೀವನದಲ್ಲಿ ನಿರುತ್ಸಾಹ ಬೇಡ. ಲಘು ಪ್ರವಾಸ ಮಾಡುತ್ತಿರಬೇಕು. ನಿತ್ಯದ ಕೆಲಸಗಳಿಗೆ ವ್ಯತ್ಯಯಬೇಡ. ಸಾಕಷ್ಟು ಮನರಂಜನೆ ಬೇಕು. ಅಲ್ಪ ದೈಹಿಕ ಶ್ರಮ ಅವಶ್ಯ. 'ನಾನು ಏಡ್ಸ್‌ರೋಗಿ, ನನಗೆ ಗುಣವಾಗುವುದಿಲ್ಲ' ಎಂಬುದನ್ನು ಸದಾ ಚಿಂತಿಸದೆ ಇರುವಷ್ಟು ಕಾಲ ಚೆನ್ನಾಗಿರಲು ಪ್ರಯತ್ನಿಸಿ. ನಿತ್ಯ ಯೋಗಾಸನ-ಪ್ರಾಣಾಯಾಮ-ಧ್ಯಾನಗಳನ್ನು ಮಾಡಿ. ಪರಮಾತ್ಮನಲ್ಲಿ ನಂಬಿಕೆ ಇಡಿ. ಇವನ್ನೆಲ್ಲ ಪಾಲಿಸಿದರೆ ಚರಕನು ಹೇಳಿದಂತೆ ವ್ಯಕ್ತಿಯು ನೂರು ವರ್ಷಗಳವರೆಗೆ ಸದೃಢವಾಗಿ ಬದುಕಬಹುದು. ಇದೇ ಮಾತನ್ನು ಅಥರ್ವವೇದದಲ್ಲಿಯೂ ಹೇಳಲಾಗಿದೆ.

ಏಡ್ಸ್‌ದ ಕೊನೆ ಹಂತದಲ್ಲಿರುವ ರೋಗಿ ಓಜ ಕ್ಷಯದ ಅವಸ್ಥೆಯಲ್ಲಿರುತ್ತಾನೆ. ಆಗ ಅವನಲ್ಲಿ ಶೋಷದ ಎಲ್ಲ ಲಕ್ಷಣಗಳೂ ಇರಬಹುದಾಗಿದೆ. ಈ ಹಂತ ಚಿಕಿತ್ಸೆಗೆ ಅಸಾಧ್ಯವಾದುದು. ಹೀಗಾಗಿ ಅವನನ್ನು ಸಂಪೂರ್ಣ ರೋಗಮುಕ್ತನನ್ನಾಗಿ ಮಾಡುವುದು ತುಂಬ ಕಠಿಣ. ಆದರೆ ರೋಗಿಯು ಬದುಕಿರುವವರೆಗೆ ಚಿಕಿತ್ಸೆಯನ್ನು ಮಾಡುತ್ತಿರಬೇಕಾದುದು ವೈದ್ಯನ ಕರ್ತವ್ಯ. ಮತ್ತೆ ಹೀಗೆ ಮಾಡುತ್ತಿರುವಾಗಲೇ ಒಂದು ಒಳ್ಳೆಯ ಔಷಧಿ ದೊರಕಿ ರೋಗ ನಿವಾರಣೆಯಾಗಬಾರದೇಕೆ? ಅಷ್ಟೊತ್ತಿಗೆ ಪ್ರಕೃತಿಯೇ ಅದಕ್ಕೊಂದು ಸೃಷ್ಟಿನಿಯಮದ ಪ್ರಕಾರ ಪರಿಹಾರ ಒದಗಿಸಬಾರದೇಕೆ?

## ಏಡ್ಸ್ ಹರಡದಂತೆ ಏನು ಮಾಡಬೇಕು?

೧. ಜನಜಾಗೃತಿ-ಶಿಕ್ಷಣ-ಪತ್ರಿಕೆಗಳಲ್ಲಿ ಲೇಖನ-ಜಾಹೀರಾತುಗಳು ಆಕಾಶವಾಣಿ, ದೂರದರ್ಶನ ಗಳಲ್ಲಿ ಪದೇಪದೇ ವಿಷಯದ ಬಗ್ಗೆ ಜನಸಾಮಾನ್ಯರಿಗೆ ತಿಳಿಹೇಳಿ ಈ ರೋಗದ ಬಗ್ಗೆ ಹೇಗೆ ಎಚ್ಚರದಿಂದಿರಬೇಕು ಎನ್ನುವುದನ್ನು ಬಿಂಬಿಸಬೇಕು. ದಿನನಿತ್ಯ ಬಳಸುವ ಸಾಬೂನು,

ಟೂಥ್‌ಪೇಸ್ಟುಗಳ ಹೊದಿಕೆಯ ಮೇಲೆ ಏಡ್ಸ್‌ರೋಗದ ಬಗ್ಗೆ ಎಚ್ಚರಿಕೆಯ ಮಾತನ್ನು ಪ್ರಕಟಿಸುವಂತೆ ಶಾಸನ ತರಲು ಸರಕಾರವನ್ನು ಒತ್ತಾಯಿಸಬೇಕು.

೨. ನಿಮ್ಮ ಬ್ಲೇಡುಗಳನ್ನು ನೀವೇ ಉಪಯೋಗಿಸಬೇಕೇ ವಿನಾ ಬೇರೆಯವರಿಗೆ ಕೊಡಬೇಡಿ ಹಾಗೂ ಬೇರೆಯವರ ಬ್ಲೇಡನ್ನು ಉಪಯೋಗಿಸಬೇಡಿ. ಬೇರೆಯವರು ಉಪಯೋಗಿಸಿದ ಚಾಕು, ಕತ್ತರಿ, ಸೂಜಿಗಳನ್ನು ೭೦ರಿಂದ ೧೦೦ ಸೆಂಟಿಗ್ರೇಡ್ ಬಿಸಿಯಲ್ಲಿ ಕುದಿಸಿಯೇ ಉಪಯೋಗಿಸಿರಿ.

೩. ಈಗಾಗಲೇ ಏಡ್ಸ್‌ರೋಗವಿದ್ದ ಸ್ತ್ರೀಯರು ಗರ್ಭಿಣಿಯರಾಗದಂತೆ ನೋಡಿಕೊಳ್ಳಬೇಕು.

೪. ಟ್ರಕ್ ಡ್ರೈವರುಗಳು, ಕ್ಲೀನರ್ಸ್, ಮಿಲ್ಟ್ರಿಜನ, ಪರಸ್ಥಳಗಳಲ್ಲೆ ಹೆಚ್ಚಾಗಿ ವಾಸಿಸುವ ಕೆಲಸಗಾರರು, ವ್ಯವಹಾರಕ್ಕೆಂದು, ಮೇಲಿಂದ ಮೇಲೆ ದೇಶ-ವಿದೇಶಗಳನ್ನು ಸುತ್ತುತ್ತಿರುವವರು, ಈಗಾಗಲೇ ಲೈಂಗಿಕ ರೋಗ ಹೊಂದಿದವರು ವೇಶ್ಯೆಯರು, ವಿಟರು, ಕರುವೆಣ್ಣುಗಳು-ಇವರೆನ್ನೆಲ್ಲ ಮುಂಜಾಗ್ರತೆಯ ಕ್ರಮವಾಗಿ ಎಲಿಸಾ ರಕ್ತಪರೀಕ್ಷೆಗೆ ಒಳಪಡಿಸಬೇಕು.

೫. ಅನೈಸರ್ಗಿಕ ಲೈಂಗಿಕ ಕ್ರಿಯೆ ಬೇಡ.

೬. ಕೇವಲ ಸಿಹಿಮುತ್ತಿನಿಂದ ಏಡ್ಸ್ ಹರಡುವುದಿಲ್ಲ. ಆದರೆ ಆಳವಾದ, ಪರಸ್ಪರರ, ನಾಲಿಗೆ ಕಚ್ಚಿ ಹಿಡಿದು ಮುದ್ದಿಸುವುದರಿಂದ ಬಾಯಿಯ ಶ್ಲೇಷ್ಮತ್ವಚೆಯ ಮ[illegible] ರೋಗ ಅಂಟುವ ಸಾಧ್ಯತೆ ಇದೆ.

೭. ಉತ್ತಮಗುಣಮಟ್ಟದ ಕಾಂಡೋಮ್ಸ ಉಪಯೋಗಿಸುವುದರಿಂದ.

೮. ಆ್ಯಂಟಿ ಎಚ್.ಐ.ವಿ.ವೈರಸ್ ವ್ಯಾಕ್ಸೀನ್ ಬರುವವರೆಗೆ ಈ ಏಡ್ಸ್ ರೋಗಕ್ಕೆ ಸದ್ಯ ಇರುವ ಒಂದೇ ಒಂದು ಉತ್ತಮ ಉಪಾಯವೆಂದರೆ ಅದು ಬಾರದಂತೆ ನೋಡಿಕೊಳ್ಳುವುದು.

೯. ಟೆಲಿಫೋನ್, ಬಾಗಿಲ ಹಿಡಿಕೆಗಳು, ಪಾಯಖಾನೆ ಸೀಟು, ವಾಯು ನಿಯಂತ್ರಣಗಳು, ಸೊಳ್ಳೆಗಳು, ಹಾವುಗಳು, ನೊಣಗಳು, ಜೊಂಡಿಗ, ಬೆಕ್ಕು, ನಾಯಿ, ಮೊಲಗಳಿಂದ, ಸೀನುಗಳಿಂದ ಈ ರೋಗ ಹರಡದು.



*Printed & Published by S.K. KATOTE on behalf of Loka Shikshana Trust at Samyukta Karnataka Press, Koppikar Road, Hubli-580 020 (Ph: 364303)*

*Managing Editor:* **K. SHAMARAO** *Editor:* **N.V. JOSHI**

**RNI. Regd No. 3633/57**

